# ಸಾಹಿತ್ಯ ವಾರ್ಷಿಕ

# 1983



ಬೆಂಗಳೂರು ವಿಶ್ವವಿದ್ಯಾಲಯ
ಬೆಂಗಳೂರು



ಕನ್ನಡ ಅಧ್ಯಯನ ಕೇಂದ್ರಮಾಲೆ 52

# ಸಾಹಿತ್ಯ ವಾರ್ಷಿಕ 1983



ಸಂಪಾದಕರು

ಜಿ. ಎಸ್. ಶಿವರುದ್ರಪ್ಪ

ಸಹಾಯಕ ಸಂಪಾದಕರು

ಎನ್. ವಿ. ವಿಮಲ

ಸಹಕಾರ

ಬೆಂಗಳೂರು ವಿಶ್ವವಿದ್ಯಾಲಯ
ಗ್ರಂಥಭಂಡಾರದ ಅಧಿಕಾರವರ್ಗ



ಪ್ರಸಾರಾಂಗ

ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು

SAHITYA VARSHIKA 1983 (Year Book of Literature, 1983) A review of Kannada books on literature published in 1983
Edited by Dr. G. S. Shivarudrappa
(Centre of Kannada Studies Series No. 52)
Published by Prasaranga, Bangalore University, Bangalore
Pp.281 + xvi, 1987

ಪ್ರಧಾನ ಸಂಪಾದಕರು
ಡಾ. ಜಿ. ಎಸ್. ಶಿವರುದ್ರಪ್ಪ





ಪ್ರಕಾಶಕರು :
ಕೆ. ಮರುಳಸಿದ್ಧಪ್ಪ
ನಿರ್ದೇಶಕರು, ಪ್ರಸಾರಾಂಗ
ಬೆಂಗಳೂರು ವಿಶ್ವವಿದ್ಯಾಲಯ
ಬೆಂಗಳೂರು - 560 056

ಪ್ರಕಟಣ ಸಹಾಯಕ :
ಬಿ. ಕೆ. ಕರೀಗೌಡ

ಬೆಲೆ : 11-00

ಮುದ್ರಣ :
ಬೆಂಗಳೂರು ವಿಶ್ವವಿದ್ಯಾಲಯ ಮುದ್ರಣಾಲಯ, ಬೆಂಗಳೂರು

# ಮೊದಲ ಮಾತು

ಬೆಂಗಳೂರು ವಿಶ್ವವಿದ್ಯಾಲಯದ ಪ್ರಸಾರಾಂಗ ಶಿಕ್ಷಣದಲ್ಲಿ ಕನ್ನಡ ಮಾಧ್ಯಮದ ಅವಶ್ಯಕತೆಯನ್ನು ಪೂರೈಸುವ ಸಲುವಾಗಿ ಈಗಾಗಲೇ ಪಠ್ಯಪುಸ್ತಕಗಳನ್ನು ಸಿದ್ಧಪಡಿಸಿ ಪ್ರಕಟಿಸುತ್ತಿದೆ. ಇದರ ಜೊತೆಗೆ ವಿಶ್ವವಿದ್ಯಾಲಯವು ಸಾರ್ವಜನಿಕರಿಗಾಗಿ ವರ್ಷಾದ್ಯಂತವು ಏರ್ಪಡಿಸುವ ಪ್ರಚಾರೋಪನ್ಯಾಸಗಳನ್ನೂ ವಿಶೇಷೋಪನ್ಯಾಸಗಳನ್ನೂ ಪುಸ್ತಕ ರೂಪದಲ್ಲಿ ಪ್ರಕಟಿಸುತ್ತಿದೆ. ಈ ಪಂಕ್ತಿಗೆ ಇದೀಗ ಬೆಂಗಳೂರು ವಿಶ್ವವಿದ್ಯಾಲಯದ ವಿವಿಧ ಅಧ್ಯಯನ ಶಾಖೆಗಳು ಕೈಗೊಳ್ಳುವ ವೈಯಕ್ತಿಕ ಹಾಗೂ ಸಾಮೂಹಿಕ ಸಂಶೋಧನಾತ್ಮಕ ವ್ಯವಸಾಯಕ್ಕೆ ಗ್ರಂಥರೂಪದ ಅಭಿವ್ಯಕ್ತಿಯನ್ನು ಕೊಡುವ ಕಾರ್ಯವು ಸೇರುತ್ತಿದೆ. ಇದರಿಂದಾಗಿ ವಿಶ್ವವಿದ್ಯಾಲಯದ ಒಂದೊಂದು ಅಧ್ಯಯನ ಶಾಖೆಯ ಅಧ್ಯಾಪಕರ ಸಂಶೋಧನಾತ್ಮಕ ಪ್ರವೃತ್ತಿಗೆ ತಕ್ಕಮಟ್ಟಿನ ಪ್ರೇರಣೆಯೂ ದೊರೆಯುತ್ತಿದೆ. ಈ ರೀತಿ ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಕನ್ನಡ ಅಧ್ಯಯನ ಕೇಂದ್ರ ಇಂಥ ಕೃತಿಗಳನ್ನು ಪ್ರಕಟಣೆಗೆ ಸಿದ್ಧಪಡಿಸುತ್ತಿರುವುದು ಪ್ರಶಂಸನೀಯವಾಗಿದೆ. ಪ್ರತಿಯೊಂದು ವಿಭಾಗವೂ ಹೀಗೆ ತನ್ನ ವಿಭಾಗದ ಹೆಸರಿನಲ್ಲಿ ಕೃತಿಗಳನ್ನು ಬೆಂಗಳೂರು ವಿಶ್ವವಿದ್ಯಾಲಯದ ಪ್ರಸಾರಾಂಗದ ಮೂಲಕ ಹೊರತರಲು ಮುಂದೆ ಬರುವುದೆಂದು ನಂಬಿದ್ದೇನೆ.

ವಿಶ್ವವಿದ್ಯಾಲಯದ ನಿಜವಾದ ಹಿರಿಮೆ ಅದರ ಬೌದ್ಧಿಕ ಸಾಧನೆ ಹಾಗೂ ಅಭಿವ್ಯಕ್ತಿಗಳಲ್ಲಿದೆ. ಆದರೆ ಈ ಕಾರ್ಯದಲ್ಲಿ ಆತುರ ಸಲ್ಲದು ; ವಿಶ್ವವಿದ್ಯಾಲಯ ಪ್ರಕಟಿಸುವ ಕೃತಿಗಳು ಅದರ ಮತ್ತು ವಿವಿಧ ಅಧ್ಯಯನ ವಿಭಾಗಗಳ ಘನತೆಯನ್ನು ಕಾಯ್ದುಕೊಳ್ಳುವಂತಿರಬೇಕು. ಈ ಕಾರ್ಯದಲ್ಲಿ ನಾವು ಹೊರತರುವ ಕೃತಿಗಳ ಸಂಖ್ಯೆ ಮುಖ್ಯವಲ್ಲ ; ಗಾತ್ರ ಮುಖ್ಯವಲ್ಲ ; ಗುಣ ಮುಖ್ಯ.

ಕನ್ನಡ ಅಧ್ಯಯನ ಕೇಂದ್ರದ ಅಧ್ಯಾಪಕರು ಹಾಗೂ ಇತರ ಕಾಲೇಜುಗಳ ಅಧ್ಯಾಪಕರು ಸೇರಿ ಸಿದ್ಧಪಡಿಸಿರುವ ಈ 'ಸಾಹಿತ್ಯ ವಾರ್ಷಿಕ 1983' ಕನ್ನಡದಲ್ಲಿ 1983ರಲ್ಲಿ ಪ್ರಕಟವಾದ ಸಾಹಿತ್ಯ ಕೃತಿಗಳನ್ನು ಕುರಿತ ವಿಮರ್ಶಾತ್ಮಕ ಸಮೀಕ್ಷೆಯಾಗಿದೆ. ವರ್ಷವರ್ಷವೂ ಈ ಬಗೆಯ 'ಸಾಹಿತ್ಯ ವಾರ್ಷಿಕ'ವನ್ನು ಸಿದ್ಧಗೊಳಿಸಿ ಪ್ರಕಟಿಸುವ ಈ ಯೋಜನೆ, ಕನ್ನಡ ಸಾಹಿತ್ಯ ವಿಮರ್ಶೆಯ ಬೆಳವಣಿಗೆಯಲ್ಲಿ ಮೌಲಿಕವಾದ ಪಾತ್ರವನ್ನು ವಹಿಸುವುದೆಂಬ ನಂಬಿಕೆ ಇದೆ. ಈ ಕಾರ್ಯಕ್ಕಾಗಿ ಕನ್ನಡ ಅಧ್ಯಯನ ಕೇಂದ್ರವನ್ನು ಅಭಿನಂದಿಸುತ್ತೇನೆ

ಡಿ. ಎಂ. ನಂಜುಂಡಪ್ಪ
ಕುಲಪತಿ
ಬೆಂಗಳೂರು ವಿಶ್ವವಿದ್ಯಾಲಯ

## ಪ್ರಕಾಶಕರ ಮಾತು

ಕನ್ನಡ ಸಾಹಿತ್ಯವನ್ನು ಅಭಿವೃದ್ಧಿಪಡಿಸುವ ಸದುದ್ದೇಶದಿಂದ ಬೆಂಗಳೂರು ವಿಶ್ವವಿದ್ಯಾಲಯದ ಪ್ರಸಾರಾಂಗವು ಪಠ್ಯ ಹಾಗೂ ಪಠ್ಯೇತರ ಹೊತ್ತಿಗೆಗಳನ್ನು ಪ್ರಕಟಿಸುವುದರ ಜೊತೆಗೆ ಇತರ ವಿಷಯದಲ್ಲಿ ಪ್ರಸಿದ್ಧರಾದ ವಿದ್ವಾಂಸರಿಂದ ಗ್ರಂಥಗಳನ್ನು ಸಿದ್ಧಪಡಿಸಿ ಪ್ರಕಟಿಸುವ ಕಾರ್ಯವನ್ನು ನಿರ್ವಹಿಸುತ್ತಿದೆ. ಆಧುನಿಕ ಕನ್ನಡ ಸಾಹಿತ್ಯದ ಆವರಣಕ್ಕೆ ಅಗತ್ಯವಾದ ಹಾಗೂ ಜನಸಾಮಾನ್ಯರಿಗೆ ಜ್ಞಾನ ವನ್ನು ನೀಡಬಲ್ಲ ಸಾಹಿತ್ಯ, ಕಲೆ, ವಿಜ್ಞಾನ, ತತ್ವಶಾಸ್ತ್ರ, ಚರಿತ್ರೆ, ಧರ್ಮ, ನೀತಿ, ಸಂಸ್ಕೃತಿ, ಜಾನಪದ, ಸಾಮಾಜಿಕ ಹಾಗೂ ಮಾನವಿಕಶಾಸ್ತ್ರ ಮುಂತಾದ ವಿಷಯ ಗಳನ್ನು ಕುರಿತು ಪ್ರಸಾರಾಂಗ ಈಗಾಗಲೇ ಅನೇಕ ಹೊತ್ತಿಗೆಗಳನ್ನು ಪ್ರಕಟಿಸಿದೆ. ಬರಲಿರುವ ವರ್ಷಗಳಲ್ಲಿ ಇಂಥ ಹಲವಾರು ವಿಷಯಗಳ ಮೇಲೆ ಮಹತ್ತರವಾದ ಹೊತ್ತಿಗೆಗಳನ್ನು ಪ್ರಕಟಿಸಬೇಕೆಂಬ ಉದ್ದೇಶವನ್ನು ಪ್ರಸಾರಾಂಗ ಹೊಂದಿದೆ.

ಪ್ರಸ್ತುತ ಕೃತಿ, 'ಸಾಹಿತ್ಯ ವಾರ್ಷಿಕ 1983' ಕನ್ನಡ ಅಧ್ಯಯನ ಕೇಂದ್ರದ ಅಧ್ಯಾಪಕರು ಹಾಗೂ ಇತರ ಕಾಲೇಜುಗಳ ಅಧ್ಯಾಪಕರು ಸೇರಿ ಸಿದ್ಧಪಡಿಸಿರುವ ವಿಮರ್ಶಾ ಸಂಕಲನ. 1983ರಲ್ಲಿ, ಕನ್ನಡದಲ್ಲಿ ಪ್ರಕಟವಾದ ಸಾಹಿತ್ಯ ಕೃತಿಗಳನ್ನು ಕುರಿತು ವಿಮರ್ಶಾತ್ಮಕವಾಗಿ ಸಮೀಕ್ಷಿಸಲಾದ ಕೃತಿ ಇದಾಗಿದೆ. ವರ್ಷವರ್ಷವೂ ಈ ಬಗೆಯ 'ಸಾಹಿತ್ಯವಾರ್ಷಿಕ'ವನ್ನು ಕನ್ನಡ ಅಧ್ಯಯನ ಕೇಂದ್ರವು ಸಿದ್ಧಗೊಳಿಸು ತ್ತಿರುವುದು ತುಂಬಾ ಸ್ವಾಗತಾರ್ಹವಾದ ಸಂಗತಿ. ಈ ಕೃತಿಯನ್ನು ಸಿದ್ಧಪಡಿಸಿ, ಕನ್ನಡ ಅಧ್ಯಯನ ಕೇಂದ್ರ ಮಾಲೆಗೆ, ಪ್ರಸಾರಾಂಗದ ಪ್ರಕಟಣೆಗೆ ವರ್ಷವರ್ಷವೂ ನೆರವು ನೀಡುತ್ತಾ ಬರುತ್ತಿರುವ ಡಾ॥ ಜಿ. ಎಸ್. ಶಿವರುದ್ರಪ್ಪನವರಿಗೂ, ಇನ್ನಿತರ ಲೇಖಕರಿಗೂ ವಿಶ್ವವಿದ್ಯಾಲಯದ ಪ್ರಸಾರಾಂಗದ ಪರವಾಗಿ ನನ್ನ ವಂದನೆಗಳು. ಈ ಕೃತಿಯನ್ನು ಸಕಾಲದಲ್ಲಿ ಮುದ್ರಿಸಿಕೊಟ್ಟ ವಿಶ್ವವಿದ್ಯಾಲಯದ ಮುದ್ರಣಾ ಲಯದ ಸಿಬ್ಬಂದಿ ಅಭಿನಂದನೆಗೆ ಪಾತ್ರರು.

**ಕೆ. ಮರುಳಸಿದ್ದಪ್ಪ**
ನಿರ್ದೇಶಕರು
ಪ್ರಸಾರಾಂಗ

# ಮುನ್ನುಡಿ

**ಸಾಹಿತ್ಯ ವಾರ್ಷಿಕ—1983**

ಇದು 1983 ನೆಯ ಸಾಲಿನಲ್ಲಿ ಪ್ರಕಟವಾದ ಸಾಹಿತ್ಯ ಕೃತಿಗಳ ಒಂದು ವಿಮರ್ಶಾತ್ಮಕ ಸಮೀಕ್ಷೆ. ಇದನ್ನು ನಡೆಯಿಸಿದವರು ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರದ ಮತ್ತು ಇತರ ಕಾಲೇಜುಗಳ ಅಧ್ಯಾಪಕರು. ಇದೊಂದು ಸಾಮೂಹಿಕ ಪ್ರಯತ್ನ. ಈ ಪ್ರಯತ್ನ ಪ್ರತಿವರ್ಷವೂ ಮುಂದು ವರಿಯುತ್ತದೆ.

ಹೀಗೆ ಪ್ರತಿವರ್ಷವೂ ಕನ್ನಡದ ವಿವಿಧ ಸಾಹಿತ್ಯ ಪ್ರಕಾರಗಳಲ್ಲಿ ಪ್ರಕಟವಾಗುವ ಕೃತಿಗಳ ವಿಮರ್ಶಾತ್ಮಕ ಸಮೀಕ್ಷೆಯನ್ನು ಸಿದ್ಧಪಡಿಸಿ ಪ್ರಕಟಿಸುವುದು, ಈ ಯೋಜನೆಯ ಉದ್ದೇಶವಾಗಿದೆ.

ಇದು ಸುಲಭವಾದ ಕಾರ್ಯವೇನಲ್ಲ. ಬಹುಸಂಖ್ಯೆಯಲ್ಲಿ ವರ್ಷ ವರ್ಷವೂ ಪ್ರಕಟವಾಗುವ ಸಾಹಿತ್ಯ ಕೃತಿಗಳ ಜಾಡು ಹಿಡಿದು ಗುರುತಿಸುವುದು, ಅನಂತರ ಅವುಗಳನ್ನೆಲ್ಲ ಒಂದೆಡೆ ಕೂಡಿಸಿಕೊಳ್ಳುವುದು ಮೊದಲನೆಯ ಕಷ್ಟ. ಅವುಗಳನ್ನು ತೀರ ಮುಖಾಮುಖಿ ನಿಂತು ವಿಮರ್ಶಿಸುವುದು ಎರಡನೆಯ ಕಷ್ಟ. ಕೃತಿಗಳಿಗೆ, ಕೃತಿಕಾರರಿಗೆ ತೀರ ಸಮೀಪದಲ್ಲಿಯೆ ನಿಂತು ಅಂದಂದಿನ ಕೃತಿಗಳನ್ನು ಅಂದಂದೇ ವಿಮರ್ಶಿಸುತ್ತೇವೆಂದು ಹೊರಡುವುದು ಪ್ರಿಯವಾದ ಕೆಲಸವೇನಲ್ಲ. ಆದರೂ ಅಗತ್ಯವಾಗಿ ಮಾಡಬೇಕಾದ ಕಾರ್ಯ; ತಪ್ಪೋ ಒಪ್ಪೋ ಯಾರಾದರೂ ಮಾಡಲೇ ಬೇಕಾದ ಕಾರ್ಯ. ಅದನ್ನು ನಾವು ಮಾಡಲು ಹೊರಟಿದ್ದೇವೆ. ನಾವು ಹೊರಟಿರುವ ಉದ್ದೇಶ ಒಳ್ಳೆಯದು—ಎಂಬುದೇ ನಮ್ಮ ಬೆಂಬಲಕ್ಕೆ ಇರುವ ಧೈರ್ಯ.

ಇದು ಆಯಾ ವರ್ಷ ಪ್ರಕಟವಾಗುವ ಪುಸ್ತಕಗಳನ್ನು ಪಟ್ಟಿಮಾಡುವ ಅಥವಾ ವಿವರಣಾತ್ಮಕ ಸೂಚಿಯನ್ನು ಸಿದ್ಧಪಡಿಸುವ ಪ್ರಾಥಮಿಕ ನೆಲೆಯಲ್ಲಿ ಪರ್ಯವಸಾನ ವಾಗುವ ಸ್ವರೂಪದ್ದಲ್ಲ. ಆಗಲೇ ಹೇಳಿರುವಂತೆ ಆಯಾ ವರ್ಷದ ಸಾಹಿತ್ಯ ಕೃತಿಗಳನ್ನು ಸಮೀಕ್ಷಿಸುವ ಸ್ವರೂಪದ್ದು. ಇಲ್ಲಿರುವ ಒಂದೊಂದು ಸಾಹಿತ್ಯ ಪ್ರಕಾರದ ಪರಿಶೀಲನೆಯಲ್ಲಿ ಆಯಾ ಲೇಖಕರ ಪರಿಮಿತಿಗಳನ್ನು ಪರಿಶೀಲನ ಸಾಮರ್ಥ್ಯದ ತಾರತಮ್ಯಗಳನ್ನು ಓದುಗರು ಗುರುತಿಸಬಹುದು. ಆಯಾ ವಿಭಾಗದ ಸಮೀಕ್ಷೆಯಲ್ಲಿ ವ್ಯಕ್ತವಾಗಿರುವ ಅಭಿಪ್ರಾಯಗಳಿಗೆ ಆಯಾ ಲೇಖಕರು ಜವಾಬ್ದಾರರು.

ನಾಳೆ, ಕನ್ನಡದಲ್ಲಿ ಯಾವುದೇ ಒಂದು ಸಾಹಿತ್ಯ ಪ್ರಕಾರವನ್ನು ಕುರಿತು ಕೆಲಸ ಮಾಡಲು ತೊಡಗುವವರಿಗೆ ಈ 'ಸಾಹಿತ್ಯ ವಾರ್ಷಿಕ' ಗಳಿಂದಾಗುವ ಪ್ರಯೋಜನ

ಅಷ್ಟಿಷ್ಟಲ್ಲ. ಯಾವ ಯಾವ ವರ್ಷ ಕನ್ನಡದಲ್ಲಿ ಏನೇನು ಕೃತಿಗಳು ಪ್ರಕಟವಾಗಿವೆ. ಸಾಹಿತ್ಯದ ಯಾವ ಯಾವ ಪ್ರಕಾರಗಳಲ್ಲಿ ಏನೇನು ಕೆಲಸ ನಡೆದಿದೆ, ಯಾವ ದೃಷ್ಟಿ-ಧೋರಣೆಗಳು ಅವುಗಳ ಹಿನ್ನೆಲೆಗಿವೆ ಎಂಬುದು ನಾಳಿನ ವಿಮರ್ಶಕರಿಗೆ ಹಾಗೂ ಸಂಶೋಧಕರಿಗೆ ಮೂಲಭೂತ ಸಾಮಗ್ರಿಯಾಗಿ ಇದರಿಂದ ಒದಗುತ್ತದೆ. ಹಾಗೆಯೇ ಪ್ರತಿಯೊಂದು ವರ್ಷದ ಸಾಹಿತ್ಯದ ಸಾಧನೆಗಳನ್ನು ತೌಲನಿಕವಾಗಿ ಅಧ್ಯಯನ ಮಾಡುವವರ ಪಾಲಿಗೆ ಮತ್ತು ಸಾಹಿತ್ಯ ಚರಿತ್ರೆಯ ಲೇಖಕನಿಗೆ ಇದೊಂದು ಋಣದ ಗಣಿಯಾಗುವುದರಲ್ಲಿ ಸಂದೇಹವಿಲ್ಲ.

ಈ ಕಾರ್ಯದಲ್ಲಿ ನಾವು ಕೇವಲ ಸಾಹಿತ್ಯ ಸಂಬಂಧಿಯಾದ ಕೃತಿಗಳನ್ನು ಮಾತ್ರ, ಅದರಲ್ಲೂ 1983 ರಲ್ಲಿ ಮೊದಲ ಮುದ್ರಣವನ್ನು ಕಂಡ ಕೃತಿಗಳನ್ನು ಮಾತ್ರ ಪರಿಶೀಲನೆಗೆ ಎತ್ತಿಕೊಂಡಿದ್ದೇವೆ. ಕನ್ನಡದಲ್ಲಿ ಪ್ರಕಟವಾಗುವ ವೈಜ್ಞಾನಿಕ, ಮಾನವಿಕ, ಶೈಕ್ಷಣಿಕ ಇತ್ಯಾದಿ ಬೇರೆ ಬೇರೆ ವಿಷಯಗಳನ್ನು ಪರಿಗಣಿಸಿಲ್ಲ. ಅದಕ್ಕೆ ಕಾರಣ, ಈ ಕಾರ್ಯದಲ್ಲಿ ತೊಡಗಿರುವ ನಮಗೆ ಸಾಹಿತ್ಯೇತರ ವಿಷಯಗಳನ್ನು ಕುರಿತು ಪರಿಶೀಲಿಸಲು ಅಥವಾ ವಿಮರ್ಶಿಸಲು ಸಾಮರ್ಥ್ಯವಾಗಲೀ, ಅಧಿಕಾರವಾಗಲೀ ಇಲ್ಲ. ಹೀಗಾಗಿ ಕೇವಲ ಸಾಹಿತ್ಯ ಸಂಬಂಧಿಯಾದ ಕೃತಿಗಳ ಪರಿಶೀಲನೆಯನ್ನು ಈ 'ಸಾಹಿತ್ಯ ವಾರ್ಷಿಕ' ದಲ್ಲಿ ಕಾಣಬಹುದು. ಹಾಗೆಯೆ ಇಲ್ಲಿ 1983 ರಲ್ಲಿ ಪ್ರಕಟವಾದ ಎಲ್ಲ ಸಾಹಿತ್ಯ ಸಂಬಂಧಿಯಾದ ಕೃತಿಗಳನ್ನು ಗಮನಿಸಿದ್ದೇವೆ ಎಂದು ಹೇಳುವ ಧೈರ್ಯವಿಲ್ಲ. ಯಾಕೆಂದರೆ, ಆಯಾ ವರ್ಷ ಪ್ರಕಟವಾದ ಸಮಸ್ತ ಸಾಹಿತ್ಯ ಕೃತಿಗಳನ್ನು ಸಕಾಲದಲ್ಲಿ ಗುರುತಿಸಿ ಒಂದೆಡೆ ಕೂಡಿಸುವ ವ್ಯವಸ್ಥೆ ಸಾಧ್ಯವಾಗುತ್ತಿಲ್ಲ. ಅಲ್ಲದೆ 1983 ರಲ್ಲಿ ಪ್ರಕಟವಾದ ಎಷ್ಟೋ ಕೃತಿಗಳು ಕಾರಣಾಂತರದಿಂದ ಕಾಣಲು ದೊರೆಯುವುದಿಲ್ಲ. ಆದರೂ ವಿಶ್ವವಿದ್ಯಾಲಯದ ಗ್ರಂಥ ಭಂಡಾರದ ಅಧಿಕಾರಿಗಳು ನಮಗೆ ಒತ್ತಾಸೆಯಾಗಿ ನಿಂತು ಸಾಧ್ಯವಾದಷ್ಟು ಮಟ್ಟಿಗೆ ಆಯಾ ವರ್ಷ ಪ್ರಕಟವಾಗುವ ಕೃತಿಗಳನ್ನು ದೊರಕಿಸಿಕೊಟ್ಟಿದ್ದಾರೆ. ನಮ್ಮ ಕೋರಿಕೆಯ ಮೇರೆಗೆ, 'ಪ್ರಜಾವಾಣಿ' ಪತ್ರಿಕೆಯವರು ಪ್ರತಿವಾರದ 'ಸಾದರ ಸ್ವೀಕಾರ' ವಿಭಾಗದಲ್ಲಿ, ಸ್ವೀಕಾರವಾದ ಕೃತಿಗಳು ಪ್ರಕಟವಾದ ವರ್ಷವನ್ನು, ಕಾಣಿಸಿ ಈ ಒಂದು ಯೋಜನೆಯಲ್ಲಿ ಸಹಕರಿಸಿದ್ದಾರೆ. ಕನ್ನಡದ ಪ್ರಮುಖ ಪತ್ರಿಕೆಗಳಲ್ಲಿ ಆಗಾಗ ಬಂದ ಪುಸ್ತಕ ವಿಮರ್ಶೆಯೂ ಮತ್ತು ಮೈಸೂರಿನಿಂದ ಪ್ರಕಟವಾಗುವ 'ಗ್ರಂಥಲೋಕ' ಸಹ ನಮ್ಮ ಈ ಪರಿಶೀಲನೆಗೆ ನೆರವಾಗಿದೆ. ಹೀಗೆ ಲೇಖಕರ, ಪ್ರಕಾಶಕರ, ವಿಮರ್ಶಕರ, ಪತ್ರಿಕೆಗಳ ಮತ್ತು ಗ್ರಂಥ ಭಂಡಾರದ ನಿರಂತರ ಸಹಕಾರದಿಂದ ಮಾತ್ರ ಇಂಥ ಯೋಜನೆ ಯಶಸ್ವಿಯಾಗುವ ಸಾಧ್ಯತೆಗಳಿವೆ.

ನಮಗೆ ತಿಳಿದ ಮಟ್ಟಿಗೆ 'ಸಾಹಿತ್ಯ ವಾರ್ಷಿಕ'ದಂತಹ ಯೋಜನೆಯನ್ನು ಬಹುಶಃ ಯಾವ ಒಂದು ಭಾರತೀಯ ವಿಶ್ವವಿದ್ಯಾಲಯವು ಕೈಗೊಂಡಂತೆ ತೋರುವುದಿಲ್ಲ.

ಕನ್ನಡ ವಿಮರ್ಶೆಯ ಬೆಳವಣಿಗೆಯಲ್ಲಿ ಕನ್ನಡ ಅಧ್ಯಯನ ಕೇಂದ್ರವು ಸಕ್ರಿಯವಾಗಿ ಪಾಲುಗೊಳ್ಳುವ ಒಂದು ಅವಕಾಶವನ್ನು ಈ ಯೋಜನೆ ಒದಗಿಸಿದೆ ಎಂದು ನಾವು ಭಾವಿಸಿದ್ದೇವೆ.

ಈ ವರ್ಷದ ಸಂಪುಟದಲ್ಲಿಯೂ ಇತರ ಭಾಷೆಗಳಿಂದ ಕನ್ನಡಕ್ಕೆ ಅನುವಾದ ಗೊಂಡ ಕೃತಿಗಳ ಸಮೀಕ್ಷೆ, ಪ್ರತಿಯೊಂದು ವಿಷಯ ವಿಭಾಗದ ಕೊನೆಯಲ್ಲಿ ಬರುವಂತೆ ನೋಡಿಕೊಳ್ಳಲಾಗಿದೆ. 1983 ರಲ್ಲಿ ಸಾಹಿತ್ಯಕ್ಕೆ ಸಂಬಂಧಪಟ್ಟ ಲೇಖನ ಗಳು ಎಲ್ಲೆಲ್ಲಿ ಪ್ರಕಟವಾಗಿವೆ ಎಂಬ 'ಲೇಖನ ಸೂಚಿ'ಯೊಂದು ಮುಂದುವರಿದಿದೆ.

ಇದುವರೆಗೂ ಪ್ರಕಟವಾದ 'ಸಾಹಿತ್ಯ ವಾರ್ಷಿಕ' ಗಳನ್ನು ಓದಿ, ತುಂಬಾ ಉತ್ಸಾಹದಿಂದ ಹಲವರು ಉಪಯುಕ್ತ ಸಲಹೆಯನ್ನು ಕೊಟ್ಟಿದ್ದಾರೆ. ಸಂಪುಟದಿಂದ ಸಂಪುಟಕ್ಕೆ ಆಗುತ್ತಿರುವ ಸೂಕ್ತವಾದ ತಿದ್ದುಪಡಿ ಮತ್ತು ಮಾರ್ಪಾಡುಗಳು ಇಂಥ ಸಲಹೆಗಳ ಪರಿಣಾಮ. ಇದು ಈ ಯೋಜನೆಯಲ್ಲಿ ಪ್ರಕಟವಾಗುತ್ತಿರುವ ಹದಿಮೂರನೆಯ ಸಾಹಿತ್ಯ ವಾರ್ಷಿಕ.

ಈ ಯೋಜನೆಗೆ ಕನ್ನಡ ಅಧ್ಯಯನ ಕೇಂದ್ರದ ಆಚೆಗಿನ, ಬೆಂಗಳೂರು ವಿಶ್ವವಿದ್ಯಾಲಯದ ಇತರ ಕಾಲೇಜುಗಳ ಅಧ್ಯಾಪಕರ ನೆರವನ್ನು ಪಡೆದುಕೊಳ್ಳುತ್ತ ಇರುವುದು ಒಂದು ವಿಶೇಷ ಸಂಗತಿಯಾಗಿದೆ. ನಮ್ಮ ಕೋರಿಕೆಯನ್ನು ಮನ್ನಿಸಿ ಈ ಯೋಜನೆಯಲ್ಲಿ ನೆರವು ನೀಡಿದ ಎಲ್ಲಾ ಅಧ್ಯಾಪಕರಿಗೂ ನಮ್ಮ ಕೃತಜ್ಞತೆಗಳು.

ಈ ಯೋಜನೆಯನ್ನು ಮುಂದುವರಿಸಿಕೊಂಡು ಹೋಗಲು ಸಹಕರಿಸುತ್ತಿರುವ ಬೆಂಗಳೂರು ವಿಶ್ವವಿದ್ಯಾಲಯದ ಅಧಿಕಾರ ವರ್ಗಕ್ಕೆ ಹಾಗೂ ಬೆಂಗಳೂರು ವಿಶ್ವವಿದ್ಯಾಲಯದ ಗ್ರಂಥ ಭಂಡಾರದ ಅಧಿಕಾರ ವರ್ಗಕ್ಕೆ ಹಾಗೂ ಸಾಹಿತ್ಯದ ವಿವಿಧ ಪ್ರಕಾರಗಳನ್ನು ಪರಿಶೀಲಿಸುವ ಶ್ರಮ ತೆಗೆದುಕೊಂಡ ಲೇಖಕರಿಗೆ, ಈ ಕೃತಿಯ ಪ್ರಕಟಣೆಯ ಹೊಣೆಯನ್ನು ಉತ್ಸಾಹದಿಂದ ಹೊತ್ತ ಪ್ರಸಾರಾಂಗದ ನಿರ್ದೇಶಕರಾದ ಡಾ. ಕೆ. ಮರುಳಸಿದ್ದಪ್ಪ ಅವರಿಗೆ ನಾನು ಕೃತಜ್ಞನಾಗಿದ್ದೇನೆ.

ಜಿ. ಎಸ್. ಶಿವರುದ್ರಪ್ಪ
ಸಂಪಾದಕರು

5-2-1986

## ಪರಿವಿಡಿ

# ಕಾವ್ಯ

ನರಹಳ್ಳಿ ಬಾಲಸುಬ್ರಹ್ಮಣ್ಯ

> 'ನಿಮ್ಮ ಕೋಳಿಗೆ ತೋಳ ಬೆನ್ನು ಹತ್ತಿದ್ದರೆ ಮೊದಲು ತೋಳ
> ಓಡಿಸು. ಆಮೇಲೆ ಕೋಳಿಗೆ ಬುದ್ಧಿ ಹೇಳಬಹುದು'
>
> —ಆಫ್ರಿಕಾದ ಗಾದೆ.

ಒಂದು ಸಂದಿಗ್ಧ ಪರಿಸ್ಥಿತಿಯಲ್ಲಿ ನಾವು ಬಂದು ನಿಂತಿದ್ದೇವೆ. ಈ ಸಂದಿಗ್ಧತೆ ಕೇವಲ ಸಾಹಿತ್ಯಕ್ಕೆ ಸಂಬಂಧಿಸಿದ್ದು ಮಾತ್ರವಲ್ಲ, ಜೀವನಕ್ರಮಕ್ಕೂ ಅನ್ವಯಿಸುವಂಥದು.

ಸುಮಾರು ಮೂರು ಶತಮಾನಗಳ ಕಾಲ ವಸಾಹತುಶಾಹಿ ದಬ್ಬಾಳಿಕೆಯಲ್ಲಿ ಸಿಕ್ಕ ನಾವು ವಿಚಿತ್ರ ದ್ವಂದ್ವದಲ್ಲಿ ಸಿಕ್ಕಿ ನರಳುತ್ತಿದ್ದೇವೆ. ಯಾವುದನ್ನೂ ತೀವ್ರವಾಗಿ ಅನುಭವಿಸಲಾಗದ ಈ ಸ್ಥಿತಿ ಸಾಂಸ್ಕೃತಿಕವಾಗಿ ಅತ್ಯಂತ ಬಿಕ್ಕಟ್ಟಿನದು.

ಈ ಸ್ಥಿತಿಯನ್ನು ಎದುರಿಸಲು ಇರುವ ಒಂದೇ ದಾರಿ ಅಚಿಬೆ ಹೇಳುವಂತೆ ಇತಿಹಾಸದ ಬೆಳಕಿನಲ್ಲಿ ಪರ್ಯಾಯ ಸಂಸ್ಕೃತಿಯೊಂದರ ಸೃಷ್ಟಿ. ಅಂದಮಾತ್ರಕ್ಕೆ ಪಾಶ್ಚಾತ್ಯವಾದುದೆಲ್ಲವನ್ನೂ ತಿರಸ್ಕರಿಸಬೇಕೆಂದು ಅರ್ಥವಲ್ಲ. ಈ ಅನಿಶ್ಚಿತ ಸ್ಥಿತಿಯಿಂದ ಹೊರಬರಲು, ಸೃಜನಾತ್ಮಕ ಬಿಕ್ಕಟ್ಟನ್ನು ಪರಿಹರಿಸಿಕೊಳ್ಳಲು ಈ ನೆಲದ ಸಂಸ್ಕೃತಿಯೊಡನೆ ಅರ್ಥಪೂರ್ಣ ಸಂವಾದ ಸಾಧ್ಯವಾಗಬೇಕು. ದೇಸೀಯ ಬದುಕಿನ ಸಾಧ್ಯತೆಗಳತ್ತ ಕೈ ಚಾಚಬೇಕು.

ಈ ಹಿನ್ನೆಲೆಯಲ್ಲಿ 'ವಚನ ಸಾಹಿತ್ಯ'-ನಮ್ಮ ಸಮಕಾಲೀನ ಬದುಕು ಸಾಹಿತ್ಯಕ್ಕೆ ಹೊಸ ಚೈತನ್ಯ ಒದಗಿಸಬಲ್ಲುದು. ಹಾಗೆಯೇ ನಮ್ಮ ಸಾಹಿತ್ಯ ಪರಂಪರೆಯ ಉತ್ತಮಾಂಶಗಳು ಸಮಕಾಲೀನ ಸಾಹಿತ್ಯಕ್ಕೆ ಹೊಸ ತೇಜಸ್ಸು ನೀಡಬಲ್ಲವು.

ಇಂಥ ಪ್ರಯತ್ನ, ಪ್ರಯೋಗ-ಇಂದು ಕನ್ನಡ ಕಾವ್ಯದ ಮುಖ್ಯ ಆಸಕ್ತಿಯಾಗಿದೆ. ಈ ಹಿನ್ನೆಲೆಯಲ್ಲಿಯೇ 83 ರ ಕಾವ್ಯವನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸಲಾಗಿದೆ.

ಗಮನಿಸಬೇಕಾದ ಮತ್ತೊಂದು ಸಂಗತಿ : ಹನ್ನೆರಡನೆಯ ಶತಮಾನ ಬಿಟ್ಟರೆ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಈ ಸಂಖ್ಯೆಯಲ್ಲಿ ಮಹಿಳೆಯರು ಕಾವ್ಯ ರಚನೆಯಲ್ಲಿ ಗಂಭೀರ ಆಸಕ್ತಿ ಬೆಳೆಸಿಕೊಂಡ ನಿದರ್ಶನ ಸಿಗುವುದಿಲ್ಲ. ಕನ್ನಡ ಕಾವ್ಯದಲ್ಲಿ ಇದೊಂದು ಮುಖ್ಯ ಬೆಳವಣಿಗೆ.

## ಬತ್ತಲಾರದ ಗಂಗೆ (ಗೋಪಾಲಕೃಷ್ಣ ಅಡಿಗ)

ಅಡಿಗರ ಕಾವ್ಯದುದ್ದಕ್ಕೂ ಕಂಡುಬರುವ ಬಹು ಪ್ರಧಾನ ಆಶಯವನ್ನು ಹೀಗೆ ಗುರ್ತಿಸಬಹುದು.

'ಮರ್ತ್ಯ ಜೀವನದೊಳಮರತೆಯ ಫಲ
ಸಿಕ್ಕಬೇಕೆಂದವನು ಆಶಿಸಿದನು'

(ಒಳತೋಟಿ)

ಇರುವುದೆಲ್ಲವ ಬಿಟ್ಟು ಇರದುದರೆಡೆಗೆ ತುಡಿವುದೆ ಜೀವನ ? ಎಂದು ಪ್ರಶ್ನಿಸುವ ಅಡಿಗರ ಕಾವ್ಯನಾಯಕ ಮರ್ತ್ಯದಲ್ಲಿಯೇ ಅಮರತೆಯ ಫಲ ಪಡೆಯ ಬೇಕೆಂಬ ಹಂಬಲದವನು. ಈ ಹಂಬಲ, ಶೋಧನೆ–ಅವರ ಕಾವ್ಯದುದ್ದಕ್ಕೂ ಆತ್ಮಶೋಧನೆಯಾಗಿಯೇ ಬೆಳೆದು ಬರುತ್ತದೆ.

ಈ ನೆಲದಲ್ಲಿಯೇ ಹುಟ್ಟಿಬೆಳೆದ ರಾಮ, ಕೃಷ್ಣ, ಬುದ್ಧ, ಗಾಂಧಿ–ಎಲ್ಲರೂ ಮಹಾತ್ಮರಾದರು. ನಾನು ಮಾತ್ರ ಹಾಗೆಯೇ ಉಳಿದೆನೇಕೆ ? ಯಾವ ಬೆಂಕಿ ತಾಕಿತವರ ? ಅಂಥ ಗುರಿ ತಲುಪಬೇಕಾದರೆ ತನ್ನ ಒಟ್ಟು ಜೀವನಕ್ರಮದಲ್ಲೇ ಸಾರ್ಥಕ ಮಾರ್ಪಾಟಾಗಬೇಕೆಂಬ ಅರಿವು ಮೂಡುತ್ತದೆ. ಅದಕ್ಕಾಗಿ ಕವಿ ಪ್ರಾರ್ಥಿಸುತ್ತಾರೆ:

'ಈ ಅರಿವು ಅರೆಹೊರೆದ ಮೊಟ್ಟೆ, ಚಿಪ್ಪೊಡೆದು
ಬರಲಿ ಪರಿಪೂರ್ಣಾವತಾರಿ ವಿನತಾ ಪುತ್ರ'

(ಪ್ರಾರ್ಥನೆ)

ಈ ವಿವೇಕದ ಪ್ರಾರ್ಥನೆ ಅಡಿಗರ ಜೀವನತತ್ವ ಹಾಗೂ ಕಾವ್ಯತತ್ವವೆರಡೂ ಹೌದು. ತನ್ನ ಈ ಪ್ರಾರ್ಥನೆ ಸಾಕಾರವಾಗಲು 'ಸಂಕಲ್ಪ ಬಲ' ಬೇಕು.

ಪರಂಪರೆಯ ಉತ್ತಮಾಂಶವನ್ನು, ಸುಪ್ತಪ್ರಜ್ಞೆಯಾಳದ ಸತ್ವಗಳನ್ನೂ ಹೊರತೆಗೆದು ಸೋಸಿ, ಬೇಕಾದುದನ್ನು ಆರಿಸಿ ನಮ್ಮ ಅಗತ್ಯಕ್ಕೆ ತಕ್ಕಂತಹ 'ಇಷ್ಟ ದೇವತಾ ವಿಗ್ರಹ'ವನ್ನು ರೂಪಿಸಿಕೊಳ್ಳಬೇಕೆಂಬುದು ಕವಿಯ ಬಯಕೆ.

ಸಾಮಾನ್ಯ ಮನುಷ್ಯನಾಗಿ ಹುಟ್ಟಿ, ಪುರುಷೋತ್ತಮನಾಗಿ ಬೆಳೆದ ರಾಮನ ಬದುಕು, ಆತನ ವ್ಯಕ್ತಿತ್ವದ ವಿಕಾಸ ಅಡಿಗರ ಕಾವ್ಯದ ಕೇಂದ್ರ ಬಿಂದು. ಪ್ರತಿ ಯೊಬ್ಬ ವ್ಯಕ್ತಿಯೂ ತನಗೆ ತಾನೇ ವಿಕಾಸವಾಗಬೇಕು. ಈ ನೆಲದಲ್ಲಿಯೇ, ನೆಲದ ಪ್ರಜ್ಞೆ ಹೀರಿಯೇ ಬೆಳೆದು ದೊಡ್ಡವನಾಗಬೇಕು, ಉನ್ನತ ಚೇತನವಾಗಿ ರೂಪು ಗೊಳ್ಳಬೇಕು–ಇದೇ ಅಡಿಗರ ಜೀವನತತ್ವ.

ಅಡಿಗರದು ಮುಖ್ಯವಾಗಿ ಧ್ಯಾನರೂಪೀ ಮನಸ್ಸು. ಇದೇ ಪ್ರಜ್ಞೆಯೇ– 'ಬತ್ತಲಾರದ ಗಂಗೆ'ಯ ಕವಿತೆಗಳಲ್ಲೂ ಕೆಲಸ ಮಾಡಿರುವಂಥದು.

"ಒಬ್ಬ ಮನುಷ್ಯನಲ್ಲಿ ಇನ್ನೊಬ್ಬನನ್ನು, ಒಂದು ಸಂಗತಿಯಲ್ಲಿ ಇನ್ನೊಂದು ಸಂಗತಿಯನ್ನು, ಒಂದು ಘಟನೆಯಲ್ಲಿ ಇನ್ನೊಂದು ಘಟನೆಯನ್ನು ಕಾಣುವ, ಪರಸ್ಪರ ವಿರುದ್ಧವಾದುದರಲ್ಲೂ ಇರುವ ಏಕತ್ವದ ಸೂತ್ರವನ್ನು ಗುರುತಿಸುವ ಶಕ್ತಿಯಲ್ಲಿ ಮಾನವತ್ವದ ಅಮೂಲ್ಯವಾದ 'ಅರ್ಥ'ಗಳು ಧ್ವನಿಸುತ್ತವೆ. ಇದಕ್ಕೇ ರೂಪಕಶಕ್ತಿ, ಪ್ರತಿಭಾಶಕ್ತಿ, ಸಹಾನುಭವ, ಸಹಾನುಕಂಪಶಕ್ತಿ ಎನ್ನುವುದು. ಮುಕ್ತವಾದ ಸ್ವತಂತ್ರವಾದ ವಾತಾವರಣದಲ್ಲಿ ಮಾತ್ರ ಇಂಥ ಶಕ್ತಿ ಬೆಳೆದುಬರಲು ಸಾಧ್ಯ. ಆಧುನಿಕ ಯಂತ್ರ ನಾಗರೀಕತೆಯ ಭೋಗನಿಷ್ಠ ಸ್ವಾರ್ಥಪರಾಯಣ ನಾಗರೀಕತೆಯಲ್ಲಿ ಈ ಶಕ್ತಿ ಕುಂಠಿತವಾಗುತ್ತದೆ. ನಮ್ಮ ದೇಶದಲ್ಲಿರುವಂಥ ಆರ್ಥಿಕ ವೈಷಮ್ಯದ ಮಹಾಹೀನ ರಾಜ್ಯಭಾರದಲ್ಲಿ, ಸ್ವತಂತ್ರವಾಗಿ ಶುದ್ಧವಾಗಿ, ಸರಳವಾಗಿ ಬದುಕುವುದನ್ನೇ ಅಸಾಧ್ಯಮಾಡುತ್ತಿರುವ ಇಂದಿನ 'ಅಸುರೀ' ಸಮಾಜದಲ್ಲಿ, ಮಾನವಾತೀತದೊಡನೆ ಸಂಬಂಧವನ್ನು ಸಂಪೂರ್ಣ ಕಳಚಿಕೊಂಡ ಈ ರಾಕ್ಷಸ ರಾಜ್ಯದಲ್ಲಿ ಮೃದುವಾದ, ಕೋಮಲವಾದ 'ಅಂತಃಕರಣಗಂಗೆ' ಬತ್ತಿಹೋಗುತ್ತಿದೆ. ಈ ಕಾಲದಲ್ಲಿರುವ ನಾವು ವಿಶ್ವದ ಮೂಲಶಕ್ತಿಗಳ ವಿದ್ಯುದಾಗಾರಗಳೊಡನೆ ನಮ್ಮ ನಮ್ಮ ಅಂತಸ್ತಂತುಗಳನ್ನು ಜೋಡಿಸಿ, ನಮ್ಮಲ್ಲಿ ಜೀವಶಕ್ತಿಯು ಸಂಚಾರವಾಗುವಂತೆ ನೋಡಿಕೊಳ್ಳಬೇಕು." (ಮುನ್ನುಡಿಯಲ್ಲಿ ಅಡಿಗರು)

ಕವಿಯು ಕಾಳಜಿ ಅರ್ಥಪೂರ್ಣ. ಈ ಕಾಳಜಿಯೇ 'ಬತ್ತಲಾರದ ಗಂಗೆ'ಯ ಧ್ವನಿ.

'ಹೃದಯ ಹೃದಯಗಳಲ್ಲಿ ಹುದುಗಿದಂತರ್ಗಂಗೆ
ತಳಬಿರಿದು ಬಿರುಕು ಬಿಟ್ಟಿರುವ ಧೂಳು'

ಹೃದಯದ ಅಂತರ್ಗಂಗೆ ಬತ್ತಿಹೋಗುತ್ತಿದೆಯೆಂಬ ವಾಸ್ತವಪ್ರಜ್ಞೆಯ ಅರಿವು ಕವಿಗಿದೆ. ಸಮಕಾಲೀನ ಬದುಕಿನ ಬಗೆಗಿನ ಕಟುವ್ಯಾಖ್ಯಾನ ಅಡಿಗರ ಕಾವ್ಯದಲ್ಲಿ ಉಜ್ವಲವಾಗಿಯೇ ಕಾಣಿಸಿಕೊಳ್ಳುತ್ತದೆ. ಆದರೆ—

ಗಂಗೆಯಿಲ್ಲದ ಕಾಲದಲ್ಲಿ ಹಡೆದುಡುಕಿದ ಭಗೀರಥನ
ಸಂಕಲ್ಪಬಲದ ಅಸಂಖ್ಯಾತರಿಲ್ಲಿ
ಬಂದೆಬರುವರು; ದೇವಗಂಗೆಯ ನೀರ
ಹೃದಯದಂತರ್ಗಂಗೆ ತುಂಬಿ ಚೆಲ್ಲಿ
ದಡದಲ್ಲಿ ಮತ್ತೆ ವಿದ್ಯಾರಣ್ಯ ಧರ್ಮಕ್ಷೇತ್ರ
ಚಿಗುರುವುವು ಚಿಗಿಯುವುವು ಮುಗಿಲಕಡೆಗೆ. (ಬತ್ತಲಾರದ ಗಂಗೆ)

ಎಂಬಲ್ಲಿ ಸಂಕಲ್ಪಬಲದಿಂದ ಮತ್ತೆ ಬದುಕನ್ನು ಹಸನುಮಾಡಿಕೊಳ್ಳುವುದು ಸಾಧ್ಯವೆಂಬುದು ಕವಿಯ ನಂಬಿಕೆ. ಇದಕ್ಕೆ ತನ್ನ ದಾರಿಯ ತಾನೇ ರೂಪಿಸಿಕೊಳ್ಳ ಬೇಕೆಂದು ಅಡಿಗರು ಹೇಳುತ್ತಾರೆ.

ಸ್ವಯಂ ಆಚಾರ್ಯನಾಗದೇ ದಾರಿ ಎಲ್ಲಿ ?
(ಆಚಾರ್ಯರಿಗೆ ನಮಸ್ಕಾರ)

ಎಂದು ಕವಿ ಕೇಳುತ್ತಾರೆ. 'ಆಚಾರ್ಯರಿಗೆ ನಮಸ್ಕಾರ'ವೆನ್ನುವ ಕವಿತೆಯಲ್ಲಿ ಅಡಿಗರು ಆಚಾರ್ಯರಿಗೆ ನಮಸ್ಕರಿಸುತ್ತಾರೆ, ಸಂಪ್ರದಾಯವನ್ನು ಎತ್ತಿಹಿಡಿಯುತ್ತಾರೆ ಎಂದೆಲ್ಲ ಹೇಳುವ ವಿಮರ್ಶೆಗಳೂ ಇವೆ. ಆದರೆ ಅಡಿಗರ ಕಾವ್ಯಶಕ್ತಿ ಸ್ಫುರಿಸುವ ವ್ಯಂಗ್ಯ ಅಸಾಮಾನ್ಯವಾದುದು. ಉತ್ತಮ ಕವಿತೆಗಳಲ್ಲೆಲ್ಲ ಅಡಿಗರ ಈ ಶಕ್ತಿಯನ್ನು ನಾವು ಕಾಣಬಹುದಾಗಿದೆ.

ನೆಲಗಚ್ಚಿ ನಿಲ್ಲು ತೆಂಗಿನಂತೆ, ಮಾವಿನಂತೆ, ಆಲದಹಾಗೆ
ಸ್ವಸ್ಥಾನದಾಸ್ಥಾನದಲ್ಲಿ
ಅನಂತರ ಚಿಗುರು ಬಿಸಿಲು ಶಾಖೋಪಶಾಖೆಗಳ ಅಂಗಾಂಗ
ಭಣಿತ, ಗಾಳಿಗೆ ಮಣಿತ; ಆಕಾಶದ ಕೆಳೆ;
ಸುತ್ತಲೂ ಜೀವಸತ್ವವ ಹುಡುಕಿ ತಡಕಿ ಹುಡುಕುವ ಬೇರು,
ಬೇರೆ ಯೋಚನೆಯುಂಟು ಒಳತಿರುಳಿಗೆ :
ಹೊತ್ತನುಂಡೇ ಹೊತ್ತಿನಾಚೆ ಹೋಗುವ ಚಪಲ
ಕಾಂಡದ ಅಖಂಡ ಗತಿ ಮುಗಿಲಿನ ಕಡೆಗೆ
(ನೆಲ ಕಚ್ಚಿ ನಿಲ್ಲು)

ಎಂಬಲ್ಲಿಯೂ ಮತ್ತೆ ಈ ನೆಲದ ಸತ್ವವನ್ನು ಹೀರಿಯೇ ಉನ್ನತ ಚೇತನವಾಗಿ ಬೆಳೆಯಬೇಕೆಂಬ ಹಂಬಲ ಮತ್ತೆ ಮತ್ತೆ ಕಾಣಿಸಿಕೊಳ್ಳುತ್ತದೆ. ಇಂಥ ಉನ್ನತ ಚೇತನದ ಪ್ರತೀಕವಾಗಿಯೇ ಅಂಬೇಡಕರರನ್ನು ಕವಿ ಕಾಣುತ್ತಾರೆ.

ದೈನ್ಯಾವಮಾನಗಳ ಕಲ್ಮುಳ್ಳುಗಳ
ರಕ್ತ ಬಸಿಯುವಿಕ್ಕಟ್ಟಲ್ಲಿ
ಸ್ವಂತ ಕಾಲಿಂದಲೇ
ನಡೆದು ಹತ್ತಿದಿರಿ ಮುಟ್ಟಿದಿರಿ ಮಾನವತ್ವದ ಪರಾಕಾಷ್ಠೆ
ಸಂಸ್ಕೃತಿ ವಿವೇಕಿಗಳ ನಿಯಮ ನಿಷ್ಠೆ
(ಅಂಬೇಡಕರ ಭೀಮರಾಯರಿಗೆ)

ಶಾಂತವೇರಿಯವರ ಬಗೆಗಿನ ಕವನ ಆಪ್ತ ಅನುಭವವೊಂದನ್ನು ನೀಡುತ್ತದೆ. ಉದ್ವೇಗ ಸಮಾಧಾನಗಳ ಸಮತೂಕದಿಂದ ಸಿದ್ಧಿಸುವ ಭಾವತೀವ್ರತೆಯಲ್ಲಿ ಅಡಿಗರು ಉತ್ತಮ ಕವಿತೆಗಳನ್ನು ರಚಿಸಿದ್ದಾರೆ. ಆದರೆ ಕೆಲವೊಮ್ಮೆ ಉದ್ವೇಗವೇ ಪ್ರಧಾನವಾಗಿ ಅಸಹನೀಯ ಉಷ್ಣಾಂಶದಿಂದ ಕೂಡಿದಾಗ ವಿಚಿತ್ರ ರೀತಿಯಲ್ಲಿ ಅಡಿಗರ ಪ್ರತಿಭೆ ಮುಸುಕಾಗುತ್ತದೆ. ಕಾವ್ಯ ತರ್ಕದ ಹಾದಿ ಹಿಡಿಯುತ್ತದೆ. ಆ

ತರ್ಕವೂ ಕಾವ್ಯಬಂಧದಿಂದಾಚೆಗೂ ನಿಂತು 'ಸಾವಯವ ಸಮಗ್ರ ಶಿಲ್ಪ'ದ ಬಲ ಕಾವ್ಯಕ್ಕೆ ಇಲ್ಲವಾಗುತ್ತದೆ. 'ಮೂಲಕ ಮಹಾಶಯರು' ಸಂಕಲನದಲ್ಲಿ ಇಂಥ ಕವಿತೆಗಳ ಸಂಖ್ಯೆಯೇ ಜಾಸ್ತಿಯಿತ್ತೆನ್ನಬಹುದು. ಇಲ್ಲಿಯೂ ಅಂಥ ಕವನಗಳಿವೆ. ಆದರೆ ಈ ಸಂಕಲನದ ಉತ್ತಮ ರಚನೆಗಳು ಕಾವ್ಯಾಭ್ಯಾಸಿಗಳಿಗೆ ಪ್ರಿಯವೆನ್ನಿಸುತ್ತವೆ.

ನವಪಲ್ಲವ (ಕೆ. ಎಸ್. ನರಸಿಂಹಸ್ವಾಮಿ)

ನವ್ಯಕಾವ್ಯ ಸಂದರ್ಭದಲ್ಲಿ ಅಡಿಗರ ಜೊತೆ ಹೋಲಿಸಬಹುದಾದ ಮತ್ತೊಂದು ಸಮರ್ಥ ಪ್ರಖರ ಪ್ರತಿಭೆ ನಮಗೆ ಇರುವುದು ಕಷ್ಟ. ನವೋದಯ ಕಾವ್ಯ ಸಂದರ್ಭ ದಂತೆ ವೈದೃಶ್ಯ ಪ್ರತಿಭೆಗಳು ತೀವ್ರ ರೀತಿಯಲ್ಲಿ ಇಲ್ಲಿ ದಾಖಲಾಗುವುದಿಲ್ಲ. ಆದರೆ ಆದರೆ ಕೆ. ಎಸ್. ನರಸಿಂಹಸ್ವಾಮಿಯವರ ಜೊತೆ ಮಾತ್ರ ಇಂಥ ರೀತಿಯ ಚರ್ಚೆ ಸಾಧ್ಯವೆಂದು ನನ್ನ ನಂಬುಗೆ.

ಕನ್ನಡ ಸಾಹಿತ್ಯ ಅನೇಕ ವಾಗ್ವಾದಗಳ ನಡುವೆ ಬೆಳೆದುಬಂದಿದೆ. ಅಂಥ ವಾಗ್ವಾದಗಳಲ್ಲಿ ಅಡಿಗರು ಹಾಗೂ ಕೆ.ಎಸ್.ನ. ಅವರಲ್ಲಿ ಕಂಡುಬರುವ ವಾಗ್ವಾದವೂ ಒಂದು. ಈ ವಾಗ್ವಾದದ ಮೂಲಕವೇ ಅವರಿಬ್ಬರ ಕಾವ್ಯ ಬೆಳೆದುಬಂದಿದೆ.

ಯು. ಆರ್. ಅನಂತಮೂರ್ತಿಯವರು ಇದನ್ನು ಸೊಗಸಾಗಿ ವಿವರಿಸುತ್ತಾರೆ: (ಮುನ್ನುಡಿ, ಅರವತ್ತು ಕವನಗಳು, ರಾಮಚಂದ್ರಶರ್ಮ)
ಅಡಿಗರು ಹೇಳುತ್ತಾರೆ—

> 'ಅಗೆವಾಗ್ಗೆ ಮೊದಲು ಕೋಶಾವಸ್ಥೆ ಮಣ್ಣು
> ಕೆಳಕ್ಕೆ ತಳಕ್ಕೆ ಗುದ್ದಲಿಯೊತ್ತಿ ಕುಕ್ಕಿದರೆ
> ಕಂಡೀತು ಗೆರೆಮಿರಿವ ಚಿನ್ನದದಿರು'
>
> (ಭೂತ)

ಇದಕ್ಕೆ ಉತ್ತರವೇನೋ ಎಂಬಂತೆ ನರಸಿಂಹಸ್ವಾಮಿ ಹೇಳುತ್ತಾರೆ:

> ಅಗೆವಾಗ ಸಿಕ್ಕದ್ದು ನುಣುಪು ಕುಂಕುಮಭೂಮಿ
> ಗುದ್ದಲಿಯ ಕೆಲಸ ಅಲ್ಲಿಗೆ ನಿಂತಿದೆ.
>
> (ಕುಂಕುಮಭೂಮಿ)

"ಒಂದು ಗಣಿಯಾದರೆ, ಮತ್ತೊಂದು ಹೊಲ ಒಂದು ವಿಶೇಷ ಅಗೆತವಾದರೆ ಮತ್ತೊಂದು ಬೇಸಾಯಗಾರನ ಸಾಮಾನ್ಯ ಅಗೆತ. ನಿತ್ಯ ಜೀವನದ ಸಾಮಾನ್ಯ ಸುಖ ದುಃಖಗಳನ್ನು ಮಾತ್ರ ಬರೆಯುವ ಕವಿ ಆಳಕ್ಕೆ ಅಗೆಯುವುದಿಲ್ಲ ಎಂದು ದೂರುವ 'ಗಹನ'ದ ಪ್ರೇಮಿಗೆ ನರಸಿಂಹಸ್ವಾಮಿ ಹೀಗೆ ಉತ್ತರಿಸುತ್ತಿದ್ದಾರೆ: ಬೇಸಾಯಗಾರನಾಗಿ ಭೂಮಿಯನ್ನು ಬಗೆಯುವವನಿಗೆ ಫಲವತ್ತಾದ ಕುಂಕುಮ

ಭೂಮಿಗಿಂತಲೂ ಆಳವಾದ್ದು ಬೇಕಿಲ್ಲ; ಹಾಗಾಗಿ ಗುದ್ದಲಿಯ ಕೆಲಸ ಅಲ್ಲಿಗೇ ನಿಂತಿದೆ" ಎನ್ನುತ್ತಾರೆ.

ನರಸಿಂಹಸ್ವಾಮಿಯವರ ಕಾವ್ಯಾಭ್ಯಾಸಕ್ಕೆ ಇದು ಸೂಕ್ತ ಪ್ರವೇಶವನ್ನೊದಗಿಸುತ್ತದೆ. ದಿನನಿತ್ಯದ ಸಾಮಾನ್ಯ ಸುಖ ದುಃಖಗಳನ್ನು ಚಿತ್ರಿಸುತ್ತಲೇ ಕೆ.ಎಸ್.ನ ಅಪರೂಪದ ಬೆಳೆ ಬೆಳೆದಿದ್ದಾರೆ.

'ಕವಿತೆಯೆಂದರೇನು ? ನನಗೆ ತಿಳಿಯದು. ಕಣ್ಣು ಕಪ್ಪೆಯಚಿಪ್ಪಿನಗಲದೋಣಿ; ನೋಟ ಸಮುದ್ರದಂಥ ಪ್ರಾಣಿ. ಬರೆಯುತ್ತ ಬರೆಯುತ್ತ ಉತ್ತರ ಹುಡುಕಬೇಕಾಗಿದೆ'. ನರಸಿಂಹಸ್ವಾಮಿಯವರ ಕಾವ್ಯದುದ್ದಕ್ಕೂ ಇಂಥ ಹುಡುಕಾಟವಿದೆ. 'ನವಪಲ್ಲವ'ದಲ್ಲಿಯೂ ಕವಿ ಹೇಳುತ್ತಾರೆ.

> 'ಕವಿತೆ ಎಂದರೆ ಏನು' ಉತ್ತರ ಹುಡುಕುತ
> ಬಂದೆನಿಲ್ಲಿಗೆ ನೇರ ನಿನ್ನೆ ಸಂಜೆ
> ಬರುವಾಗ ಇಲ್ಲಲ್ಲಿ ಬೆಳ್ಳಿ ನದಿಯನು ಕಂಡೆ
> ಬಿದಿರ ತಡಿಕೆಯ ಹಿಂದೆ ಕಾಡಿನೊಳಗೆ
> ತಿಳಿದವರು ಸಿಕ್ಕಿದರು ; ತಿಳಿದಷ್ಟು ಹೇಳಿದರು
> ನದಿಯ ಹೋಲಿಕೆ ಬಂತು ಸೂತ್ರದಲ್ಲಿ
> ವಿವರಗಳ ಚರ್ಚೆ ಮುಂದಕ್ಕೆ ಹೋಯಿತು ನನಗೆ
> ಬಸ್ಸು ಸಿಕ್ಕದೆ ಉಳಿದೆ ಸತ್ರದಲ್ಲಿ.
>
> (ಉತ್ತರ ಹುಡುಕುತ್ತ)

ಕಾವ್ಯದ ಬಗೆಗೆ ಮಾತ್ರವಲ್ಲ, ಬದುಕಿನ ಬಗ್ಗೆಯೂ ಕೆ.ಎಸ್.ನ ಅವರದು ಇದೇ ನಿಲುವು. 'ಒಲವಿನ ಕವಿ' ಎಂದು ಅವರನ್ನು ಕರೆಯುವಲ್ಲಿ ಅದು ಕೇವಲ ವಿಶೇಷಣದ ಬಳಕೆ ಮಾತ್ರವಲ್ಲ, ಬದುಕನ್ನು ಸಹ್ಯವಾಗಿರಿಸುವ ಒಲವಿನ ಬಗ್ಗೆ ಕವಿಗಿರುವ ಗಾಢ ನಂಬಿಕೆಯನ್ನೂ ಅದು ಸೂಚಿಸುತ್ತದೆ. 'ಎಲ್ಲರಿಗೊಳಿತನು ಬಯಸಲಿ ಕವನ' ಎಂಬ ಕವನದಲ್ಲಿನ ಅವರ ಹಾರೈಕೆ ಓದುವಾಗ ನಮ್ಮ ಅನುಭವದಲ್ಲಿ ನಿಜವಾಗುವುದು ಅಲ್ಲಿಯ ಭಾವಮಾತ್ರದಿಂದಲ್ಲ ಅಥವಾ ಕವಿಯ ಕಾವ್ಯ ನಿರ್ಮಾಣ ಕೌಶಲದಿಂದಲೂ ಅಲ್ಲ—ಇವೆರಡರ ಜೊತೆಗೆ ಕವಿತೆಯಲ್ಲಿ ದಟ್ಟವಾಗಿ ಮೂರ್ತಗೊಳ್ಳುವ ಕವಿಯ ತೀವ್ರ ಸಂವೇದನೆಯಿಂದಾಗಿ. ಈ ಸಂವೇದನೆಯೇ ನರಸಿಂಹಸ್ವಾಮಿಯವರ ಕಾವ್ಯದ ಅಂತಃಶಕ್ತಿ.

ಆಧುನಿಕ ಕನ್ನಡ ಕಾವ್ಯ ಚರಿತ್ರೆಯಲ್ಲಿ ನರಸಿಂಹಸ್ವಾಮಿಯವರು ಬೆಳೆದು ಬಂದ ಬಗೆ ವಿಶಿಷ್ಟವಾದುದು. ಬದಲಾವಣೆಗಳಿಗೆಲ್ಲ ಬಗೆ ತೆರೆದುಕೊಳ್ಳುತ್ತಾ, ಆದರೆ ತಮ್ಮದೇ ಹಾದಿಯನ್ನು ಕಂಡುಕೊಳ್ಳುತ್ತಾ ಬೆಳೆದು ಬಂದ ಕವಿ ಇವರು. ನರಸಿಂಹಸ್ವಾಮಿಯವರ ಕಾವ್ಯ ಜೀವನದಲ್ಲಿ 'ಶಿಲಾಲತೆ' ಒಂದು ಮುಖ್ಯ ಘಟ್ಟ. ಅದರ

ಶಿಖರ 'ತೆರೆದ ಬಾಗಿಲು'. ಈಗ ಅವರ ಕಾವ್ಯ ಮತ್ತೊಂದು ಹಂತದಲ್ಲಿ ಬಂದು ನಿಂತಿದೆ. ಉದ್ದೇಶಪೂರ್ವಕ ಕೈಬಿಟ್ಟಿದ್ದ ಕೆಲವು ಕಾವ್ಯ ಪರಿಕರಗಳನ್ನು ನರಸಿಂಹ ಸ್ವಾಮಿಯವರು ಹೊಸ ಅರಿವಿನ ಬೆಳಕಿನಲ್ಲಿ ಮತ್ತೆ 'ನವಪಲ್ಲವ'ದಲ್ಲಿ ಬಳಸಿ ಕೊಂಡಿದ್ದಾರೆ.

'ನವಪಲ್ಲವ' ಎಂಬ ಹೆಸರಿನ ಸುದೀರ್ಘ ಕವಿತೆಯಲ್ಲಿಯೇ ಅವರ ಈ ಪ್ರಯೋಗದ ಅನೇಕ ಮುಖಗಳನ್ನು ಕಾಣಬಹುದು. ಕಾವ್ಯಶಿಲ್ಪದ ದೃಷ್ಟಿಯಿಂದ ಮಾತ್ರವಲ್ಲ, ಮಾಗಿದ ಬದುಕಿನ ನವಚೇತನದ ಅಭಿವ್ಯಕ್ತಿಯಾಗಿಯೂ ಈ ಕವಿತೆ ಮುಖ್ಯವಾಗುತ್ತದೆ; ರಗಳೆ, ಷಟ್ಪದಿ, ಸಾಂಗತ್ಯ, ಮೂರು, ಐದು ಮಾತ್ರೆಗಳ ಲಯ, ಮುಡಿ ಪದ್ಮಗಣಗಳ ಬಳಕೆ, ಮೌನ—ಹೀಗೆ ಏನೆಲ್ಲ ವೈವಿಧ್ಯ ತರಬಹುದೋ ಆ ಎಲ್ಲವನ್ನೂ ನರಸಿಂಹಸ್ವಾಮಿಯವರು ಇಲ್ಲಿ ಪ್ರಯೋಗಿಸಿದ್ದಾರೆ. ಹಾಗೆಯೇ ಗಂಧರ್ವ ಲೋಕದ ಗೇಯ ಗುಣವನ್ನು ಈ ನೆಲದ ಹಾಡಿಗೆಳೆಯಲು ಪ್ರಯತ್ನಿಸಿದ್ದಾರೆ.

ಬೆಳ್ಳಿಗರಿಗಳ ಹಕ್ಕಿ ನೀಲಿಯಲಿ ಹೊಳೆದಿರಲು
ಬಲೆಯ ಬೀಸಿದ ನಾನು ಕಾದು ಕುಳಿತೆ
ಹಕ್ಕಿ ಇಳಿಯಂದೆ, ಹಾಡು ಮೋಡದೊಳಗೇ ಇರಲು
ನಾನು ಬಲೆಯನು ಹೊತ್ತು ದಣಿದು ಬಂದೆ.

ಆದರೆ ಈ ಬಗ್ಗೆ ಕವಿ ನಿರಾಶರಾಗುವುದಿಲ್ಲ. ಹತಾಶಭಾವ ಮೂಡುವುದಿಲ್ಲ. ಕವಿ ಹೇಳುತ್ತಾರೆ :

ನನ್ನ ಕೈಯೊಳಿಹುದು ನೋಡಿ
ನಾನು ಪಡೆದ ಕಿಂದರಿ
ನನ್ನ ಹಾಡು, ಭೂಮಿತಾಯಿ
ನಿರುಪಮಾನ ಸುಂದರಿ

(ನವಪಲ್ಲವ)

ಮೋಡದೊಳಗೆ ಸೇರಿದ ಹಾಡು ನೆಲಕ್ಕಿಳಿಯದಿದ್ದರೆ ಬೇಡ, ಈ ನೆಲದ ಹಾಡು ನನ್ನದು ಎಂಬ ನಿಲುವು ನರಸಿಂಹಸ್ವಾಮಿಯವರದು. ಆದ್ದರಿಂದಲೇ ಕವಿ ಹೇಳುತ್ತಾರೆ—

ನವಪಲ್ಲವ ಉತ್ಸಾಹದ
ಮಾಣಿಕ್ಯದ ಚೆಲುವೆ
ಮುನ್ನಡೆಸಲಿ ನೆಲದೇವಿಯ
ಎಣೆಯಿಲ್ಲದ ಒಲುವೆ



(ನವಪಲ್ಲವ)

ಈ ನೆಲದೇವಿಯ ಎಣೆಯಿಲ್ಲದ ಒಲುಮೆಯೇ ನರಸಿಂಹಸ್ವಾಮಿಯವರ ಬದುಕನ್ನೂ ಕಾವ್ಯವನ್ನೂ ರೂಪಿಸಿದೆ. 'ನವಪಲ್ಲವ'ದಲ್ಲಿ ಮತ್ತೆ ಅದು ಹೊಸ ಚೈತನ್ಯದೊಡನೆ ಅಭಿವ್ಯಕ್ತಿ ಪಡೆದಿದೆ.

**ಅರವತ್ತು ಕವನಗಳು (ರಾಮಚಂದ್ರಶರ್ಮ)**

1950 ರಿಂದ 1978ರವರೆಗೆ ಬರೆದ ಕವನಗಳಿಂದ ಆರಿಸಿದ ಐವತ್ತೊಂಬತ್ತು ಕವನಗಳು, 82 ರಲ್ಲಿ ಬರೆದ ಒಂದು ಕವನ–ರೂಪಾಂತರ–ಸೇರಿ ಒಟ್ಟು ಅರವತ್ತು ಕವನಗಳು ಇಲ್ಲಿ ಸಂಕಲಿತವಾಗಿವೆ. ಶರ್ಮರ ಒಟ್ಟು ಕಾವ್ಯಾಭ್ಯಾಸಕ್ಕೆ ಈ ಸಂಕಲನ ಉಪಯುಕ್ತ.

ಆಧುನಿಕ ಕನ್ನಡ ಕಾವ್ಯದಲ್ಲಿ ಶರ್ಮ ಅವರದು ಒಂದು ಬಹು ಮುಖ್ಯ ಹೆಸರು. ಅಡಿಗರು ಹೊಸ ಮಾರ್ಗದಲ್ಲಿ ಬರೆಯಲು ತೊಡಗಿದ ಕಾಲದಲ್ಲಿ, ಭಿನ್ನವಾಗಿ ಗಟ್ಟಿಯಾಗಿ ಬರೆದು ತಮ್ಮ ಸ್ವಂತಿಕೆಯನ್ನು ಕಾಪಾಡಿಕೊಂಡು ಬಂದವರು ಶರ್ಮರು. ಇಂದಿಗೂ ಶರ್ಮರದು ವಿಶಿಷ್ಟ ಧ್ವನಿ.

ಬೆರಗು ಕುತೂಹಲಗಳನ್ನು ಉರಿಯುವ ಎಚ್ಚರದ ನಡುವೆಯೂ ಜತನದಿಂದ ಕಾಪಾಡಿಕೊಂಡು ಬಂದಿರುವ ಶರ್ಮರ ಕಾವ್ಯ ಇಂದಿಗೂ ನನಗೆ ಪ್ರಿಯವಾದುದು. ಓದಿ ಸಂತೋಷಿಸಬಹುದಾದಂಥದು. ಹೊರಗಿನ ಗದ್ದಲದ ನಡುವೆ ಒಳಗಿನ ದನಿಯಾಗಿ ನಮ್ಮನ್ನು ತಟ್ಟುವಂಥದು.

'ತೇವು ನೆವಕ್ಕಷ್ಟೆ ತಾವು ಹುಟ್ಟಿ ಕುಪ್ಪಳಿಸಿ
ಹುಟ್ಟಿದ್ದಕ್ಕೆ ಹುಟ್ಟಿಸುವ ಮಾತಿಗಿಂತಲೂ
ಒಣ ನೆಲದ ಶಬರಿ ಶ್ರದ್ಧೆಯ ನಿಶ್ಯಬ್ದ ಮೇಲು'

(ಮಾತು)

ಕಾವ್ಯದ ಬಗ್ಗೆ ಇಂಥ ಶಬರಿಶ್ರದ್ಧೆಯನ್ನು ನಿರಂತರ ಕಾಪಾಡಿಕೊಂಡು ಬಂದವರು ರಾಮಚಂದ್ರಶರ್ಮ, ಈ ಶ್ರದ್ಧೆ ಅವರ ಬಗ್ಗೆ ನಮಗೆ ವಿಶೇಷ ಗೌರವ ಮೂಡಿಸುತ್ತದೆ.

ಶರ್ಮರ ಮೊದಲ ಸಂಕಲನ 'ಹೃದಯಗೀತ'ದಲ್ಲಿ ಪ್ರಗತಿಶೀಲ ಧ್ವನಿ ಗಟ್ಟಿಯಾಗಿ ಕೇಳಿಸುತ್ತದೆ.

ಎಂದಿಗಯ್ಯ ಎಂದಿಗೆ ? ಎಂದಿಗೋ ಎಂದಿಗೆ ?
ನನ್ನ ನಾಡ ಮುಂದಿಗೆ
ತಿಳಿವು ಹೊಳೆವುದೆಂದಿಗೆ ?

(ಎಂದಿಗೆ ?)

ಈ ಕಳಕಳಿ, ಸಾಮಾಜಿಕ ಕಳಿಕಳಿ ಶರ್ಮರ ಕಾವ್ಯದುದ್ದಕ್ಕೂ ಪ್ರಧಾನವಾಗಿಯೇ ಕೇಳಿಸುತ್ತದೆ. ಕನ್ನಡ ಕಾವ್ಯದಲ್ಲಿ ಪ್ರಗತಿಶೀಲಧ್ವನಿ ಅರ್ಥಪೂರ್ಣವಾಗಿ ಬೆಳೆದು ಬಂದದ್ದು ಶರ್ಮರ ಕಾವ್ಯದಲ್ಲಿಯೇ ಅನ್ನಿಸುತ್ತದೆ.

ಪ್ರಗತಿಶೀಲತೆಯಂತೆಯೇ ಶರ್ಮರ ಕಾವ್ಯದ ಮತ್ತೊಂದು ನೆಲೆ – 'ಸೃಷ್ಟಿ'. ಇದು ಮೊದಲು 'ಕಾಮ'ದ ರೂಪದಲ್ಲಿ ಕಾಣಿಸಿಕೊಳ್ಳುತ್ತದೆ. 'ಏಳುಸುತ್ತಿನಕೋಟೆ' ಕವಿತೆಯಲ್ಲಿ ಇದು ಮೈದಾಳುವ ರೀತಿ ಅಸಾಮಾನ್ಯವಾದುದು. ಶರ್ಮರ ಕಾವ್ಯದಲ್ಲಿ ಅತ್ಯಂತ ಪ್ರಿಯವಾದ ಕವನಗಳಲ್ಲಿ ಇದೂ ಒಂದು. ವ್ಯಕ್ತಿಯ ಬದುಕಿನ ವಿವಿಧ ಹಂತಗಳಲ್ಲಿ ಕಾಮ ಪಡೆದುಕೊಳ್ಳಬಹುದಾದ ಸ್ವರೂಪವನ್ನು ಪರಿಣಾಮಕಾರಿಯಾಗಿ ಈ ಕವನ ಚಿತ್ರಿಸುತ್ತದೆ.

ನಂತರದ ಹಂತದಲ್ಲಿ 'ಪಾಂಡು-ಮಾದ್ರಿ' ಬರೆಯುವ ವೇಳೆಗೆ ಈ ಅದಮ್ಯ ಶಕ್ತಿಯನ್ನು ಶರ್ಮರು ಗ್ರಹಿಸುವ ಕ್ರಮ ಹೆಚ್ಚು ಪ್ರಬುದ್ಧವಾದದ್ದು.

> ತಳಕ್ಕದುಮಿದ ಪುಳಕ್ಕನೆ ಜಿಗಿವ ಚೆಂಡು ಪ್ರಶ್ನೆ
> ಅವ್ಯಕ್ತದಲ್ಲಿ ವ್ಯಕ್ತಿತ್ವ ಲಯವಾದರೇ
> ಬದುಕು ಸಾರ್ಥಕವೇನು ?
> ಬದುಕು ಸಾರ್ಥಕವೇನು ?

'ಬ್ರಾಹ್ಮಣ ಹುಡುಗ' ಸಂಕಲನದ ವೇಳೆಗೆ ಈ ಭಾವ ಪಕ್ವಗೊಂಡು ಮೊದಲಿಗೆ ವಿಜೃಂಭಿಸಿದ ಉರಿದ ಭಾವನೆಗಳು ಇಲ್ಲಿ ಬೆಳಕು ಚೆಲ್ಲುವ ದೀಪವಾಗಿವೆ.(ದಾಂಪತ್ಯಕ್ಕೆ ಸಂಬಂಧಪಟ್ಟ ಕವನಗಳನ್ನು ಗಮನಿಸಿ.)

ಈ 'ಸೃಷ್ಟಿ'ಯ ಎಳೆ ಕಾವ್ಯ ಸೃಷ್ಟಿಗೂ ಸಂಬಂಧಿಸಿದಂತೆ ಬೆಳೆದು ಬಂದಿರುವುದು ಶರ್ಮರ ಕಾವ್ಯದ ಮತ್ತೊಂದು ನೆಲೆ.

ಕೆ.ವಿ. ನಾರಾಯಣ ಅವರು ಗುರ್ತಿಸುವಂತೆ—

> 'ಕೊಳವಾಗಿ ಮಲಗಿದ್ದ ಮೌನದಾಳದ ಕನಸು
> ನುಡಿಯ ದೇಹಕ್ಕಾಗಿ ಗೋಗರೆಯಿತು'

ಎಂದು ಕವಿ 1956 ರಲ್ಲಿ ಬರೆದ ಸಾಲುಗಳು ಹೇಳಿದರೆ, ಈಗ ಕವಿ

> 'ಮಾತಷ್ಟನ್ನು ಕಬಳಿಸಿ ನಿರಂಬಳ ಮಲಗಿದ
> ಈ ಸಮುದ್ರ ಮೌನಕ್ಕೆ ಮತ್ತೆ ಮತ್ತೆ ಧಾಳಿ
> ಹೂಡಲೇಬೇಕು'

ಎಂದುಕೊಳ್ಳುತ್ತಾರೆ. ಅಷ್ಟೇ ಅಲ್ಲ ಕಡೆಗೆ–

> 'ಒಂದೊಂದು ಕವನವೂ ಭರವಸೆಯ ವ್ಯವಸಾಯ
> ಅಜ್ಞಾತದ ತಳಕ್ಕಿಳಿದು ಬಂದವನ ಭಾಗ್ಯ'

ಎಂಬ ನಿಲುವನ್ನು ತಲುಪುತ್ತಾರೆ. ಹೀಗೆ 'ಸೃಷ್ಟಿಯ' ಬಗೆಗಿನ ಕುತೂಹಲ ಮನುಷ್ಯ ಸಂಬಂಧದ ವ್ಯಾಖ್ಯಾನ ಮಾತ್ರವಲ್ಲದೆ ಕಲೆಯ ಬಗೆಗಿನ ವ್ಯಾಖ್ಯಾನ ವಾಗಿಯೂ ಶರ್ಮರಲ್ಲಿ ಬೆಳೆದು ಬರುವ ಬಗೆ ಅಭ್ಯಾಸಯೋಗ್ಯವಾದುದು.

ಶರ್ಮರ ಒಟ್ಟು ಕಾವ್ಯ ಓದಿದಾಗ ಹೇಳಲೇಬೇಕಾದ ಮತ್ತೊಂದು ಮಾತು ಅವರ ಜೀವನೋತ್ಸಾಹ. ವಾಸ್ತವ ಪ್ರಜ್ಞೆಯನ್ನು ದಟ್ಟವಾಗಿ ಪ್ರಕಟಿಸಿಯೂ ಹತಾಶೆಯ ದನಿಯಿಂದ ನರಳುವುದಾಗಲೀ, ಅಬ್ಬರದ ದನಿಯಿಂದ ಆಕ್ರೋಶಿಸುವು ದಾಗಲೀ ಇಲ್ಲಿಲ್ಲ. ಬದುಕಿನ ಬಗೆಗಿನ ಪ್ರೀತಿ, ನಂಬಿಕೆಗೆ ಚ್ಯುತಿ ಬಂದಿಲ್ಲ. ಅತ್ಯಂತ ಆಧುನಿಕವಾಗಿಯೂ, ಆರೋಗ್ಯವಾಗಿರುವ ಈ ಮನಸ್ಸು ನಮ್ಮ ಈ ಪರಿಸರ ದೊಡನೆ ಒಂದಾಗಿ ಬೆಳೆಯುವ ರೀತಿ ಕುತೂಹಲಕರವಾದುದು.

**ಅಜ್ಞಾತ (ಅರವಿಂದ ನಾಡಕರ್ಣಿ)**

ಅರವಿಂದ ನಾಡಕರ್ಣಿಯವರ ಕಾವ್ಯದ ಮುಖ್ಯನೆಲೆ-ನಗರಪ್ರಜ್ಞೆ. ಸುಸಂಸ್ಕೃತ ಮನಸ್ಸೊಂದು ಸಿಮೆಂಟು ಕಾಂಕ್ರೀಟುಗಳ ನಿರ್ಜೀವ ಪರಿಸರದಲ್ಲಿ ಅನುಭವಿಸುವ ಸ್ಥಿತಿ ಅವರ ಕಾವ್ಯದ ಸ್ಥಾಯೀಭಾವ. ಈ ಭಾವ ಕೇವಲ ಪರಿಸರಕ್ಕೆ ಪ್ರತಿಕ್ರಿಯೆ ಮಾತ್ರವಾಗಿ ಉಳಿಯದೆ ಒಂದು 'ಮಾನಸಿಕ ಸ್ಥಿತಿ' ಯಾಗುವುದರಲ್ಲಿ ನಾಡಕರ್ಣಿ ಯವರ ಯಶಸ್ಸಿದೆ.

ಪಾರ್ಥ ಅ–ಪಾರ್ಥನಾಗುವ ಸ್ಥಿತಿಯನ್ನು ಇವರು ತಮ್ಮ ಕಾವ್ಯದ ಭಿತ್ತಿ ಯನ್ನಾಗಿಸಿಕೊಂಡಿದ್ದಾರೆ. ಸುತ್ತಲಿನ ಪರಿಸರದಲ್ಲಿ ಕಳೆದುಹೋಗುತ್ತಿರುವ ತನ್ನ ಅಸ್ತಿತ್ವವನ್ನು ಗುರ್ತಿಸಿಕೊಳ್ಳುವುದು, ಉಳಿಸಿಕೊಳ್ಳುವುದು ಇವರ ಕಾವ್ಯದಲ್ಲಿ ಕಂಡುಬರುವ ಮುಖ್ಯ ಹೋರಾಟವಾಗಿದೆ.

1962ರಲ್ಲಿ ತಮ್ಮ 'ಕಾವ್ಯಾರ್ಪಣ' ಮೊದಲ ಸಂಕಲನ ಪ್ರಕಟಿಸಿದಂದಿನಿಂದ ಇಂದಿನವರೆಗೂ ನಾಡಕರ್ಣಿಯವರು ತಮ್ಮ ಕಾಲುಶತಮಾನದ ಕಾವ್ಯ ಸೃಷ್ಟಿಯಲ್ಲಿ 'ನಗರ ಜೀವನದ' ವಿವಿಧ ಮುಖಗಳನ್ನು ಉದ್ದಕ್ಕೂ ಚಿತ್ರಿಸುತ್ತಲೇ ಬಂದಿದ್ದಾರೆ. ಹಾಗೆ ನೋಡಿದರೆ ಕಾವ್ಯದಲ್ಲಿ ನಗರ ಜೀವನದ ಸಮಸ್ಯೆಯನ್ನು ಇಷ್ಟೊಂದು ಸೂಕ್ಷ್ಮವಾಗಿ, ಮೂರ್ತವಾಗಿ ಚಿತ್ರಿಸಿರುವ ಇನ್ನೊಂದು ಉದಾಹರಣೆ ಕನ್ನಡದಲ್ಲಿ ಸಿಗುವುದು ಕಷ್ಟ. ಮಾನವಸಹಜ ಜೀವನವನ್ನೇ ಅಸಾಧ್ಯವಾಗಿಸುವ, ವ್ಯಕ್ತಿತ್ವದ ಅಸ್ತಿತ್ವವನ್ನೇ ಅಲುಗಾಡಿಸುವ ಇದರ ರಾಕ್ಷಸೀ ಪ್ರಭಾವದ ಮೇಲಿನ ವ್ಯಾಖ್ಯಾನ- ಪೌರಾಣಿಕ, ಐತಿಹಾಸಿಕ ಪ್ರತಿಮೆಗಳ ಮೂಲಕ ಪರಿಣಾಮಕಾರಿಯಾಗಿ ಇಲ್ಲಿ ಅಭಿ ವ್ಯಕ್ತಿ ಪಡೆದಿದೆ.

ಆಧುನಿಕ ಬದುಕಿನ ವಿಫಲತೆಯನ್ನು ಚಿತ್ರಿಸುವ ಖಂಡಕಾವ್ಯ 'ಧ್ರುವಧ್ಯಾಸ' ಸಂಕಲನದ ಮುಖ್ಯ ಕವಿತೆಗಳಲ್ಲೊಂದು. ಹೆಸರು, ರೇಖಾ, ಕ್ಲಾರ್ಕ್ ಕಿಟ್ಟುವಿನ

ಪ್ರೇಮಾಲಾಪ, ಅಜ್ಞಾತವಾಸ-ಮೊದಲಾದವು ಸಂಕಲನದ ಯಶಸ್ವೀ ಕವನಗಳೆನ್ನ ಬಹುದು.

ಭಾಷಾ ಪ್ರಯೋಗ, ಛಂದಸ್ಸು-ಮೊದಲಾದವುಗಳಲ್ಲಿಯೂ ನಾಡಕರ್ಣಿ ಯವರು ಅನೇಕ ಪ್ರಯೋಗಗಳನ್ನು ಮಾಡಿದ್ದಾರೆ. ಈ ದೃಷ್ಟಿಯಿಂದಲೂ ಇವರ ಕಾವ್ಯಾಭ್ಯಾಸ ಅಪೇಕ್ಷಣೀಯ.

**ಕೊಂಪೆಯಲ್ಲಿ ಕೋಗಿಲೆ (ದೇಶಕುಲಕರ್ಣಿ)**

ಇದು ದೇಶಕುಲಕರ್ಣಿಯವರ ಎರಡನೆಯ ಸಂಕಲನ. ಇಲ್ಲಿನ ಕವಿತೆಗಳ ರಚನೆಯ ಹಿಂದೆ ಪ್ರಬುದ್ಧವಾದ, ಬದುಕನ್ನು ಗಂಭೀರವಾಗಿ ಸ್ವೀಕರಿಸಿದ ಮನಸ್ಸಿದೆಯೆಂಬುದು ಈ ಸಂಕಲನದ ಯಾವ ಕವಿತೆಯನ್ನು ಓದಿದರೂ ಅನುಭವಕ್ಕೆ ಬರುತ್ತದೆ. ಇಲ್ಲಿನ ಯಾವ ಕವಿತೆಯೂ ರಚನೆಯ ಚಪಲದಿಂದ ಮೂಡಿದ್ದಲ್ಲ ವೆನ್ನಿಸುವುದು ಕುಲಕರ್ಣಿಯವರಿಗೆ ಕಾವ್ಯಸೃಷ್ಟಿಯ ಬಗೆಗಿರುವ ಶ್ರದ್ಧೆಯನ್ನು ಸೂಚಿಸುತ್ತದೆ. ಎರಡುಸಾಲಿನ 'ಜವಾಬ್ದಾರಿ'ಯಂತಹ ಪುಟ್ಟಕವನ ಸಹ ಜವಾಬ್ದಾರಿಯುತ ರಚನೆಯಾಗಿದೆ. ಇದು ಕುಲಕರ್ಣಿಯವರ ಕಾವ್ಯವನ್ನು ನಾವು ಸ್ವೀಕರಿಸಬೇಕಾದ ಕ್ರಮವನ್ನು ಸೂಚಿಸುತ್ತದೆ.

ಬದುಕಿನ ವಿಸಂಗತಿ-ಕುಲಕರ್ಣಿಯವರ ಕಾವ್ಯದ ಕೇಂದ್ರಶಕ್ತಿ. ಈ ವಿಸಂಗತಿ ಯನ್ನು ಅವರು ಗ್ರಹಿಸುವ, ಅಭಿವ್ಯಕ್ತಿಸುವ ಕ್ರಮ-ದಾರ್ಶನಿಕನ, ತತ್ವಜ್ಞಾನಿಯ ರೀತಿಯದಲ್ಲ. ಆದ್ದರಿಂದಲೇ ಅವರ ಕಾವ್ಯ ರಕ್ತ ಮಾಂಸವನ್ನು ತುಂಬಿಕೊಂಡು ಜೀವಂತ ಮಿಡಿಯುತ್ತದೆ, ಆಪ್ತವಾಗುತ್ತದೆ. ಇವರ ಕಾವ್ಯ ಪ್ರಬುದ್ಧತೆ-ಬದುಕಿನ ಮುಗ್ಧತೆಯನ್ನು ಕಳೆದುಕೊಂಡಿಲ್ಲವೆನ್ನುವುದೇ ಕುಲಕರ್ಣಿಯವರ ಕಾವ್ಯದ ಬಹುಮುಖ್ಯ ಅಂಶ. ಇಲ್ಲಿನ ಪ್ರಖರ ಚಿಂತನೆ ಕಾವ್ಯಶಕ್ತಿಯನ್ನು ಮಸುಳಿಸಿ ಬಿಡುವಂಥದು. ಆದರೆ ತಮ್ಮೆಲ್ಲ ವಿಚಾರಗಳನ್ನು ಕಾವ್ಯಶರೀರದೊಳಗೇ ಅಭಿವ್ಯಕ್ತಿಸುವ ಛಲ-ಅವರ ಕಾವ್ಯಕ್ಕೆ ವಿಶಿಷ್ಟ ತೇಜಸ್ಸು ನೀಡಿದೆ. 'ಅಮೂರ್ತ' ವೆಂಬ ಕವಿತೆಯನ್ನೇ ನೋಡಿ : ಬದುಕಿನ ಮೂಲ ಕೇಂದ್ರವೇ ತಪ್ಪಿಹೋದ ವಿಫಲತೆಯನ್ನು ಈ ಕವನ ಕಟ್ಟಿಕೊಡುವ ರೀತಿ ಬೆರಗು ಹುಟ್ಟಿಸುತ್ತದೆ. ಈ ಕವನದ ಶರೀರ ತನ್ನೊಳಗಿನ ಅರ್ಥವನ್ನು ಎಷ್ಟು ಸಮರ್ಥವಾಗಿ ಧರಿಸಿದೆಯೆಂಬುದು ಕುಲಕರ್ಣಿಯವರ ಕಾವ್ಯರಚನಾ ಸಾಮರ್ಥ್ಯಕ್ಕೆ ನಿದರ್ಶನವೆನ್ನಬಹುದು.

ಕೊಂಪೆಯಲ್ಲಿ ಕೋಗಿಲೆ, ಇದು ಬರಿ ಬೆಳಗಲ್ಲೋ ಅಣ್ಣ, ಪರೋಕ್ಷ-ಮೊದಲಾದ ಕವಿತೆಗಳು ಮತ್ತೆ ಮತ್ತೆ ಓದಿಸಿಕೊಳ್ಳುವ ಶಕ್ತಿ ಪಡೆದಿವೆ. ವೈದೃಶ್ಯ ವಸ್ತು ಸಂಗತಿಗಳನ್ನು ಒಂದು ಸಮರ್ಥ ಬಂಧದಲ್ಲಿ ಒಟ್ಟಿಗೆ ಹಿಡಿಯುವುದರ ಮೂಲಕ ಹೊಸ ಅನುಭವದ ಕಾಣ್ಕೆ ನೀಡುವುದು ಉತ್ತಮ ಕಾವ್ಯದ ಲಕ್ಷಣ.

ಅಂಥ ವಿಧಾನವನ್ನು ಕುಲಕರ್ಣಿಯವರು ತಮ್ಮ ಯಶಸ್ವೀ ಕವಿತೆಗಳಲ್ಲಿ ಸಮರ್ಥವಾಗಿ ಅಳವಡಿಸಿಕೊಂಡಿದ್ದಾರೆ.

ಭಾವಲೋಕ (ಸುಮತೀಂದ್ರ ನಾಡಿಗ)

"ನಮ್ಮ ಸಂವೇದನೆಯಲ್ಲಿ ಬದಲಾವಣೆಯಾಗಿರುವ ಈ ಕಾಲದಲ್ಲಿ ಕಾವ್ಯದಲ್ಲಿಯೂ ಬದಲಾವಣೆಯಾಗಬೇಕಾಗಿದೆ...ಶೈಶವದಲ್ಲಿ ನಮಗೆ ಸಾಧ್ಯವಾಗುವ ಸಹಜ ಸ್ಪಂದನಗಳನ್ನು ಉಳಿಸಿಕೊಂಡು, ಪ್ರಬುದ್ಧನ ಆಸಕ್ತಿಗಳನ್ನು ಬೆಳೆಸಿಕೊಂಡು ಪಿತೃಭಾವದಿಂದ ಲೋಕ ಕಲ್ಯಾಣವನ್ನು ಚಿಂತಿಸುತ್ತಿರುವ ಸಮಗ್ರ ವ್ಯಕ್ತಿತ್ವದಿಂದ ಮೂಡಿಬರುವ ಕಾವ್ಯ ಭಿನ್ನರುಚಿಯ ಜನರಿಗೆ ಪ್ರಿಯವಾಗುವ ಹಾಗೆ ಕೇವಲ ಪ್ರಬುದ್ಧ ಬರೆದ ಕಾವ್ಯ ಪ್ರಿಯವಾಗುವುದಿಲ್ಲ. ನಾವು ಜನಪ್ರಿಯತೆಯ ಬಗ್ಗೆ ನಾಚಿಕೆಪಡಬೇಕಾಗಿಲ್ಲ...ಈಗ ಭಾವನೆಗಳ ನೇರವಾದ ಅಭಿವ್ಯಕ್ತಿ ಬೇಕಾಗಿದೆ. ಮುಸುಕಿನ ಗುದ್ದುಗಳು, ಲೇವಡಿ, ಬುದ್ಧಿಯ ಕಸರತ್ತುಗಳು—ಬೇಕಾಗಿಲ್ಲ" (ಮುನ್ನುಡಿ, ಭಾವಲೋಕ)

—ಹೀಗೆ ಕೆಲವು ಸೂತ್ರಗಳನ್ನಿಟ್ಟುಕೊಂಡೇ ಕಾವ್ಯರಚನೆಗೆ ತೊಡಗಿರುವ ಸುಮತೀಂದ್ರ ನಾಡಿಗರ ಇತ್ತೀಚಿನ ಸಂಕಲನ 'ಭಾವಲೋಕ'ದಲ್ಲಿ ಹೊಸ ಹಾದಿಯೊಂದನ್ನು ತೆಗೆಯುವ ಮಹತ್ವಾಕಾಂಕ್ಷೆಯ ಹಂಬಲವಿದೆ.

ಬೌದ್ಧಿಕ ಕಸರತ್ತಿನಿಂದ ಕಾವ್ಯ ಹುಟ್ಟುತ್ತದೆಂದು ಸಾಹಿತ್ಯಾಭ್ಯಾಸಿಗಳು ಯಾರೂ ಭಾವಿಸಿಲ್ಲ. 'ವ್ಯುತ್ಪತ್ತಿಯಿಂದಾಗಬಹುದಾದ ದೋಷವನ್ನೂ ಸಹ ಪ್ರತಿಭೆ ಮುಚ್ಚಬಲ್ಲುದು, ಆದರೆ ಪ್ರತಿಭೆಯಿಲ್ಲದೆ ಕಾವ್ಯವೇ ಹುಟ್ಟದು'-ಎಂಬುದು ನಮ್ಮ ಆಲಂಕಾರಿಕರೇ ಹೇಳಿರುವ ಮಾತು.

ಒಂದು ಉದ್ದೇಶವಿಟ್ಟುಕೊಂಡು ಹೊರಟು ಕಾವ್ಯ ಬರೆಯುವುದೇನೂ ತಪ್ಪಲ್ಲ. ಹಾಗೆ ನೋಡಿದರೆ ನಾಡಿಗರ ಉದ್ದೇಶ ಮಹತ್ವವಾದುದೇ. ಆದರೆ ಅದು ಎಷ್ಟರಮಟ್ಟಿಗೆ ಕಾವ್ಯವಾಗುತ್ತದೆನ್ನುವುದೇ ಪ್ರಶ್ನೆ. ನವ್ಯ ಕಾವ್ಯ ಪರಂಪರೆಯಲ್ಲಿ ಉತ್ತಮ ಕವಿತೆಗಳನ್ನು ರಚಿಸಿರುವ ನಾಡಿಗರಿಗೆ ಕಾವ್ಯಶಿಲ್ಪದ ಬಗ್ಗೆ ಸ್ಪಷ್ಟ ತಿಳುವಳಿಕೆಯಿದೆ. ಉತ್ತಮ ಕಾವ್ಯದ ಪರಿಚಯ ಅವರಿಗೆ ಧಾರಾಳವಾಗಿದೆ. ಆದರೆ ಈ ಎಲ್ಲ ಹಿನ್ನೆಲೆಯೂ ಈ ಸಂಕಲನ ಕಾವ್ಯರಚನೆಯ ಸಂದರ್ಭದಲ್ಲಿ ಹದವಾಗಿ ಒದಗಿಬಂದಿಲ್ಲವೆನ್ನುವುದು ವಿಷಾದದ ಸಂಗತಿ.

> ಎಲೆ ಭಾವಗೀತವೇ, ನಿರಾತಂಕವಾಗಿ ಹರಿದಾಡು
> ಈ ಬಾಳಿಗಿಂತಲೂ ಶ್ರೇಷ್ಠ ಕಾವ್ಯವೇ ಇಲ್ಲ-ಹೀಗೆಂದು-ಸಾರು ಹೋಗು
> ಇಲ್ಲಿ ನೋವಿಲ್ಲವೆಂದಲ್ಲ, ಹಿಂಸೆಯೂ ಕ್ರೌರ್ಯವೂ ಇಲ್ಲವೆಂದಲ್ಲ
> ಗಾಯಗಳ ಮಾಯಿಸು, ಕಣ್ಣೀರ ಒರೆಸು

ಒದೆವವರ ಕಾಲನ್ನು ಕಟ್ಟಿಹಾಕು, ಕ್ರೂರಿಗಳ ಮಟ್ಟಹಾಕು
ನರಸತ್ತ ಬಡವರ ಮೈಯ ವಿದ್ಯುತ್ತಾಗು
ಕ್ರಾಂತಿಕಾರರ ಕೈಯ ಸಿಡಿಲಾಗು
ಸಮಾನತೆಯ ತರುವ ಸಾಹಸವಾಗು
ಸಹನಾವವತು ಎಂದು ಮೊಳಗುಸೋಗು

(ಭಾವಗೀತೆ)

ಈ ಕವಿತೆ ಇಲ್ಲಿಗೇ ಏಕೆ ನಿಂತಿತು ಎಂದು ತಿಳಿಯುವುದಿಲ್ಲ. ಕಪ್ಪುದೇವತೆಯಂಥ ಕವಿತೆ ಬರೆದ ನಾಡಿಗರೇ ಇಂಥದನ್ನೂ ಬರೆದರೆನ್ನುವುದು ಆಶ್ಚರ್ಯ. ಎಲ್ಲವೂ ಭಾಷೆಯಲ್ಲಿ ಮೈತಾಳಬೇಕು. ಕಾವ್ಯ ಶರೀರದಲ್ಲೇ ಅರ್ಥ ಆವಿರ್ಭವಿಸಬೇಕು ಎನ್ನುವ ಅಂಶ ನಾಡಿಗರಿಗೆ ತಿಳಿಯದಂಥದೇನಲ್ಲ. ಇಂಥ ಕವಿತೆಗಳು ಈ ಸಂಕಲನದಲ್ಲಿ ಸಾಕಷ್ಟಿವೆ.

ಮೌನ, ತೀರ್ಥರೂಪ, ಬಾತುಕೋಳಿ, ನಾನು ಕಂಡ ಅಮೆರಿಕದ ಕೆಲವು ಭಾಗಗಳು, ಎಲ್ಲಿ ಹೋದವೇ ಆ ದಿನ—ಮೊದಲಾದುವು ಸಂಕಲನದ ಉತ್ತಮ ರಚನೆಗಳು.

ನಿಮ್ಮವೂ ಇರಬಹುದು (ಸುಬ್ರಾಯ ಚೊಕ್ಕಾಡಿ)

ಸುಬ್ರಾಯ ಚೊಕ್ಕಾಡಿಯವರ ಮೂರನೆಯ ಸಂಕಲನ. ನವ್ಯ ಮಾರ್ಗದಲ್ಲಿ ದೃಢವಾದ ಹೆಜ್ಜೆಗಳನ್ನಿಟ್ಟ ಮುಖ್ಯ ತರುಣ ಕವಿಗಳಲ್ಲಿ ಚೊಕ್ಕಾಡಿಯವರೂ ಒಬ್ಬರು. ಪ್ರಥಮ ಸಂಕಲನದಲ್ಲಿ ಗಂಡು–ಹೆಣ್ಣಿನ ಸಂಬಂಧದ ಬೆಚ್ಚನೆಯ ಅನುಭವಗಳನ್ನು ಆಕರ್ಷಕವಾಗಿ, ಬಿಚ್ಚುಮಾತಿನಿಂದ ಚಿತ್ರಿಸಿದ ಚೊಕ್ಕಾಡಿಯವರು ನಂತರದ ಸಂಕಲನಗಳಲ್ಲಿ ಸ್ಪಷ್ಟ ಬೆಳವಣಿಗೆಯನ್ನು ಪ್ರಕಟಿಸಿದ್ದಾರೆ.

ಜನಗಳ ನಡುವೆ ನಿಂತು ಕಾವ್ಯರಚನೆಗೆ ತೊಡಗಿರುವುದು ಈ ಸಂಕಲನದ ಕವಿತೆಗಳಲ್ಲಿ ಕಂಡುಬರುವ ಮುಖ್ಯ ಅಂಶ. ಸಮಕಾಲೀನ ಆಸಕ್ತಿಯ ರಕ್ತವನ್ನು ತಮ್ಮ ಕಾವ್ಯಕ್ಕೆ ತುಂಬಿಕೊಳ್ಳಲು ಚೊಕ್ಕಾಡಿಯವರು ಇಲ್ಲಿನ ಕವಿತೆಗಳಲ್ಲಿ ಪ್ರಯತ್ನಿಸಿದ್ದಾರೆ.

ಕನಸು ಹಾಗೂ ವಾಸ್ತವದ ಘರ್ಷಣೆ–ಇಲ್ಲಿನ ಬಹುಪಾಲು ಕವಿತೆಗಳ ಹಿಂದಿನ ಕೇಂದ್ರಶಕ್ತಿ. ಸ್ವಲ್ಪ ಹದ ತಪ್ಪಿದರೂ ಹತಾಶೆಯ ಹಳಹಳಿಕೆಯಾಗುವ ಸಾಧ್ಯತೆಯಿಂದ ಚೊಕ್ಕಾಡಿಯವರು ಪಾರಾಗಿರುವುದರಲ್ಲಿ ಅವರ ಕಾವ್ಯಶಕ್ತಿಯಿದೆ. ಚೊಕ್ಕಾಡಿಯವರ ಕವನಗಳಲ್ಲಿ ಮೆಚ್ಚಿಕೆಯಾಗುವ ಮುಖ್ಯಗುಣ–ಅವು ಓದಿಸಿಕೊಳ್ಳುತ್ತವೆ. ಇಲ್ಲಿನ ಅನೇಕ ಕವಿಗಳನ್ನು ನಾನು ಓದಿ ಸಂತೋಷ ಪಟ್ಟಿದ್ದೇನೆ. ಆ ಸಂತೋಷದ ಜೊತೆ ಜೊತೆಗೇ ಮನಸ್ಸು ತುಂಬಿ ನಿಲ್ಲುವ ವಿಷಾದದಲ್ಲಿ ಕವಿತೆ ನಮ್ಮನ್ನು ಗೆಲ್ಲುತ್ತದೆ.

ಆಪ್ತದನಿಯು, ಸಂವಾದದ ಧಾಟಿಯು ಶೈಲಿ–ಎಲ್ಲಊ ಕೃತಕವಾಗುವುದಿಲ್ಲ. ಸರಳತೆ ಕವನದ ವಸ್ತು–ಬಂಧವನ್ನು ಸರಳಗೊಳಿಸುವುದಿಲ್ಲ. ಸಂವಾಹನ ಸವಾಲಾಗಿ ಸಹೃದಯನನ್ನು ಬೆಚ್ಚಿಬೀಳಿಸುವುದಿಲ್ಲ. ಕಾವ್ಯದಲ್ಲಿ ಅಪೇಕ್ಷಣೀಯವಾದ ಈ ಎಲ್ಲ ಇತ್ಯಾತ್ಮಕ ಅಂಶಗಳನ್ನೂ ಒಳಗೊಳ್ಳಲು ಪ್ರಯತ್ನಿಸುತ್ತಿರುವ ಚೊಕ್ಕಡಿಯವರ ಕಾವ್ಯ ಬೆಳವಣಿಗೆಯಲ್ಲಿ 'ನಿಮ್ಮವೂ ಇರಬಹುದು' ಬಹು ಮುಖ್ಯಘಟ್ಟವೆಂದು ನಾನು ಭಾವಿಸುತ್ತೇನೆ.

ಹಾಡು ಕಟ್ಟುವ ಮಾತು (ಜಯಸುದರ್ಶನ)

ಇದು ಜಯಸುದರ್ಶನ ಅವರ ನಾಲ್ಕನೆಯ ಕವನ ಸಂಕಲನ. ಕವಿಯ ಕಾವ್ಯಜೀವನದ ಬಹುಮುಖ್ಯ ತಿರುವೊಂದನ್ನು ನಾವು ಈ ಸಂಕಲನದಲ್ಲಿ ಕಾಣುತ್ತೇವೆ. ಜಯಸುದರ್ಶನರು ಜೀವನಮುಖಿಯಾಗಿರುವುದೇ– ಈ ಮುಖ್ಯ ಅಂಶ. ಇದುವರೆಗಿನ ಜಯಸುದರ್ಶನರ ಕಾವ್ಯ ತನಗಿಲ್ಲದ ಬದುಕನ್ನು ('ಇಲ್ಲದ್ದು'ಸಂಕಲನ) ಕುರಿತ, ಸಾವನ್ನು ಕುರಿತ (ನಂತರದ ಸಂಕಲನಗಳು) ವ್ಯಾಖ್ಯಾನವಾಗಿತ್ತು. ಒಂದು ರೀತಿ ದಾರ್ಶನಿಕ ಕಾವ್ಯದ ಸಮೀಪದಂಚಿನಲ್ಲೇ ಇದರ ನಡಿಗೆಯಿತ್ತು. 'ಸಾಹಿತ್ಯ ಕಾವ್ಯಗಳಿಗಿಂತ ತತ್ವಜ್ಞಾನಿಗಳ, ದಾರ್ಶನಿಕರ ಕೃತಿಗಳು ನನ್ನಮೇಲೆ ಹೆಚ್ಚು ಪ್ರಭಾವ ಬೀರಿವೆ' ಎಂಬ ಕವಿಯ ಮಾತುಗಳೂ ಸಹ ಇದನ್ನೇ ಪೋಷಿಸುತ್ತವೆ. ಈ ಕವಿ ಬದುಕನ್ನು ಸಾವಿನ ಮೂಲಕವೇ ಪ್ರವೇಶ ಮಾಡಿದ್ದರಿಂದಾಗಿ ಜೀವನೋತ್ಸಾಹಕ್ಕಿಂತ ವಿಷಾದವೇ, ಜನಮುಖಿಯಾಗುವುದಕ್ಕಿಂತ ಏಕಾಂತವೇ ಪ್ರಿಯವಾದದ್ದರಲ್ಲಿ ಆಶ್ಚರ್ಯವೇನಿಲ್ಲ. ಆದರೆ ಈ ಸಂಕಲನದಲ್ಲಿ ಜಯಸುದರ್ಶನರು ಹೊಸ ಉತ್ಸಾಹದಿಂದ ಬದುಕಿಗೆ ಪ್ರವೇಶಿಸಿದಂತೆ ಕಂಡುಬರುತ್ತದೆ. ಅಂತರಂಗದ ಒಳಕೋಣೆಯಿಂದ ಹೊರಬಂದು ಜಯಸುದರ್ಶನ ಇಲ್ಲಿ ಮಾತನಾಡುತ್ತಿದ್ದಾರೆ. ತನಗೆ ತಾನೇ ಮಾತನಾಡಿಕೊಳ್ಳುತ್ತಿದ್ದ ಕವಿ ಇಲ್ಲಿ ಸಂವಾದಕ್ಕೆ ತೊಡಗಿದ್ದಾರೆ.

ಜನಬೇಕಯ್ಯ ಜನಕ್ಕೆ ಎಲ್ಲ ಕಾಲಕ್ಕೆ, ತತ್ಕಾಲಕ್ಕೆ
ಬೇರೊಂದು ನೆಲೆ ಇಲ್ಲದಾಗಲು ತಮಗೆ ತಾವೇ ಸಂಗತರಾಗಿ
ಒಬ್ಬರೊಬ್ಬರಿಗೆ ಒತ್ತಾಸೆಯಾಗಿ ಕಾಲ ತಳ್ಳಲಿಕ್ಕೆ
ಈ ಸಮೂಹದಲಿ ನಿನ್ನ ಬಯಸುವ ಜನರ ಸಾಮೀಪ್ಯ
ನೀನು ಹೊಂದುವುದು
ಬಳಿ ಬಂದವರ ನೀನು ಮನವಾರೆ ಬಯಸುವಂತಾಗುವುದು
ಇದಕ್ಕೆ ಮಿಗಿಲಾದ ಸಿರಿ ಇನ್ನೆಂಟೆ ಹೇಳು ?

(ಜನ ಬೇಕು ಜನಕ್ಕೆ)

ಹಂಚಿಕೊಳ್ಳಲು ತಕ್ಕ ಇನ್ನೊಂದು
ಜೀವ (ಒಮ್ಮೊಮ್ಮೆ)

ಹೃದಯವುಳ್ಳಂಥ ಯಾವನೂ ನಿಜವಾಗಿ
ಎಂದೂ ಒಂಟಿಯಲ್ಲ
(ಒಮ್ಮೊಮ್ಮೆ)

ಪ್ರಿಯೆ ಶಕುಂತಲೆಯೇ, ಬಾ
(ದುಷ್ಯಂತ ಗೀತ)

ಸ್ವಪ್ನ ಲೋಕವ ಬಿಟ್ಟು
ಅದು ಹಾರಿಬಂತು ನಿನ್ನ ಸನಿಹಕ್ಕೆ
(ಸಂಗ)

ಇಲ್ಲೆಲ್ಲ ಕವಿ ಈ ಜೀವನದೊಡನೆ ಒಂದಾಗುವ, ಬದುಕಿನೊಡನೆ ಬೆರೆಯುವ ತೀವ್ರ ಬಯಕೆಯನ್ನು ಪ್ರಕಟಿಸುತ್ತಾರೆ. ಇದುವರೆಗೆ ಅನುಭಾವಿಯಂತೆ ಮಾತನಾಡುತ್ತಿದ್ದ ಕವಿ ಇಂದ್ರಿಯಾನುಭವಗಳನ್ನು, ಈ ಬದಕನ್ನು ಹೊಸ ಬೆರಗಿನಿಂದ ಅಪ್ಪಿಕೊಳ್ಳುವ ಉತ್ಸಾಹವನ್ನು ಕಾಣುತ್ತೇವೆ. ಹೀಗಾಗಿ ಜಯಸುದರ್ಶನರ ಕಾವ್ಯ ರೀತಿಯೂ ಸಹಜವಾಗಿ ಈ ಸಂಕಲನದಲ್ಲಿ ಹೊಸ ಹಾದಿ ಹಿಡಿದಿವೆ. ವಿಚಾರ, ತಾತ್ವಿಕ ಲೋಕದಿಂದ ಹೊರಬಂದು ಅನುಭವ ಲೋಕದಲ್ಲಿ ಇವರ ಕಾವ್ಯ ಹೊಸ ಜೀವ ಪಡೆಯುತ್ತಿದೆ. ಗುಣಾತ್ಮಕವಾಗಿ ನಾನಿಲ್ಲಿ ಈ ಬದಲಾವಣೆಯನ್ನು ಕುರಿತು ಚರ್ಚಿಸುತ್ತಿಲ್ಲ. ಆಗಿರುವ ಮುಖ್ಯ ಬದಲಾವಣೆ ಮಾತ್ರ ಈ ಕವಿಯ ಬಗ್ಗೆ ಆಸಕ್ತಿ ಕೆರಳಿಸುತ್ತದೆ.

ಮರೆತ ಸಾಲುಗಳು (ಎಚ್. ಎಸ್. ವೆಂಕಟೇಶ ಮೂರ್ತಿ)

ವೆಂಕಟೇಶಮೂರ್ತಿಯವರು ಬೇರೆ ಬೇರೆ ಸಂದರ್ಭಗಳಲ್ಲಿ ಬರೆದ ಗೀತೆಗಳನ್ನು ಒಟ್ಟಿಗೆ ಸಂಗ್ರಹಿಸಿ ಇಲ್ಲಿ ಪ್ರಕಟಿಸಿದ್ದಾರೆ. ಇಲ್ಲಿನ ಬಹುಪಾಲು ರಚನೆಗಳು ಹಾಡಬಹುದಾದಂಥವು. ನವೋದಯ ಕಾವ್ಯದ, ಅಷ್ಟೇ ಏಕೆ–ನಮ್ಮ ಒಟ್ಟು ಕಾವ್ಯ ಪರಂಪರೆಯ ಉತ್ತಮಾಂಶಗಳನ್ನು ಮತ್ತೆ ಇಂದು ಅರ್ಥಪೂರ್ಣವಾಗಿ ಒಳಗೊಳ್ಳುವ ಗಂಭೀರ ಪ್ರಯತ್ನ ಮಾಡುತ್ತಿರುವ ಕವಿಗಳಲ್ಲಿ ವೆಂಕಟೇಶಮೂರ್ತಿಯವರು ಮುಖ್ಯರು.

ಇಲ್ಲಿನ ಗೀತೆಗಳು ಭಾವಗೀತೆಗಳ ಮಾದರಿಯವು. ಆದರೆ ನಿಜವಾದ ಅರ್ಥದಲ್ಲಿ ಇವುಗಳನ್ನು ಭಾವಗೀತೆಗಳೆಂದು ಕರೆಯುವುದು ಕಷ್ಟ. ಗೇಯತೆಯ ಗುಣವನ್ನು ತಮ್ಮ ಅಭಿವ್ಯಕ್ತಿಯ ರೀತಿಯಲ್ಲಿ ಬಳಸಿಕೊಳ್ಳುವ ಪ್ರಯೋಗಗಳಾಗಿ ವೆಂಕಟೇಶ ಮೂರ್ತಿಯವರು ಈ ಗೀತೆಗಳನ್ನು ರಚಿಸಿದ್ದಾರೆನ್ನಿಸುತ್ತದೆ. ಸಂವಹನದ ಒಂದು ಸಾಧ್ಯತೆಯಾಗಿಯೂ ಈ ಪ್ರಯತ್ನಗಳನ್ನು ಗಮನಿಸಬಹುದು.

ಮಾತಲ್ಲಿ ಹೂತಂತ  ಆ ನಾದ ಈ ನಾದ
ನಾನಾದ ಗಳಿಗೆಗಳೆ  ಈ ಗಳಿಗೆ ಒದಗಿ

ಕವಿಯ ಈ ಗಂಭೀರ ಪ್ರಯತ್ನದ ಒಂದು ಭಾಗವಾಗಿಯೇ ನಾವು 'ಮರೆತಸಾಲುಗಳು' ಸಂಕಲನದ ಗೀತೆಗಳನ್ನೂ ಗಮನಿಸಬೇಕು.

ವಿಸ್ಮಯ, ಪ್ರೀತಿ, ಸಂಬಂಧಗಳ ತೊಡಕು, ನೆಲ-ಮುಗಿಲುಗಳ ಸಂಬಂಧ-ಇಲ್ಲಿನ ಗೀತೆಗಳ ವಸ್ತು. ಮುಕ್ತ ಮನಸ್ಸಿನಿಂದ ಬದುಕಿಗೆ ತನ್ನನ್ನು ಒಡ್ಡಿಕೊಳ್ಳುವ ಈ ಕವಿ ಅದರ ಎಲ್ಲ ಒತ್ತಡಗಳನ್ನೂ ಧರಿಸುವ, ಆ ಧಾರಣ ಕ್ರಿಯೆಯಲ್ಲಿಯೇ ಬದುಕಿನ ಅರ್ಥಗಳನ್ನು ಕಂಡುಕೊಳ್ಳುವ ಬಗೆ-ಇಲ್ಲಿಯೂ ಇದೆ. ಅದರಿಂದಾಗಿಯೇ ಮೂರ್ತಿಯವರ ಕಾವ್ಯವಸ್ತುವಿಗೆ ಯಾವುದೇ ನಿರ್ಬಂಧವಿಲ್ಲ, ಯಾವುದು ಬೇಕಾದರೂ ಇವರ ಕಾವ್ಯಕ್ಕೆ ವಸ್ತುವಾಗಲು ಸಾಧ್ಯ. ನವೋದಯ ಕವಿಗಳ ಸಮೃದ್ಧತೆಯನ್ನು, ವೈವಿಧ್ಯತೆಯನ್ನು ಮೂರ್ತಿಯವರಲ್ಲಿ ನಾವು ಕಾಣಲು ಕಾರಣವಾಗುವ ಅಂಶಗಳಲ್ಲಿ ಇದೂ ಒಂದು ಅನ್ನಿಸುತ್ತದೆ.

ಮೂರ್ತಿಯವರ ಕಾವ್ಯದಲ್ಲಿ ಮತ್ತೆ ಮತ್ತೆ ಕಾಣಿಸಿಕೊಳ್ಳುವ-ವ್ಯಕ್ತ ಅವ್ಯಕ್ತಗಳ ನಡುವಿನ ಸಂಬಂಧವನ್ನು ನಾವು ಇಲ್ಲಿಯೂ ಗುರ್ತಿಸಬಹುದು :

ಮೋಡದಿಂದ ಮಳೆ ಹನಿಗಳು ಒಡೆದು
            ಮಣ್ಣಿಗೆ ಬೀಳುತಿವೆ
ಬಿರುಬಿಸಿಲಿಗೆ ಹಬೆಯಾದ ನೀರಹನಿ
            ಮುಗಿಲಿಗೆ ಚಿಮ್ಮುತಿವೆ
ಬಾನಿನ ಬೋದಿಗೆ ಹಿಡಿಯಲು ಮರಗಳು
            ಹರೆಗಳ ಚಾಚುತಿವೆ
ಮರ ಬೆಳೆದಷ್ಟೂ ಮಣ್ಣಿನ ಆಳಕೆ
            ಬೇರುಗಳಿಳಿಯುತಿವೆ.

(ಹಾಡು. 12)

ಮೇಲಕ್ಕೆ ಬೆಳೆದಷ್ಟೂ ಆಳಕ್ಕೆ ಬೇರು ಚಾಚುತ್ತಾ ಹೋಗುವ 'ವೃಕ್ಷ' ವೆಂಕಟೇಶ ಮೂರ್ತಿಯವರ ಕಾವ್ಯದ ಆಶಯವನ್ನು ಪ್ರತಿಮಿಸುವ ಪ್ರಧಾನ ಪ್ರತಿಮೆಯೆನ್ನಬಹುದು.

'ಮರೆತ ಸಾಲುಗಳು' ಮೂರ್ತಿಯವರ ಕಾವ್ಯ ಬೆಳವಣಿಗೆಯಲ್ಲಿ ಅಷ್ಟೇನೂ ಮುಖ್ಯ ಸಂಕಲನವಲ್ಲವಾದರೂ ಅವರ ಒಟ್ಟು ಕಾವ್ಯಾಭ್ಯಾಸದ ಹಿನ್ನೆಲೆಯಲ್ಲಿ ಕೆಲವು ವಿಶಿಷ್ಟ ಕಾರಣಗಳಿಗಾಗಿ ಇದು ಗಮನ ಸೆಳೆಯುತ್ತದೆ.

ನೆತ್ತರಲ್ಲಿ ನೆಂದ ಹೂವು (ಬರಗೂರು ರಾಮಚಂದ್ರಪ್ಪ)

'ಮರಕಂಟಿಕ' ಮೊದಲ ಸಂಕಲನದ ಹತ್ತು ವರ್ಷಗಳನಂತರ ರಾಮಚಂದ್ರಪ್ಪನವರು ತಮ್ಮ ಎರಡನೆಯ ಸಂಕಲನ 'ನೆತ್ತರಲ್ಲಿ ನೆಂದ ಹೂವು' ಪ್ರಕಟಿಸಿದ್ದಾರೆ. ಬರಗೂರರು ಬಂಡಾಯ ಸಾಹಿತ್ಯ ಚಳುವಳಿಯ ಮುಂಚೂಣಿಯಲ್ಲಿ ನಿಂತವರು. ಈ ಚಳುವಳಿಗೊಂದು ತಾತ್ವಿಕ ನೆಲೆಯನ್ನು ಒದಗಿಸಲು ಪ್ರಯತ್ನಿಸುತ್ತಿರುವವರು. ಆದರೆ ಅದನ್ನು ತಮ್ಮ ಕೃತಿಗಳ ಮೂಲಕವೇ ಆಗುಮಾಡಿ ತೋರಿಸಲು ಅವರಿಗೆ ಸಾಧ್ಯವಾಗದೇ ಇರುವುದು ಮಾತ್ರ ವಿಪರ್ಯಾಸವೇ ಸರಿ. ತಾತ್ವಿಕ ಹಿನ್ನೆಲೆಯಿದ್ದೂ ವಸ್ತುವಿನ ಸಮಗ್ರ ಶೋಧನೆ ಸಾಧ್ಯವಾಗದೇ ಹೋದರೆ ಉತ್ತಮ ಕೃತಿರಚನೆ ಸಾಧ್ಯವಾಗದೆನ್ನುವುದಕ್ಕೆ ರಾಮಚಂದ್ರಪ್ಪನವರ ಈ ಕೃತಿ ಉತ್ತಮ ನಿದರ್ಶನ. ಸಿದ್ಧಲಿಂಗಯ್ಯರಂಥವರ ಕಾವ್ಯ ತನ್ನ ತೀವ್ರತೆಯಿಂದಲೇ ಶಕ್ತಿಯುತವಾಗಿಬಿಡುತ್ತವೆ. ಬರಗೂರರ ಭಾಷೆಗೆ ಅಂಥ ತೀವ್ರತೆ ಸಹ ದಕ್ಕುವುದಿಲ್ಲ. ಹೀಗಾಗಿ ಈ ಸಂಕಲನದ ಬಹುಪಾಲು ರಚನೆಗಳು ಕೇವಲ ಹಾಡುಗಳಾಗಿ ನಮ್ಮ ಗಮನ ಸೆಳೆಯುತ್ತವೇ ಹೊರತು ಆದರಾಚೆಗೆ ನಮ್ಮನ್ನು ಕರೆದೊಯ್ಯುವುದಿಲ್ಲ.

ಹಾಡುವುದಕ್ಕೆ ಬರುವಂತಿದ್ದೂ ಉತ್ತಮ ಕವಿತೆಯಾಗುವ ರಚನೆಗಳನ್ನು ಕೊಡುವುದು ನಮ್ಮ ಕಾವ್ಯದ ಒಂದು ಸವಾಲಾಗಬೇಕಾಗಿದೆಯೆಂದು ಬರಗೂರರು ಹೇಳುತ್ತಾರೆ. ಆದರೆ ಇದನ್ನು ಅವರು ತಮ್ಮ ಕಾವ್ಯಸಂದರ್ಭದಲ್ಲಿ ಎದುರಿಸಿದಂತೆ ತೋರುವುದಿಲ್ಲ.

ನವ್ಯಕಾವ್ಯದ ಬಂಧವನ್ನು ಬಿಟ್ಟಲ್ಲದೆ ಬಂಡಾಯ ಕಾವ್ಯಕ್ಕೆ ತನ್ನದೇ ವ್ಯಕ್ತಿತ್ವ ವಿನ್ಯಾಸ ಲಭ್ಯವಾಗುವುದಿಲ್ಲ. ಆದ್ದರಿಂದ ಬಂಡಾಯ ಕಾವ್ಯ ವಸ್ತುವಿನಲ್ಲಷ್ಟೇ ಅಲ್ಲ, ಬಂಧದಲ್ಲೂ ಜನಮುಖಿಯಾಗಬೇಕು. ಈ ಪ್ರಯೋಗ ಕವಿತೆ ಹಾಡಲೂ ಸಾಧ್ಯವಾಗುವುದರ ಮೂಲಕ ಜನ ಸಂಮುಖಿಯಾಗಬೇಕೆಂಬುದು ಬರಗೂರರ ಪ್ರಯತ್ನ. ಕಾವ್ಯ ಜನಮುಖಿಯಾಗಬೇಕೆಂಬ ನಿಲುವು ಸರಿಯಾದದ್ದೇ. ಆದರೆ ಅದು ಕಾವ್ಯ ಸೂಕ್ಷ್ಮಗಳನ್ನು ಬಿಟ್ಟುಕೊಡದೆ ಈ ಆಯಾಮವನ್ನೂ ಒಳಗೊಳ್ಳಬೇಕೇ ಹೊರತು ಜನಮುಖಿಯಾಗುವ ರಭಸದಲ್ಲಿ ಈ ಎಚ್ಚರವನ್ನು ಕಳೆದುಕೊಳ್ಳಬಾರದು. ಜೀವಂತ ಕಾವ್ಯ ವೈವಿಧ್ಯಮಯವಾದ ಈ ಬದುಕಿನ ಅನೇಕ ಮುಖಗಳನ್ನು ಒಳಗೊಳ್ಳುವ ಮೂಲಕವೇ ಈ ನೆಲದ ನೋವನ್ನೂ ಚಿತ್ರಿಸಬೇಕು. ಕಾವ್ಯ ಎಂದೂ ಹೋರಾಟದ ಶೈಲಿಯಲ್ಲ, ನಗಾರಿಯ ಧ್ವನಿಯಲ್ಲಿ ಮಾತನಾಡುವುದಿಲ್ಲವೆನ್ನುವ ಸತ್ಯವನ್ನು ಮನಗಾಣಬೇಕು.

ನೋವಿನ ಬೆಳಕು, ಇತಿಹಾಸ, ನಮ್ಮ ಜೀವ ನಮಗೆ ಬಿಡಿ, ನೆತ್ತರಲ್ಲಿ ನೆಂದ ಹೂ–ಮೊದಲಾದ ಕವಿತೆಗಳು ಸಂಕಲನದ ಯಶಸ್ವೀ ರಚನೆಗಳೆನ್ನಬಹುದು.

ಮಳೆಬಿದ್ದ ನೆಲದಲ್ಲಿ (ಎಚ್.ಎಸ್. ಶಿವಪ್ರಕಾಶ)

ಇದು ಈ ವರ್ಷದ ಮುಖ್ಯ ಸಂಕಲನಗಳಲ್ಲೊಂದು. ಮೊದಲ ಸಂಕಲನ 'ಮಿಲರೇಪ'ದಲ್ಲಿಯೇ ಸಾಕಷ್ಟು ಭರವಸೆ ಮೂಡಿಸಿದ ಶಿವಪ್ರಕಾಶ ತಮ್ಮ ಎರಡನೇ ಸಂಕಲನದಲ್ಲಿ ಆ ಭರವಸೆಯನ್ನು ಗಟ್ಟಿಗೊಳಿಸಿ ಕನ್ನಡ ಕಾವ್ಯಸಂದರ್ಭದಲ್ಲಿ ಬಹು ಮುಖ್ಯರೆನ್ನಿಸಿದ್ದಾರೆ.

ತೀವ್ರ ಉತ್ಕಟತೆ ಹಾಗೂ ಉನ್ನತ ಬೌದ್ಧಿಕತೆ-ಎರಡನ್ನೂ ಸಮರ್ಥವಾಗಿ ಒಳಗೊಂಡು ಕಾವ್ಯರಚಿಸುವಲ್ಲಿ ಶಿವಪ್ರಕಾಶರ ವೈಶಿಷ್ಟ್ಯವಿದೆ. ಕಾವ್ಯ ಉನ್ನತ ಹಂತದ ಬೌದ್ಧಿಕ ಚಟುವಟಿಕೆ ಎಂದು ನಂಬುವ ಶಿವಪ್ರಕಾಶರು ಅದರೊಂದಿಗೆ ನಿಗೂಢಗಳನ್ನೊಳಗೊಂಡ ಒಳಬಾಳಿನ ಶೋಧಕರೂ ಆಗುವುದರಿಂದಾಗಿ ಹೆಚ್ಚು ಮಹತ್ವದವರಾಗುತ್ತಾರೆ.

ಭಾಷೆಗೆ ಮೀರಿದ ಅನುಭವವನ್ನು ಭಾಷೆಯಲ್ಲಿಯೇ ಹೇಳಬೇಕಾದ ಸವಾಲು-ಯಾವುದೇ ಶ್ರೇಷ್ಠ ಕವಿಯ ಬಹುಮುಖ್ಯ ಸಮಸ್ಯೆ. ಈ ಸಮಸ್ಯೆಯನ್ನು ಕವಿ ಎದುರಿಸುವ ಕ್ರಮದಲ್ಲಿ ಆತನ ಕಾವ್ಯದ ಸತ್ವವಿರುತ್ತದೆ. 'ಸಿಂಗಿರಾಜನ ಸಂಪಾದನೆ', 'ಸಮಗಾರ ಭೀಮಪ್ಪ', 'ಮರುಳಶಂಕರದೇವ'-ಮೊದಲಾದ ಸಂಕಲನದ ಯಶಸ್ವೀ ಕವನಗಳಲ್ಲಿ ಶಿವಪ್ರಕಾಶರು ಈ ಸವಾಲನ್ನು ಸಮರ್ಥರೀತಿಯಲ್ಲಿ ಎದುರಿಸಿದ್ದಾರೆ. ಕಾವ್ಯ ರಿಲಿಜಿಯಸ್ ಎನ್ನುವುದರ ಸಂಪೂರ್ಣ ಅನುಭವವಾಗುವುದು ನಮಗೆ ಇಂಥ ನೆಲೆಯಲ್ಲಿಯೇ.

ವರ್ತಮಾನದ ಬಗೆಗಿನ ತೀವ್ರ ತುಡಿತ ಹಾಗೂ ಪರಂಪರೆಯ ಬಗೆಗಿನ ಅರಿವು-ಇವರ ಕಾವ್ಯಸತ್ವದ ಮತ್ತೊಂದು ಅಂಶ. ಈ ಹಿನ್ನೆಲೆಯಲ್ಲಿ ಶಿವಪ್ರಕಾಶರಿಗೆ ವಚನ ಸಾಹಿತ್ಯ ಅನೇಕ ಸಾಧ್ಯತೆಗಳ ಗಣಿಯಾಗಿದೆಯೆಂಬುದು ಗಮನಾರ್ಹ.

ಮಗು ಮತ್ತು ಹಣ್ಣುಗಳು, ಕಟ್ಟಡದ ಕೆಲಸಗಾರರು, ನವಿಲು ಇಳಿಯಿತು-ಈ ಬಗೆಯ ರಚನೆಗಳು ಶಿವಪ್ರಕಾಶರ ಗಂಭೀರ ರಚನೆಗಳಿಗಿಂತ ಭಿನ್ನರೀತಿಯವು. ಇಂಥ ಕಡೆಯೂ ಸಹ ಕವಿ ತಮ್ಮ ಕಾವ್ಯಕೌಶಲವನ್ನು ಸೊಗಸಾಗಿ ಪ್ರಕಟಿಸಿದ್ದಾರೆ.

ಹೆಚ್ಚಿನ ಅಭ್ಯಾಸವನ್ನು ಅಪೇಕ್ಷಿಸುವ ಶಿವಪ್ರಕಾಶರ ಕಾವ್ಯ ನವ್ಯೋತ್ತರ ಕಾವ್ಯ ಸಂದರ್ಭದಲ್ಲಿ ಬಹು ಮುಖ್ಯವಾದ ಧ್ವನಿ.

ಕಪ್ಪು ಕಾಡಿನ ಹಾಡು (ಸಿದ್ಧಲಿಂಗಯ್ಯ)

ಇದು ಸಿದ್ಧಲಿಂಗಯ್ಯನವರ ಮೂರನೆಯ ಸಂಕಲನ. 'ಸಾವಿರಾರು ನದಿಗಳು' ಸಂಕಲನದಲ್ಲಿಯಂತೆಯೇ ಇಲ್ಲಿಯೂ ಎರಡು ರೀತಿಯ ರಚನೆಗಳಿವೆ. ಮೊದಲನೆಯ ಬಗೆಯ ಬಹುಪಾಲು ರಚನೆಗಳು-ಹಾಡುಗಳು; ಮತ್ತೊಂದು ಬಗೆಯವು-ಕೆಲವು ಗಂಭೀರ ರಚನೆಗಳು. ಈ ಸಂಕಲನದ ಅನೇಕ ಹಾಡುಗಳು ರಂಗಭೂಮಿಗಾಗಿ ಹುಟ್ಟಿಕೊಂಡಂಥವು. ನಾಟಕದ ಸಂದರ್ಭದ ಹೊರಗೂ ಇವುಗಳಿಗೆ ಸ್ಥಾನವಿದೆ ಯೆಂದು ಅವುಗಳನ್ನಿಲ್ಲಿ ಪ್ರಕಟಿಸಿದ್ದಾರೆ.

ಮೊದಲ ಸಂಕಲನಕ್ಕೂ ಈ ಸಂಕಲನಕ್ಕೂ ಸಿದ್ದಲಿಂಗಯ್ಯನವರಲ್ಲಿ ಸಾಕಷ್ಟು ಬದಲಾವಣೆಗಳಾಗಿವೆ. ಈ ಬದಲಾವಣೆ ಕವಿಯ ಬೆಳವಣಿಗೆಯ ದ್ಯೋತಕವಾಗಿರುವುದು ಸ್ವಾಗತಾರ್ಹ. ಅಬ್ಬರದ, ಆಕ್ರೋಶದ ದನಿಯನ್ನು ಬಿಟ್ಟುಕೊಟ್ಟಿರುವ ಸಿದ್ದಲಿಂಗಯ್ಯ ಈ ಸಂಕಲನದಲ್ಲಿ ಆಪ್ತವಾಗಿ ಮಾತನಾಡಲು ತೊಡಗಿದ್ದಾರೆ. ಈ ಆಪ್ತದನಿ ತನ್ನ ತೀವ್ರತೆಯನ್ನೇನೂ ಬಿಟ್ಟುಕೊಟ್ಟಿಲ್ಲ, ಸಿಟ್ಟನ್ನು ಕಳೆದುಕೊಂಡಿಲ್ಲ, ಒರಟುತನ ಕಳೆದುಕೊಂಡು ನಯಗಾರಿಕೆಯಲ್ಲಿ ಸ್ವಾನುಭವಕ್ಕೆ ದೂರವಾಗಿಲ್ಲ. ಆದರೆ ಆಕ್ರೋಶ-ಒಡಲಿನಾಳದ ದನಿಯಾಗಿ ರೂಪುಗೊಳ್ಳುತ್ತಿದೆ. ಸಂಯಮ ಕಾವ್ಯಕ್ಕೆ ಸತ್ವ ತುಂಬುತ್ತಿದೆ. ಇದು ಸಿದ್ದಲಿಂಗಯ್ಯನವರು ಕಲಾತ್ಮಕವಾಗಿ ಸಾಧಿಸಲು ಪ್ರಯತ್ನಿಸುತ್ತಿರುವ ಯಶಸ್ಸು ಎಂದೇ ಹೇಳಬೇಕು.

ಹೊರಗಿನ ಲೋಕದ ಸತ್ಯಗಳು ಗಾಢವಾಗಿ ತಟ್ಟುವುದು ಒಳಬಾಳಿನಲ್ಲಿ ಸೂಕ್ಷ್ಮತೆಯನ್ನು ಉಳಿಸಿಕೊಂಡಾಗ ಮಾತ್ರ. ಅಬ್ಬರದ ನಡುವೆ ಸೂಕ್ಷ್ಮತೆಯನ್ನೇ ಕಳೆದುಕೊಂಡುಬಿಟ್ಟರೆ ಹೇಗೆ? ಸಿದ್ದಲಿಂಗಯ್ಯ ಈ ಅಪಾಯದಿಂದ ಪಾರಾಗುವ ಗಂಭೀರ ಪ್ರಯತ್ನವನ್ನು ಈ ಸಂಕಲನದಲ್ಲಿ ಮಾಡಿದ್ದಾರೆ.

> ನನ್ನ ಜನದೊಡನೆ ನಾನಾಡಿದ ಮಾತು
> ನಾನು ಕೊಡುವ ಕವನ (ನನ್ನ ಕವನ)

ಇಡೀ ಸಂಕಲನದಲ್ಲಿ ಸಿದ್ದಲಿಂಗಯ್ಯ ಈ ಸಂಯಮವನ್ನು, ಹೋರಾಟದ ಧಾಟಿಯನ್ನು ಬಿಟ್ಟು ಮಾತನಾಡುವ ಶೈಲಿಯನ್ನು ಸಾಧಿಸಲು ಪ್ರಯತ್ನಿಸಿದ್ದಾರೆ. ಹೋರಾಟವನ್ನು ತನ್ನ ಉಸಿರಾಗಿಸಿಕೊಂಡರೂ ಅದರ ಮೂಲಕ ಪಡೆವ ಪ್ರೀತಿಯಿಂದ ಮಾತ್ರ ಉತ್ತಮ ಕಾವ್ಯ ಸೃಷ್ಟಿ ಸಾಧ್ಯ. ಹಾಗೆ ನೋಡಿದರೆ ನಿಜವಾದ ಕಾವ್ಯ ಪ್ರೀತಿಯ ಆಲಿಂಗನದಿಂದಲೇ ಹುಟ್ಟುತ್ತದೆನ್ನುವ ಮಾತು ಸತ್ಯವಾದುದು. ಸಿದ್ದಲಿಂಗಯ್ಯ ಕಪ್ಪು ಕಾಡಿನ ಹಾಡಿನಲ್ಲಿ ಬಂಡಾಯದ ಧ್ವನಿಯೆತ್ತುತ್ತಲೇ ಅದಕ್ಕೆ ಬೆಚ್ಚನೆಯ ಪ್ರೀತಿಯ ಜೀವ ತುಂಬಲು ಪ್ರಯತ್ನಿಸಿದ್ದಾರೆ.

ಹಾಡುಗಳ ರಚನೆಯಲ್ಲಿ ಸಿದ್ದಲಿಂಗಯ್ಯ ಸಾಂಪ್ರದಾಯಿಕ ಸಿದ್ಧಲಯದ ಸುಲಭ ಜಾಡಿಗೆ ಬೀಳುವ ಅಪಾಯವಿದೆ. ಅಲ್ಲಲ್ಲಿ ಹೊಸ ರೀತಿಯ ಪ್ರಯೋಗಗಳ ಬಳಕೆ ಹೊಳೆದರೂ ಪರಿಚಿತ ಲಯಗಳ ಬಳಕೆಯ ಕಡೆಗೆ ಇವರು ವಾಲುತ್ತಿರುವ ಸೂಚನೆಯಿದೆ. ಎತ್ತರಕ್ಕೆ ಬೆಳೆಯಬೇಕೆನ್ನುವ ಕವಿ ಇಂಥ ಸಾಮಾನ್ಯ ಮಿತಿಗಳನ್ನು ಮೀರುವುದು ಅನಿವಾರ್ಯ.

ಸಿದ್ದಲಿಂಗಯ್ಯನವರು ಗಳಿಸಿಕೊಳ್ಳಲು ಯತ್ನಿಸುತ್ತಿರುವ ಕಾವ್ಯ ಕೌಶಲಕ್ಕೆ ಬೌದ್ಧಿಕ ಪ್ರಖರತೆಯೂ ಕೂಡಿಬಂದರೆ ಉತ್ತಮ ಕಾವ್ಯವನ್ನು ಅವರಿಂದ ನಾವು ನಿರೀಕ್ಷಿಸಬಹುದು.

ಗೀತಗಾರುಡಿ (ದೊಡ್ಡರಂಗೇಗೌಡ)

ಇದು ದೊಡ್ಡರಂಗೇಗೌಡರ ಐದನೆಯ ಸಂಕಲನ. ಇಲ್ಲಿನ ಕವಿತೆಗಳನ್ನು ಅವರು 'ಭಾವಗೀತೆ'ಗಳೆಂದು ಕರೆದಿದ್ದಾರೆ. ನವೋದಯ ಪರಂಪರೆಯ ಹಿರಿಯ ಕವಿಗಳ ಪ್ರೇರಣೆ–ಈ ರಚನೆಗಳ ಹಿಂದಿದೆ.

ಪ್ರಕೃತಿ, ಪ್ರೇಮ ಹಾಗೂ ನೋವು–ಗೌಡರ ಗೀತೆಗಳಲ್ಲಿ ಮತ್ತೆ ಮತ್ತೆ ಕಾಣಿಸಿಕೊಳ್ಳುತ್ತವೆ. ಹಳ್ಳಿಯ ಪರಿಸರದಲ್ಲಿ ಬೆಳೆದು ಬಂದ ಗೌಡರಿಗೆ ಬದುಕಿನ ಆಳವಾದ ಅನುಭವವಿದೆ. ಬಡತನದ ಬೇಗೆಯ ನೇರವಾದ ಪರಿಚಯವಿದೆ, ಮುಗ್ಧತೆ, ವೈವಿಧ್ಯತೆಗಳನ್ನೆಲ್ಲ ಅವರು ಬಲ್ಲರು. ಸಹೃದಯರಾದ ಗೌಡರು ಅವುಗಳನ್ನು ಸ್ವೀಕರಿಸುವ ಕ್ರಮದಲ್ಲಿ ಮಾತ್ರ ಅವು ತಮ್ಮ ನಿಜರೂಪ ಮರೆಸಿ ನಯವಾಗುತ್ತಾ ಹೋಗುತ್ತವೆ. ಈ ನಾಜೂಕು–ತೀವ್ರತೆ ಕಳೆದುಕೊಂಡು ಕೇವಲ ಶಬ್ದಗಳಾಗಿ ಬಿಡುವ ಮಟ್ಟಕ್ಕೆ ಕಾವ್ಯವನ್ನು ತಳ್ಳುವುದರಿಂದಾಗಿ ಗೌಡರ ಕಾವ್ಯ ಶಬ್ದಜಾಲದ ಸುತ್ತ ಸುತ್ತುತ್ತದೆಯೇ ಹೊರತು, ಅದನ್ನು ಮೀರಿದ ಅನುಭವ ನೀಡುವುದರಲ್ಲಿ ವಿಫಲವಾಗುತ್ತದೆ.

ಅನುಭವವನ್ನು ಸ್ವೀಕರಿಸುವ ಕ್ರಮದಂತೆಯೇ ಕವನ ಕಟ್ಟುವ ಕ್ರಿಯೆಯಲ್ಲಿಯೂ ಗೌಡರು ಶಬ್ದಮೋಹಿಗಳಾಗುತ್ತಾರೆ. ಕಾವ್ಯಲಯ–ಪ್ರಾಸದಲ್ಲಿ ಮಾತ್ರವಲ್ಲ, ಅದರ ನಡಿಗೆಯಲ್ಲಿಯೇ ಮೂಡಬೇಕಾದದ್ದು ಎಂಬ ಸಾಮಾನ್ಯ ಅಂಶವೇ ಗೌಡರ ಪ್ರಜ್ಞೆಯಿಂದ ಮರೆಯಾಗಿಬಿಡುತ್ತದೆ. ಹೀಗಾಗಿ ಅನೇಕ ಸಾರಿ ಒಳಗಿನ ದನಿಗಿಂತ ಹೊರಗಿನ ಸದ್ದೇ ಹೆಚ್ಚು ಕೇಳಿಸಿ ಕಾವ್ಯ ದುರ್ಬಲವಾಗುತ್ತದೆ.

ನಲ್ಮೆದೀಪನೀನು, ಕಾವ್ಯಮಯೂರಿ, ದೀವಳಿಗೆ ಮೂಡುವುದೊಂದಿಗೆ–ಮೊದಲಾದ ಗೀತೆಗಳು ಸಂಕಲನದಲ್ಲಿ ಉತ್ತಮ ರಚನೆಗಳೆನ್ನಬಹುದು.

ಬೆಳಕು ಹರಿದಂತೆ ( ಪಿ. ಎಸ್. ರಾಮಾನುಜಂ)

ಇದು ರಾಮಾನುಜಂ ಅವರ ಮೂರನೆಯ ಸಂಕಲನ. ಮೊದಲಿಗೇ ಹೇಳಬಹುದಾದ ಮಾತು : ಪ್ರತಿಯೊಂದು ಕವನಗಳೂ ಚಿತ್ರವನ್ನೊಳಗೊಂಡು, ಪುಸ್ತಕ ಅಚ್ಚುಕಟ್ಟಾಗಿ ಮುದ್ರಣಗೊಂಡಿದೆ. ಆಕರ್ಷಕವಾಗಿದೆ.

ಶೋಧನೆ–ರಾಮಾನುಜಂ ಅವರ ಈ ಸಂಕಲನದ ಕವಿತೆಗಳ ಹಿಂದಿರುವ ಮುಖ್ಯ ಸೆಳೆತ. ಆಕಾಶದಲ್ಲಿ ತೇಲುವ ಮೋಡಗಳಾಗಲೀ, ಹರಿಯುವ ನದಿಯಾಗಲೀ, ತೂಗಿ ತೊನೆಯುವ ಮರಗಿಡಗಳಾಗಲೀ, ಕಡೆಗೆ ಕನ್ನಡಿಯ ಪ್ರತಿಬಿಂಬವಾಗಲೀ ಕವಿಯನ್ನು ಚಿಂತನೆಗೆ ತೊಡಗಿಸುತ್ತದೆ. ಈ ಚಿಂತನೆಯ ಸ್ವರೂಪ.

ನನಗೆ
ಮೂಲವ್ಯಾಧಿ
ಊರ್ಧ್ವ ಮೂಲದ

ಅಶ್ವತ್ಥ ವೃಕ್ಷದ ಮೂಲವನ್ನು
ಅಂದರೆ—
ಸೃಷ್ಟಿಯ ಮೂಲವನ್ನು
ಅಷ್ಟೇಕೆ
ಎಲ್ಲದರ ಮೂಲವನ್ನು
ಹುಡುಕುವ
ವ್ಯಾಧಿ



(ಮೂಲವ್ಯಾಧಿ)

ಇದು ಕೆಲವೊಮ್ಮೆ ಅನುಭಾವದ ರೂಪವನ್ನು ತಳೆಯುತ್ತದೆ. ಆದರೆ ಹುಡುಕಾಟದ ತೀವ್ರತೆಯಾಗಲಿ, ನಿಗೂಢದ ಬಗೆಗಿನ ಸೆಳೆತವಾಗಲೀ ರಾಮಾನುಜಂ ಅವರ ಕವಿತೆಗಳಲ್ಲಿ ಹರಳುಗಟ್ಟುವುದಿಲ್ಲ. ಇದಕ್ಕೆ ಮುಖ್ಯ ಕಾರಣ ಅವರ ಭಾಷಾ ಶೈಲಿ. ಸಂಸ್ಕೃತ ವಿದ್ವಾಂಸರಾದ ರಾಮಾನುಜಂ ಅವರು ಒಂದು ರೀತಿಯ ಶಿಷ್ಟ ಭಾಷೆಯನ್ನು ರೂಢಿಸಿಕೊಂಡಿದ್ದಾರೆ. ಈ ಭಾಷೆ ನಿರ್ಲಿಪ್ತವಾದುದು. ಕಾವ್ಯ ಭಾಷೆಗಿಂತ ಶಾಸ್ತ್ರ ಭಾಷೆಯ ಮಾದರಿಯದು. ಹೀಗಾಗಿ ರಾಮಾನುಜಂ ಅವರ ಪ್ರಯತ್ನ ಭಾಷೆಯ ದೌರ್ಬಲ್ಯದಿಂದಾಗಿ ಜೀವತುಂಬಿಕೊಳ್ಳುವುದಿಲ್ಲ. ಆದರೆ ಸಂಕಲನದುದ್ದಕ್ಕೂ ಈ ಕವಿ ಅಭಿವ್ಯಕ್ತಿಗಾಗಿ ಹೋರಾಡುವ ಪ್ರಾಮಾಣಿಕ ಪ್ರಯತ್ನ ಮಾತ್ರ ಮೆಚ್ಚುಗೆ ಪಡೆಯುತ್ತದೆ.

ರಾಗರತಿ (ಕೆ. ಸಿ. ಶಿವಪ್ಪ)

'ರಾಗರತಿ' ಪ್ರೇಮಗೀತೆಗಳ ಸಂಕಲನ. ದಾಂಪತ್ಯದ ಚೌಕಟ್ಟಿನೊಳಗಿನ ಪ್ರೀತಿ ಇಲ್ಲಿನ ಕವಿತೆಗಳ ವಸ್ತು. ನವೋದಯ ಕಾವ್ಯಸಂದರ್ಭದಲ್ಲಿ ಪ್ರೀತಿ-ಕಾವ್ಯ ದಲ್ಲಿ ಪ್ರಕಟಗೊಂಡ ರೀತಿಯಿದು. ಹೆಣ್ಣುಗಂಡಿನ ಮಧುರ ಸಂಬಂಧವನ್ನು, ಪ್ರಣಯದಾನಂದವನ್ನು ನವೋದಯ ಕವಿಗಳು ಗ್ರಹಿಸಿದ್ದು ದಾಂಪತ್ಯದ ಚೌಕಟ್ಟಿ ನಲ್ಲಿಯೇ. ಶಿವಪ್ಪನವರ ಗ್ರಹಿಕೆಯೂ ಇದೇ ಬಗೆಯದು. ಈ ಹೋಲಿಕೆ ಇಷ್ಟಕ್ಕೆ ಮಾತ್ರ.

ಪ್ರೇಮಗೀತೆಗಳೆಂದ ತಕ್ಷಣ ಕೆ. ಎಸ್. ನರಸಿಂಹಸ್ವಾಮಿಯವರ 'ಮೈಸೂರು ಮಲ್ಲಿಗೆ', ಅದಕ್ಕೂ ಮುಂಚಿನ ತೀ ನಂ ಶ್ರೀ ಅವರ 'ಒಲುಮೆ' ನೆನಪಿಗೆ ಬರುವುದು ಸಹಜ. ಆದರೆ ಅಲ್ಲಿನ ಮಾಧುರ್ಯವಾಗಲೀ, ನವಿರಾದ ಭಾವವಾಗಲೀ ಶಿವಪ್ಪನವರ ಗೀತೆಗಳಲ್ಲಿ ಕಂಡುಬರುವುದಿಲ್ಲ. ಎದ್ದುಕಾಣುವ ಹೊಸತನ ಸಹ ಇಲ್ಲಿಲ್ಲ. ಆದರೂ ಪ್ರೇಮಗೀತೆಗಳ ಅಭಾವವಿರುವ ನಮ್ಮ ಕಾವ್ಯಸಂದರ್ಭದಲ್ಲಿ ಶಿವಪ್ಪನವರ ಕವನ ಗಳನ್ನು ಓದಿ ಸಂತೋಷಪಡಬಹುದು. ಭರವಸೆ, ನನಗಾಸೆ – ಇತ್ಯಾದಿ ಕವನಗಳಲ್ಲಿ ಹಿರಿಯ ಕವಿಗಳ ಅನುಕರಣೆ ಎದ್ದುಕಾಣುತ್ತದೆ. ಶಿವಪ್ಪನವರಿಗೆ ಇದನ್ನು ಮೀರುವ

ಶಕ್ತಿಯಿಂದೆ. ಸರ್ವತಂತ್ರ ಸ್ವತಂತ್ರ ಪ್ರೇಮಗೀತೆಗಳು ಅವರಿಂದ ಹೆಚ್ಚು ಬರಲಿ ಎಂದು ಹಾರೈಸಬಹುದು.

ವಿರಹೋತ್ಸವ (ಹೇಮಾ)

ಈ ವರ್ಷ ಗಮನಿಸಬೇಕಾದ ಕವನಸಂಕಲನಗಳಲ್ಲಿ ಹೇಮಾ ಅವರ 'ವಿರಹೋತ್ಸವ'ವೂ ಒಂದು. ಲವಲವಿಕೆಯ ಜೊತೆಗೆ ಪ್ರಬುದ್ಧತೆಯನ್ನು ಪಡೆದಿರುವ ಹೇಮಾ ಹೆಣ್ಣಿನ ಸೂಕ್ಷ್ಮ ಅನುಭವಗಳಿಗೆ ಸಮರ್ಥ ಶರೀರ ಒದಗಿಸಬಲ್ಲರು. ವಸ್ತು ಹಾಗೂ ಆಕೃತಿ- ಎರಡರ ಬಗೆಯ ಹಿಡಿತ ಹೊಂದಿರುವ ಹೇಮಾ ಅದಕ್ಕೆ ತಕ್ಕ' ಮಾನಸಿಕ ಸಿದ್ಧತೆಯನ್ನು ಪಡೆದಿದ್ದಾರೆ,

ಈ ಮನಸ್ಥಿತಿಯಲ್ಲಿ
ಲಂಕೆಯನ್ನೂ ಹಾರಬಲ್ಲೆ, ಜಿಂಕೆಯನ್ನೂ
ಮೀರಬಲ್ಲೆ ಸಪ್ತ ಸಾಗರಗಳನ್ನೂ
ಅಂಕೆಯಲ್ಲಿಟ್ಟು ಆಳಬಲ್ಲೆ ಬಾಳಬಲ್ಲೆ
ತಾಳಬಲ್ಲೆ ಬೇಕಾದ ಅಗ್ನಿದಿವ್ಯದ ಚತುರ ಅಕ್ಷೋಹಿಣಿಯ
ಕೊರೆತಗಳ ಹೊಡೆತಗಳ ಈ ಮನಸ್ಥಿತಿಯಲ್ಲಿ.

(ಧೃತಿ)

ಬದುಕನ್ನು ಎರಡೂ ಕೈಚಾಚಿ ಅಪ್ಪಿಕೊಳ್ಳುವ ಜೀವನೋತ್ಸಾಹ, ಅದರ ತೀವ್ರಾನುಭವದ ಒತ್ತಡದ ಭಾರವನ್ನು ಹೊರಬಲ್ಲ ಧಾರಣ ಶಕ್ತಿ-ಇವುಗಳ ಸಮ್ಮೇಳದಿಂದಾಗಿ ಹೇಮಾ ಅವರ ಕವನಗಳು ಹೊಸ ತೇಜಸ್ಸು ಪಡೆದಿವೆ.

'ಹೆಣ್ಣನ್ನು ಕೇಂದ್ರದಲ್ಲಿಟ್ಟು ಸ್ಥಾಯಿಯಾಗುವ ವಿರಹದಲ್ಲಿ ಬೆರಗು, ನೋವು, ಹಳಹಳಿಕೆ, ಕ್ಷಣದ ತೃಪ್ತಿ, ನಿರ್ವೇಗಗಳನ್ನು ಸಂಚಾರಿಗಳಾಗಿಸಿ ಕವಿತೆಗಳನ್ನು ಬರೆಯುವ' ಹೇಮಾ ಶಬ್ದದ ಅರ್ಥ ಮತ್ತು ನಾದಗಳನ್ನು ತಮ್ಮ ಉದ್ದೇಶಕ್ಕೆ ಉಚಿತವಾಗಿ ಬಳಸಿಕೊಳ್ಳುವ ರೀತಿ ಮೆಚ್ಚುಗೆ ಗಳಿಸುತ್ತದೆ. ಹತ್ತರಲ್ಲಿ ಹನ್ನೊಂದಾಗಿ ಬಾಳಲೊಲ್ಲದ ಜೀವ ತನ್ನದೇ ಆದ ಬದುಕಿಗಾಗಿ ಹಂಬಲಿಸುವ ತಹತಹ-ಇವರ ಕಾವ್ಯದಲ್ಲಿ ತೀವ್ರ ರೀತಿಯಲ್ಲಿ ದಾಖಲಾಗಿದೆ.

ಅಂಕುರ, ಸರೋವರ, ಪಂಚಸೂತ್ರ, ಸಂಕಲ್ಪ, ಹತ್ತರಲಿ ಹನ್ನೊಂದಾಗಿ, ಜಾತ್ರೆ, ಧೃತಿ, ಗಂಡನೊಳಗಿನ ಗಂಡು ಹುಡುಗ–ಮೊದಲಾದ ಯಶಸ್ವೀ ಕವನಗಳನ್ನು ಬರೆಯಬಲ್ಲಂಥ ಹೇಮಾ ಕನ್ನಡ ಕಾವ್ಯ ಪ್ರಪಂಚದಲ್ಲಿ ದೃಢವಾದ ಹೆಜ್ಜೆಗಳನ್ನಿಟ್ಟಿದ್ದಾರೆ.

ನಾವು ಹುಡುಗಿಯರೇ ಹೀಗೆ (ವಿ. ಆರ್. ಪ್ರತಿಭಾ)

ಪ್ರತಿಭಾ ಅವರ ಕವನಗಳ ಮುಖ್ಯ ಗುಣ ಹೊಚ್ಚ ಹೊಸತನ. ಈ ಹೊಸತನದಿಂದಾಗಿಯೇ ಅವು ಆಕರ್ಷಕವೆನ್ನಿಸುತ್ತವೆ.

ಕವನ
ನೀನು ಹದಿಹರಯದ ಹುಡುಗಿಯಂಊ ಅಲ್ಲ
ಬಿರುಮೋರೆಯ ಮುದುಕಿಯಂಊ ಅಲ್ಲ
ನೀನು
ತುಂಟ ಕಾರುಣ್ಯದಮಂಲಿನ
ತರುಣನಿರಬೇಕು (ಕವನ)

ಗಂಡಿನ ಬಗೆಗಿನ ತಾರುಣ್ಯ ಸಹಜ ಭಾವನೆಗಳನ್ನು ಹೆಣ್ಣಾಗಿ ಪ್ರತಿಭಾ ಅವರು ಇಲ್ಲಿ ಪ್ರಕಟಿಸಿದ್ದಾರೆ. ಜಿ. ಎಸ್. ಶಿವರುದ್ರಪ್ಪನವರು ಹೇಳುವಂತೆ "ಹುಡುಗಿಯಾದ ತಾನು ಪದ್ಯ ಬರೆದು ಏನನ್ನೋ ಸಾಧಿಸುತ್ತಿದ್ದೇನೆಂಬ ಭ್ರಮೆಯಾಗಲೀ, ಹೆಣ್ಣಾದುದರಿಂದ ತಾನು ಗಂಡಿಗಿಂತ ಹೇಗೋ ಏಕೋ ಕಡಿಮೆ ಎಂಬ ಸಾಮಾನ್ಯವಾದ ಕೀಳರಿಮೆಯ ಪರಿಣಾಮದಿಂದ ತಾಳುವ ಅಹಂ ನಿಷ್ಠತೆಯಾಗಲೀ, ಗಂಡಿನ ಜೊತೆ ಸ್ಪರ್ಧಿಸುವುದರಿಂದಲೇ ತಾನು ತನ್ನ ವ್ಯಕ್ತಿತ್ವವನ್ನು ಉಳಿಸಿಕೊಳ್ಳಬಲ್ಲೆನೆಂಬ ಧೋರಣೆಯಾಗಲೀ ಯಾವುದೂ ಇಲ್ಲಿಲ್ಲ. ತಾನು ಹೆಣ್ಣಾಗಿರುವುದರ ಸಹಜತೆಯನ್ನು ಒಪ್ಪಿಕೊಳ್ಳುತ್ತಾ, ತನ್ನೊಳಗಿನ ಅನಿಸಿಕೆಗಳನ್ನು, ಸಂಕೋಚಗಳನ್ನು, ತಾಕಲಾಟಗಳನ್ನು, ಸಮಸ್ಯೆಗಳನ್ನು ತುಂಟತನದಿಂದ, ವಿಷಾದದಿಂದ, ತೀವ್ರತೆಯಿಂದ ತೋಡಿಕೊಳ್ಳುವ ಪ್ರತಿಭಾ ಅವರ ಈ ಪದ್ಯಗಳು ತಮ್ಮ ಜೀವಂತಿಕೆಯಿಂದ, ಹೊಸತನದಿಂದ ಹಿಡಿದು ನಿಲ್ಲಿಸಿಕೊಳ್ಳುತ್ತವೆ.''

ಜುಮ್ಮೆನ್ನಿಸುವ ಆಲೋಚನೆಗಳನ್ನೆಲ್ಲಾ
ಹಾಗೇ ಡಬ್ಬಿಯೊಳಗೆ ಹಿಟ್ಟು ಒತ್ತಿದಂತೆ
ಒತ್ತಿ ಒತ್ತಿ ಗಟ್ಟಿ ಮಾಡುತ್ತೇವೆ.
(ನಾವು ಹುಡುಗಿಯರೇ ಹೀಗೆ)

ಎಂಬಂಥ ಕಡೆ ಪ್ರತಿಭಾ ಅವರು ಬಳಸಿಕೊಳ್ಳುವ ಹೋಲಿಕೆಗಳು ರೂಢಿಯ ಜಾಡನ್ನು ಮೀರುವ ಪ್ರಯತ್ನಗಳಾಗಿವೆ. ಲವಲವಿಕೆಯ ಸಹಜಾಭಿವ್ಯಕ್ತಿಯಿಂದಾಗಿ ಆಪ್ತ ಧಾಟಿಯೊಂದು ಮೂಡಿ ಕವಿತೆಗಳು ಹತ್ತಿರವಾಗುತ್ತವೆ. ಗೆಳತಿಯೊಬ್ಬಳು ನಿಸ್ಸಂಕೋಚವಾಗಿ ಮನಬಿಚ್ಚಿ ಮಾತನಾಡಿದಂತಹ ಅನುಭವವಾಗುತ್ತದೆ.

ಪ್ರತಿಭಾ ಅವರ ಆಸಕ್ತಿ–ಮಧ್ಯಮವರ್ಗದ ಹುಡುಗಿಯೊಬ್ಬಳ ಅನುಭವಗಳು. ಆ ಅನುಭವಗಳನ್ನು ಹೇಳುತ್ತಲೇ ಅವರು ಒಂದು ಸಾಮಾಜಿಕ ಸ್ಥಿತಿಯನ್ನು ತಮ್ಮ ಕವನಗಳನ್ನು ನೀಡುತ್ತಾರೆ.

ನಾವು ಹುಡುಗಿಯರೇ ಹೀಗೆ, ಬೀರು, ಲಾಲ್‌ಬಾಗಿನ ಸಂಜೆಗಳು, ಬೀದಿ ಬದಿಯ ಪದ್ಯಗಳು, ಒಂದು ಸಂಜೆಯ ಒಂದು ಸಣ್ಣ ಘಟನೆ, ಪ್ರಿಯತಮನ ಮೂರು ಮುಖಗಳು, ನಾನು ಹುಡುಗ ಮತ್ತು ಕಾಲ, ಮದುವೆಗೆ ಹೋದದ್ದು — ಮೊದಲಾದ ಕವಿತೆಗಳಲ್ಲಿ ಕಂಡುಬರುವ ಪ್ರತಿಭಾ ಅವರ ಕಾವ್ಯಸಾಮರ್ಥ್ಯ ಅವರ ಬಗ್ಗೆ ಹೆಚ್ಚಿನ ಭರವಸೆ ಮೂಡಿಸುತ್ತದೆ.

ಗರಿಗೆದರಿ (ಮಾಲತಿ ಪಟ್ಟಣಶೆಟ್ಟಿ)

ಇದು ಮಾಲತಿಯವರ ಎರಡನೆಯ ಕವನ ಸಂಕಲನ. ಭ್ರಮೆ ಕಳಚಿದ ಸ್ಥಿತಿಯಲ್ಲಿ ಗಂಡು-ಹೆಣ್ಣಿನ ಸಂಬಂಧವನ್ನು ವಿಶ್ಲೇಷಿಸುವಂಥದು—ಮಾಲತಿ ಪಟ್ಟಣಶೆಟ್ಟಿಯವರ ಕವನಗಳಲ್ಲಿ ಕಂಡುಬರುವ ಮುಖ್ಯಗುಣ. ಯೌವನದ ಬಿಸಿಯಾಗಲೀ, ರೋಮಾಂಚನವಾಗಲೀ ಇಲ್ಲಿಲ್ಲ. ಬದಲಿಗೆ ಅದರ ಒಳಸುಳಿಗಳನ್ನು ಅರಿಯಬಯಸುವ ಶೋಧಕ ಪ್ರವೃತ್ತಿಯಿದೆ. ಆದರೆ ಇಂಥ ಪ್ರವೃತ್ತಿ ಬಹಳ ಕಡೆ ಹತಾಶೆಯ ಹಾದಿ ಹಿಡಿಯುವುದರಿಂದಾಗಿ ಕಾವ್ಯ ನಿರೀಕ್ಷಿಸಿದ ಯಶಸ್ಸು ಪಡೆಯುವುದಿಲ್ಲ.

ಸಾಮಾಜಿಕ ವಿಷಯಗಳನ್ನು ಕುರಿತು ಬರೆಯುವಾಗ ಮಾಲತಿಯವರು ವಿಡಂಬನೆಯನ್ನು ತೀಕ್ಷ್ಣವಾಗಿಯೇ ಬಳಸುತ್ತಾರೆ. ದಿವ್ಯಭಾರತಿಯರು ನಾವು, ಸ್ತ್ರೀಸ್ವಾತಂತ್ರ್ಯ, ಸ್ವಾತಂತ್ರ್ಯೋತ್ಸವದ ದಿನ – ಮೊದಲಾದ ಕವನಗಳನ್ನು ನಾವು ಉದಾಹರಣೆಯಾಗಿ ಗಮನಿಸಬಹುದು.

ಆರ್ತಭಾವ, ಅದರಿಂದಲೇ ಒಮ್ಮೊಮ್ಮೆ ಕಟುವಾಗುವ ಮನೋಭಾವ–ಇವುಗಳ ದ್ವಂದ್ವದಲ್ಲಿ ಮಾಲತಿಯವರ ಕಾವ್ಯ ಶಕ್ತಿ ಪಡೆಯುತ್ತದೆ. ಆದರೆ ಆ ಶಕ್ತಿಯನ್ನು ಕಾವ್ಯ ಶರೀರದಲ್ಲಿ ಹಿಡಿದಿಡುವಲ್ಲಿ ಮಾಲತಿಯವರ ಯಶಸ್ಸಿದೆ. ಅಂಥ ಯಶಸ್ಸನ್ನು ಸಾಧಿಸಬಲ್ಲ ಸಾಮರ್ಥ್ಯ ಅವರಿಗಿದೆ ಎಂಬುದಕ್ಕೆ 'ಗರಿಗೆದರಿ' ಸಂಕಲನದಲ್ಲಿ ಸಾಕಷ್ಟು ನಿದರ್ಶನಗಳಿವೆ.

ನಂ ರೂಪ್ಲಿ (ಬಿ. ಟಿ. ಲಲಿತಾನಾಯಕ)

ಇತ್ತೀಚೆಗೆ ಮುಖ್ಯವಾಗಿ ಕೇಳಿಬರುತ್ತಿರುವ ಹೆಸರುಗಳಲ್ಲಿ—ಲಲಿತಾನಾಯಕ ಅವರದೂ ಒಂದು. 'ನಂ ರೂಪ್ಲಿ' ಅವರ ಮೊದಲ ಸಂಕಲನ. ಇವರ ಬಹುಪಾಲು ಕವನಗಳಲ್ಲಿ ಬಂಡಾಯದ, ಪ್ರತಿಭಟನೆಯ ದನಿಯಿದೆ. ಈ ದನಿ ಮುಖ್ಯವಾಗಿ ಎಂದೂ ಮಾತಾಡದ ಜನಾಂಗವೊಂದರಿಂದ ಮೂಡಿದ್ದೆಂಬುದು ಮುಖ್ಯ. ಇದು ಕೇವಲ ರಿಯಾಯಿತಿಯಾಗಿ ಮಾತ್ರವಲ್ಲ, ಕವನ ಕಟ್ಟಿಕೊಡುವ ಪರಿಸರ, ಆ ಪರಿಸರದಿಂದಾಗಿಯೇ ಮೂಡುವ ಕೆಲವು ಸವಾಲುಗಳು—ಲಲಿತಾನಾಯಕರ ಕವನಗಳಲ್ಲಿ ಮುಖ್ಯವಾಗುತ್ತವೆ.

'ನಂ ರೂಪ್ಲಿ ಮತ್ತು ಕಚ್ಚಿ ಹರ್ಕ ನಾಯಿ' ಯಂತಹ ಕವನ ಕಟ್ಟಿಕೊಡುವ ಪರಿಸರ ವಿಶಿಷ್ಟವಾದುದು. ಆದರೆ ಲಂಕೇಶ್ ಅವರು ಹೇಳುವಂತೆ ಈ ಕವನದ ಕಡೆಯ ಭಾಗದಲ್ಲಿ ಬರುವ,

ನಮ್ಮ ರಸಿಕ ಹಾಡು ಈಗ
ಗುಡುಗಿನಂತೆ ಮೊಳಗಿದೆ
ಕುಣಿತ ರುದ್ರ ನಾಟ್ಯವಾಗಿ
ವಂಚಕರೆದೆಯ ನಡುಗಿದೆ

ಇದು ಧಾಟಿ ಮತ್ತು ಅನುಭವದಿಂದ ಹಳಸಲಾದ್ದರಿಂದ ಕೊಂಚ ಸುಳ್ಳಾಗಿ ಕಾಣಿಸುತ್ತದೆ. ಲಲಿತಾ ಅವರಲ್ಲಿ ವಾಚಾಳಿತನ ಸ್ವಲ್ಪ ಜಾಸ್ತಿಯೆನ್ನಿಸುತ್ತದೆ. ಹೀಗಾಗಿಯೇ ಕವನ ಶರೀರದಿಂದಾಚೆಗೂ ವಿವರಗಳು ವ್ಯಾಚಾಚುವುದರಿಂದ ಒಟ್ಟಾರೆ ಕವನದ ಪರಿಣಾಮ ತೆಳುವಾಗುತ್ತದೆ.

ಅಂಬೇಡ್ಕರ್ ಮಾಹಿತಿ ಅದ ನಿಮಗೆ?, ವೇದಾವತಿ ನದಿಯಲ್ಲಿ ಮುಳುಗಿದ ಸೂಳೆ, ನಂ ರೂಪ್ಲಿ—ಮೊದಲಾದ ಕವಿತೆಗಳು ಸಂಕಲನದ ಉತ್ತಮ ರಚನೆಗಳೆನ್ನ ಬಹುದು.

ದ್ರೌಪದಿಯ ಸ್ವಗತ (ಸರಸ್ವತೀ ಗೌಡ)

ಇದು ಸರಸ್ವತೀಗೌಡರ ಎರಡನೆಯ ಕವನ ಸಂಕಲನ. ಸರಸ್ವತಿಯವರಿಗೆ ಗಂಡಿನ ಬಗ್ಗೆ ವಿಚಿತ್ರ ದ್ವೇಷವಿದೆ:

ನಿನ್ನ ಮೇಲೆ ಅಲ್ಲ ಇಡೀ ಗಂಡಸಿನ
ಮೇಲೆ ನಾ ವಿಷಕಾರುವೆ
ಈಗ ನಿನ್ನ ಜಾತಿಯ ಷಂಡರ ಕಂಡರೆ
ನನಗೆ ಮೈ ಉರಿ ಏಳುವುದು
ನಂಬಿಕೆಗೆ ದ್ರೋಹ ಬಗೆದವನು
ಗಂಡಸೆಂದು

(ಗಂಡಸು)

ಗಂಡಂದಿರ ಮುಷ್ಠಿಯಲ್ಲಿ
ನರಳುವ ಹೆಣ್ಣುಗಳೇ

(ಹೊಸ ಜಗತ್ತಿಗೆ ಹೊರಬನ್ನಿ)

ಗಂಡನೆನ್ನುವ ಭಂಡ
ಇತಿಹಾಸದಿಂದಲೂ ಅಳಿಸಲಾಗದವನು

(ಗಂಡ)

ಹೀಗಾಗಿ ಆಕ್ರೋಶವೇ ಇಲ್ಲಿ ಬಹುಪಾಲು ಕವನಗಳ ಸ್ಥಾಯಿಯಾಗಿದೆ. ಹೆಣ್ಣು ತನ್ನೆಲ್ಲ ಬಂಧನಗಳನ್ನು ಕಳಚಿ ಹೊಸ ಜಗತ್ತಿಗೆ ಬರುವಾಗ ರಾಕ್ಷಸೀ ಪ್ರವೃತ್ತಿ ಬೃಹದಾಕಾರವಾಗಿ ಕಾಣಬಹುದಾದರೂ ಆಕ್ರೋಶದ ಅಬ್ಬರದ ದನಿ ಗಂಡು—ಹೆಣ್ಣಿನ ಸಂಬಂಧದ ಸೂಕ್ಷ್ಮಗಳನ್ನು ಅಳಿಸಿಹಾಕಿಬಿಡುವುದರಿಂದ ಕವನಗಳ ಯಶಸ್ಸು ಸೀಮಿತವಾಗುತ್ತದೆ.

ಇಲ್ಲಿನ ಉಳಿದ ಕವನಗಳಲ್ಲಿಯೂ ಸಮಸ್ಯೆಯ ತತ್ಕಾಲದ ಮುಖ ಮಾತ್ರ ಸರಸ್ವತೀಗೌಡರಿಗೆ ಮುಖ್ಯವಾಗುತ್ತದೆಯೇ ಹೊರತು ಆದರಾಚೆಗಿನ ಬಗ್ಗೆ ಅವರು ಕೈ ಚಾಚುವುದಿಲ್ಲ. ಜೊತೆಗೆ ಮಾತು ಜಾಸ್ತಿಯಾದಾಗ ಸಹಜವಾಗಿ ತೀವ್ರತೆ ಕಡಿಮೆ ಯಾಗಿಬಿಡುತ್ತದೆ. ಬಂಡವಾಳಶಾಹಿ, ಬೆಳ್ಳಿಹಬ್ಬ—ಇಂಥ ಕವನಗಳು ಈ ಕಾರಣ ದಿಂದಾಗಿಯೇ ಸೋಲುತ್ತವೆ. ಮುನ್ನುಡಿ ಬರೆದಿರುವ ಜೀಶಂ ಪರಮಶಿವಯ್ಯ ನವರು 'ಅತ್ತೆಯರು' ಕವನವನ್ನು ಮೆಚ್ಚಿ ಬರೆದಿದ್ದಾರೆ. ಆದರೆ ಅದೂ ಸಹ ತೀರಾ ಸರಳವಾದ ಸಿದ್ಧ ಸಂಗತಿಗಳನ್ನು ಆಧರಿಸಿದ ರಚನೆ. ಇಂಥವು ನಮ್ಮ ಅರಿವಿಗೆ ಯಾವ ಹೊಸ ಅಂಶವನ್ನೂ ಸೇರಿಸುವುದಿಲ್ಲ, ಮಾತ್ರವಲ್ಲ ಗೊತ್ತಿರುವ ವಸ್ತುವಿನ ಬಗ್ಗೆಯಾದರೂ ಒಳನೋಟವನ್ನಾಗಲೀ, ಮೊನಚನ್ನಾಗಲೀ ಮೂಡಿಸುವುದಿಲ್ಲ. ಆದರೆ ದ್ರೌಪದಿಯ ಸ್ವಗತ, ಕುಂತಿ—ಮೊದಲಾದ ಕವನಗಳಲ್ಲಿ ಸರಸ್ವತೀಗೌಡರ ಶಕ್ತಿಯುತವಾಗಿ ಬರೆಯಬಲ್ಲರು ಎಂಬುದನ್ನು ನಾವು ಗುರ್ತಿಸಬಹುದಾಗಿದೆ.

ಹೆಣ್ಣಿನ ನೋವಿಗೆ ದನಿಕೊಡಬೇಕೆಂಬ ಹಂಬಲ ಇಲ್ಲಿನ ಬಹುಪಾಲು ಕವನ ಗಳಲ್ಲಿದೆ. ಆದರೆ ಆ ದನಿ ತಾನೇ ಆಗುವುದು ಸರಸ್ವತೀಗೌಡರಿಗೆ ಸಾಧ್ಯವಾದರೆ ಅವರ ಕಾವ್ಯ ಇನ್ನೂ ಹೆಚ್ಚು ಸತ್ವ ತುಂಬಿಕೊಳ್ಳಬಲ್ಲುದು.

ನಾನು ಮತ್ತು ಅವನು (ಎಚ್. ಎಸ್. ಮುಕ್ತಾಯಕ್ಕ)

ಈ ಸಂಕಲನದಲ್ಲಿ ಎರಡು ಭಾಗಗಳಿವೆ. ಮೊದಲ ಭಾಗ ಮುಕ್ತಕಗಳ ಮಾದರಿಯ ಹನಿ ಕವಿತೆಗಳು. ನಲ್ಲನನ್ನು ಕುರಿತಾದ ನವಿರಾದ ಭಾವನೆಗಳು ಇಲ್ಲಿ ಆಕರ್ಷಕವಾಗಿ ಅಭಿವ್ಯಕ್ತಿ ಪಡೆದಿವೆ. ಚುರುಕಾದ ಭಾಷೆ, ಶಬ್ದ ಚಮತ್ಕಾರ— ಇವುಗಳಿಂದಾಗಿ ಈ ಹನಿಕವಿತೆಗಳು ಓದುಗರನ್ನು ಸೆಳೆಯುತ್ತವೆ. ಕವಯಿತ್ರಿಯ ಪ್ರಧಾನ ಆಸಕ್ತಿಯಾಗಿ ಇಂಥ ರಚನೆಗಳನ್ನು ಗುರ್ತಿಸುವುದು ಕಷ್ಟವಾಗುತ್ತದೆ. ಈ ಎಲ್ಲ ಬಿಡಿ ಕವಿತೆಗಳಲ್ಲೂ ಸಾಮಾನ್ಯವಾದ ಸೆಳೆತವಿರುವುದರಿಂದ ಒಟ್ಟಾರೆ ಏಕಸೂತ್ರತೆಯೊಂದು ಒದಗಿ ಬಂದಿದೆ.

ಎರಡನೆಯ ಭಾಗದಲ್ಲಿ ಗಂಭೀರವಾದ ಆಸಕ್ತಿ ಪ್ರಕಟಿಸುವ ಕವನಗಳಿವೆ. ಹೇಳಬೇಕಾದ್ದನ್ನು ಮುಕ್ತಾಯಕ್ಕನವರು ಸಂಯಮದಿಂದ ಹೇಳುತ್ತಾರೆ. ಇದರಿಂದಾಗಿ ಕವನ ಪರಿಣಾಮದಲ್ಲಿ ಗಾಢ ಅನುಭವ ತಂದುಕೊಡಲು ಸಾಧ್ಯವಾಗು ತ್ತದೆ. 'ಒಂದು ಪತ್ರ'ದಂಥ ಕವಿತೆ ಯಾವುದೇ ಅಬ್ಬರವಿಲ್ಲದೆ ಈ ಬದುಕಿನ ಕೆಳಸ್ತರ ದವರ ಬಗ್ಗೆ ಇರುವ ಕಳಕಳಿಯನ್ನು ಚಿತ್ರಿಸುತ್ತದೆ.

ನಿನ್ನ ಪ್ರೀತಿಸುವುದೆಂದರೆ<br>
ಈ ಬದುಕನ್ನು ಪ್ರೀತಿಸಿದಂತೆಂದು<br>
ನಾ ಬಲ್ಲೆ

ನನ್ನ ನಲ್ಲ
ಪ್ರೇಮ ನಿವೇದನೆ
ಮಾಡಲಿಲ್ಲೆಂಬ ಕೊರಗೇನೂ
ನನಗೆ ಉಳಿಯಲಿಲ್ಲ

(ಒಂದು ಪತ್ರ)

ಎಂಬ ಸಾಲುಗಳು ಪ್ರೇಮದ ವ್ಯಾಖ್ಯಾನವನ್ನು ಸರಳತೆಯಿಂದಾಚೆಗೆ ಕರೆದೊಯ್ಯುತ್ತವೆ. 'ಅಪ್ಪ' ಸಹ ಒಂದು ವಿಶಿಷ್ಟ ಕವಿತೆ. ಸಾಮಾನ್ಯವಾಗಿ ಸಂಪ್ರದಾಯಕ್ಕೆ ಸಂಕೇತವಾಗಿ ಬಂಧನವೆಂಬಂತೆ ಬರುವ ಅಪ್ಪ, ಮಾನವೀಯ ಸಂಬಂಧಗಳ ಸೇತುವೆಯಾಗಿ ಚಿತ್ರಿತವಾಗಿರುವ ರೀತಿ ಭಿನ್ನವಾಗಿದೆ. ಮೇಲ್ನೋಟಕ್ಕೆ ಕವನ ಸರಳವೆನ್ನಿಸಿದರೂ ಆ ಸರಳತೆಯಿಂದಾಗಿಯೇ ಗಮನ ಸೆಳೆಯುತ್ತದೆ.

ಮುಂಕ್ತಾಯಂಕ್ಕನವರು ಮಹತ್ವದ್ದನ್ನು ಹೇಳಲೇಬೇಕೆಂಬ ಹಟದಲ್ಲಿ ಕಾವ್ಯ ರಚನೆಗೆ ತೊಡಗುವುದಿಲ್ಲ. ಆದರೆ ಹೇಳಬೇಕಾದ್ದನ್ನು ಪರಿಣಾಮಕಾರಿಯಾಗಿ ಹೇಳುವಲ್ಲಿ ಅವರು ಯಶಸ್ವಿಯಾಗಿದ್ದಾರೆಂದೇ ಹೇಳಬೇಕು. ಇವರಿಂದ ಉತ್ತಮ ಕಾವ್ಯವನ್ನು ನಿರೀಕ್ಷಿಸಬಹುದಾಗಿದೆ.

ಪಂಚಾಗ್ನಿ ಮಧ್ಯೆ (ಸುಕನ್ಯಾ ಮಾರುತಿ)

ಸುಕನ್ಯಾಮಾರುತಿಯವರ ಎರಡನೆಯ ಕವನ ಸಂಕಲನವಿದು. ಕವನ ಕಟ್ಟುವುದರಲ್ಲಿ ಇವರ ಕೈ ಪಳಗಿದೆ. ಪೌರಾಣಿಕ ಪರಿಸರದ ಹಿನ್ನೆಲೆಯಲ್ಲಿ ಸಮಕಾಲೀನ ಸಂಗತಿಗಳನ್ನು ಅರ್ಥೈಸುವ ಪ್ರಯತ್ನ ಇವರ ಕವನಗಳಲ್ಲಿದೆ. ಹಾಗೆಯೇ ಕೆಲವು ವಚನಗಳನ್ನೂ ಇವತ್ತಿನ ಸಂದರ್ಭಕ್ಕೆ ಹೊಂದಿಕೆಯಾಗುವಂತೆ ಬದಲಾಯಿಸಿ ರಚಿಸಿದ್ದಾರೆ. ಆದರೆ ಪರಂಪರೆಯ ಅರಿವು ಹಾಗೂ ಸಮಕಾಲೀನ ಆಸಕ್ತಿ ಇವುಗಳ ಸಂಯೋಗದಿಂದುಂಟಾದ ಬೆಳಕು ಇಲ್ಲಿಲ್ಲದಿರುವುದು ಬಹು ಮುಖ್ಯ ಕೊರತೆ.

ಸುಕನ್ಯಾಮಾರುತಿಯವರ ಪ್ರತಿಭಟನೆಗೆ ಯಾವುದೇ ಒಂದು ತಾತ್ವಿಕ ಹಿನ್ನೆಲೆಯಿಲ್ಲದಿರುವುದರಿಂದಾಗಿ ಕವನಗಳು ನಿರ್ದಿಷ್ಟ ಪರಿಣಾಮ ಬೀರುವುದರಲ್ಲಿ ಸೋಲುತ್ತವೆ. ಕಾಳ್ಗಿಚ್ಚು, ಮೂಕರೋದನ, ನಾನು ನಾನಾಗುತ್ತೇನೆ – ಸಂಕಲನದ ಯಶಸ್ವೀ ಕವನಗಳೆನ್ನಬಹುದು.

ಗೀತಶಿಲ್ಪ (ಬಿ. ವಿ. ರುಕ್ಮಿಣಿ)

ಮಾಧ್ಯಮಿಕ ಶಾಲೆಯ ಮುಖ್ಯೋಪಾಧ್ಯಾಯಿನಿಯಾದ ರುಕ್ಮಿಣಿಯವರು ಶಾಲೆಯಲ್ಲಿ ನಡೆಯುವ ಅನೇಕ ಸಮಾರಂಭಗಳಿಗೆ ಹೊಂದುವಂತೆ ಅನೇಕ ಗೀತೆಗಳನ್ನು ರಚಿಸಿ ಸಂಕಲನ ರೂಪದಲ್ಲಿ ಪ್ರಕಟಿಸಿದ್ದಾರೆ. ದೇವರ ಸ್ತೋತ್ರಗಳು,

ಕೋಲಾಟದ ಪದಗಳು. ನಾಡು–ನುಡಿಯ ಬಗೆಗಿನ ಅಭಿಮಾನ ಗೀತೆಗಳು. ಶಾಲೆಯ ಪರಿಚಯ ವಿಜ್ಞಾನದ ಪ್ರಭಾವ ಮೊದಲಾದವುಗಳ ಬಗೆಗಿನ ರಚನೆಗಳು - ಹೀಗೆ ತಮಗೆ ತೋಚಿದ್ದರ ಬಗ್ಗೆಯೆಲ್ಲ ರುಕ್ಮಿಣಿಯವರು ಬರೆದಿದ್ದಾರೆ.

ಬಹುಪಾಲು ರಚನೆಗಳು ಕೀರ್ತನೆಗಳ, ಜನಪದಗೀತೆಗಳ ಸುಲಭ ಅನುಕರಣೆಗಳಾಗಿವೆ. ಮಕ್ಕಳಿಗೆ ಖುಷಿನೀಡುವಂಹ ರಚನೆಗಳೂ ಇಲ್ಲಿಲ್ಲ. ಭಜನೆಗೆ ಇಲ್ಲಿನ ಹೆಚ್ಚಿನ ರಚನೆಗಳು ಅನುಕೂಲವಾಗಿವೆ.

ಸೂರ್ಯ (ಜಮುನರಾಣಿ . ವಿ . ಮಿರ್ಲೆ)

ಇದೊಂದು ಅರವತ್ತು ಪುಟಗಳ ಖಂಡಕಾವ್ಯ. ಕಥಾನಾಯಕಿ ಒಳ್ಳೆಯ ಮನೆತನದ ಹುಡುಗಿ. ಹುಡುಗನೊಬ್ಬ ಪ್ರೇಮಿಸುತ್ತಾನೆ. ಮೊದಮೊದಲು ನಿರಾಕರಿಸಿದರೂ ಕಡೆಗೆ ಒಲಿಯುತ್ತಾಳೆ. ಆತನೊಡನೆ ಹೊಸ ಬದುಕಿನ ಕನಸು ಕಟ್ಟುತ್ತಾಳೆ. ಆದರೆ ಆತಕಡೆಗೆ ಇವಳನ್ನು ತಿರಸ್ಕರಿಸಿ ಬೇರೊಬ್ಬಳನ್ನು ಮದುವೆಯಾಗುತ್ತಾನೆ. ಹತಾಶಳಾದ ಹುಡುಗಿ ಹೇಳಿಕೊಂಡಿರುವ ಆತ್ಮಕಥೆಯೇ– ಈ ದೀರ್ಘ ಕಥನ ಕವನದ ವಸ್ತು.

ವರದಿಯ ರೂಪದಲ್ಲಿರುವ ಈ ಕವಿತೆಯಲ್ಲಿ ಪ್ರೀತಿಯ ತೀವ್ರತೆಯಾಗಲೀ, ದುರಂತದ ಹಿಂದಿನ ತೀವ್ರ ವಿಷಾದವಾಗಲೀ ಅನುಭವಕ್ಕೆ ಬರುವುದಿಲ್ಲ. ಅದಕ್ಕೆ ಮುಖ್ಯ ಕಾರಣ ಆತ್ಮಾನುಕಂಪೆ. ಈ ಆತ್ಮಾನುಕಂಪೆ ಭಾವುಕ ಮನಸ್ಸಿನ ಹಳಹಳಿಕೆಯಾಗಿ ವ್ಯಕ್ತವಾಗುವುದರಿಂದಾಗಿ ಗಂಡು–ಹೆಣ್ಣಿನ ಸಂಬಂಧದ ಮಿಂಚು ಇಲ್ಲಿ ಹೊಳೆಯುವುದಿಲ್ಲ. ಬಂಧವೂ ಆತ್ಯಂತ ಸಡಿಲವಾದುದು. ಭಾಷೆಯ ಬಳಕೆ ಸಹ– ನೀರಸವಾದುದು. ಅಪ್ರಬುದ್ಧ ಮನಸ್ಸಿನ ಹಳಹಳಿಕೆ ಇಲ್ಲಿ ಕಾವ್ಯದ ವೇಷ ಧರಿಸಿದೆ.

ನಾ ಬಸ್ಯಾ ಅಂತ (ಸಿದ್ದನಗೌಡ ಪಾಟೀಲ)

ಶೋಷಿತರ ಪರವಾದ ಧ್ವನಿ–ಈ ಸಂಕಲನದ ಸತ್ವ. ವ್ಯವಸ್ಥೆಯ ಬಗ್ಗೆ ಸಿಟ್ಟು, ತುಳಿತಕ್ಕೊಳಗಾದವರು ಬಗ್ಗೆ ಅಂತಃಕರಣ., ಈ ಸಮಾಜ ಬದಲಾಗಬೇಕೆನ್ನುವ ಹಟ-ಇಲ್ಲಿನ ಬಹುಪಾಲು ಕವನಗಳಲ್ಲಿ ಮತ್ತೆ ಮತ್ತೆ ಆವರ್ತನಗೊಂಡಿವೆ.

ವಿಡಂಬನೆ ಸಿದ್ದನಗೌಡರ ಮುಖ್ಯ ಆಯುಧ. ಆದರೆ ವಿಡಂಬನೆ ಅರ್ಥಪೂರ್ಣವಾಗುವುದು ಅದರ ಹಿಂದೆ ಆಳವಾದ ವಿಷಾದವಿದ್ದಾಗ ಮಾತ್ರ. ಇಲ್ಲದಿದ್ದರೆ ವಿಡಂಬನೆ ಕೇವಲ ಬೈಗುಳ ಮಾತ್ರವಾಗಿ ಬಿಡುವ ಸಾಧ್ಯತೆಯಿರುತ್ತದೆ. ಪಾಟೀಲರು ಈ ಅಪಾಯವನ್ನು ಲಕ್ಷಿಸಬೇಕಾಗಿದೆ.

ಪಾಟೀಲರಿಗೆ ಚಾರಿತ್ರಿಕ ಪ್ರಜ್ಞೆಯಿದೆ. ಈ ಪ್ರಜ್ಞೆಯ ಬೆಳಕಿನಲ್ಲಿ ಅವರ ಸಮಕಾಲೀನ ಆಸಕ್ತಿಗಳು ವಿಶ್ಲೇಷಣೆಗೆ ಒಳಪಡುವುದರಿಂದಾಗಿ ಅವುಗಳಿಗೊಂದು

ಗಟ್ಟಿತನ ಒದಗಿಬಂದಿದೆ. ಆದರೆ ಈ ಎಲ್ಲವೂ ಕವನದ ಆಕೃತಿಯಲ್ಲಿ ಆಕಾರ ಪಡೆಯದೆ ಪರಿಣಾಮಕಾರಿಯಾಗುವುದಿಲ್ಲ. ಇಲ್ಲಿನ ಕವನಗಳ ಸಡಿಲಬಂಧ–ಉರಿಯುವ ಕಿಚ್ಚನ್ನು ಬೂದಿಯಾಗಿಸಿಬಿಡುತ್ತದೆ. ಪಾಟೀಲರು ಕಾವ್ಯಶಿಲ್ಪದ ಬಗ್ಗೆ ಎಚ್ಚರ ವಹಿಸಿದರೆ ಉತ್ತಮ ಕವಿತೆಗಳನ್ನು ಬರೆಯಬಲ್ಲರು.

ನನ್ನ ಅಂಬಾರ ಕೊಡಲು (ವಿಷ್ಣುನಾಯ್ಕ)

ವಿಷ್ಣುನಾಯ್ಕರ ಮೂರನೆಯ ಕವನ ಸಂಕಲನವಿದು. ಹಿಂದಿನ ಸಂಕಲನಗಳಿಗಿಂತ ಹೆಚ್ಚು ಪ್ರಬುದ್ಧವಾದ ರಚನೆಗಳು ಇಲ್ಲಿವೆ. ಸಮಕಾಲೀನ ಆಸಕ್ತಿಯನ್ನು ಇಲ್ಲಿನ ಅನೇಕ ಕವನಗಳು ಪ್ರಕಟಿಸುತ್ತವೆ. ತುಳಿತಕ್ಕೊಳಗಾದವರ ಬಗೆಗಿನ ಕಾಳಜಿ ಇಲ್ಲಿ ದಟ್ಟವಾಗಿದೆ. ಭಾಷಾಬಳಕೆಯಲ್ಲಿಯೂ ನಾಯ್ಕರು ಸಂಯಮ ಗಳಿಸಿಕೊಳ್ಳುವ ಗಂಭೀರ ಪ್ರಯತ್ನ ನಡೆಸಿದ್ದಾರೆ.

'ನನ್ನ ಅಂಬಾರಕೊಡಲು' ಕವನ ಒಂದು ಊರಿನ ವಿವರಗಳನ್ನು ನೀಡುತ್ತಲೇ ಬದಲಾದ ಪರಿಸ್ಥಿತಿಯನ್ನೂ, ಆ ಪರಿಸ್ಥಿತಿಯ ಬಗೆಗೆ ಕವಿಯ ನಿಲುವನ್ನೂ ಪ್ರಕಟಿಸುತ್ತದೆ. ನಾನು ಶಬರಿಯಲ್ಲ, ಕೇಳಿದಿರೇನಯ್ಯ, ಆತ್ಮವಿಮರ್ಶೆ–ಮೊದಲಾದವು ಸರಳ ರಚನೆಗಳಾದರೂ ಅವುಗಳ ಹಿಂದಿನ ಕವಿಯ ದನಿ ಮಸುಕಾಗಿಲ್ಲ. 'ಹಾಲಕ್ಕಿಗಳ ಕಂಬಳದ ಹಾಡು' – ಸಂಕಲನದ ಯಶಸ್ವೀ ಕವನಗಳಲ್ಲೊಂದು ಎನ್ನಬಹುದು.

ಕಣಗಳು (ಸುಜನಾ)

ಸುಜನಾ ಅವರು ರಚಿಸಿರುವ ಸುಮಾರು 160 ಮುಕ್ತಕಗಳ ಸಂಕಲನವಿದು. "ಇವುಗಳನ್ನು ಮುಕ್ತಕಗಳೆಂದು ಕರೆಯುವ ಹೇರಾಸೆಯಾಗಲೀ, ಚಟುಕಗಳೆಂದು ಕರೆಯುವಾಸೆಯಾಗಲೀ ಇಲ್ಲ, ಮಿನಿಕವನಗಳೆಂದು ಇವುಗಳನ್ನು ಕರೆಯಬಹುದೆಂದು" ಸುಜನಾ ಸೂಚಿಸಿದ್ದಾರೆ.

"ಕವನಗಳನ್ನು ಬರೆಯುವಾಗ ಅವುಗಳ ಅಂದಕ್ಕೆ ಒಪ್ಪದ ಪಂಕ್ತಿಗಳು ಹಾಗೆಯೇ ಉಳಿಯುತ್ತಿದ್ದುವು. ಅಂಥ ಅನೇಕ ಸಾಲುಗಳು ಆಕರ್ಷಕವಾಗಿರುತ್ತಿದ್ದುವು ಅಂಥವುಗಳಿಗೆ ಇಲ್ಲ ಬಿಡಿ, ಮಿಡಿಕವನಗಳ ರೂಪ ಕೊಟ್ಟಿದ್ದೇನೆ" – ಎಂದು ಇವುಗಳ ರಚನೆಯ ಹಿನ್ನೆಲೆಯನ್ನೂ ಸುಜನಾ ವಿವರಿಸಿದ್ದಾರೆ. ಹೀಗಾಗಿ ಇಲ್ಲಿನ ಅನೇಕ ರಚನೆಗಳು ಸ್ವತಂತ್ರ ಅಸ್ತಿತ್ವ ಪಡೆದುಕೊಳ್ಳುವುದಿಲ್ಲ. ಹನಿಕವನಗಳು ಸಹಜವಾಗಿ ನೀಡಬಹುದಾದ ಉಲ್ಲಾಸವಾಗಲೀ, ಖುಷಿಯಾಗಲೀ ಇಲ್ಲಿ ಸಿಗದಿರುವುದಕ್ಕೆ ಕಾರಣ—ಹನಿಗವನಗಳ ಸ್ವರೂಪವೂ ಇವುಗಳಿಗೆ ಇಲ್ಲದಿರುವುದಿರಬಹುದು.

ಇಲ್ಲಿನ ಕೆಲವು ರಚನೆಗಳಲ್ಲಿ. ಸುಜನಾ ಅವರ ಭಾವಕೋಶದ ಎಳೆಗಳು ಶಬ್ದಚಿತ್ರಗಳಾಗಿ ಮೂಡಿಬಂದಿವೆ. ಅಂಥವು ಮನಸೆಳೆಯುತ್ತವೆ.

ಸೊನ್ನೆಯೆರಡರ ನಡುವೆ – ಉಡಿದಾರ (ಸುಜನಾ)

ಸುಜನಾ ಅವರು 'ಒಂದೆ ಸೂರಡಿಯಲ್ಲಿ' ಎಂಬ ಕವನ ಸಂಪುಟದ ಎರಡು ಭಾಗಗಳಾಗಿ 'ಸೊನ್ನೆಯರಡರ ನಡುವೆ', ಉಡಿದಾರ'-ಎಂಬ ಎರಡು ಸಂಕಲನಗಳನ್ನು ಪ್ರಕಟಿಸಿದ್ದಾರೆ. 1965 ರಿಂದೀಚೆಗೆ ಸುಜನಾ ಅವರು ಬರೆದ 180 ಕವನಗಳು ಇಲ್ಲಿ ಸಂಕಲಿತಗೊಂಡಿವೆ.

ಬದುಕಿನ ಸಂಕೀರ್ಣತೆ, ಬದಲಾದ ಜೀವನಕ್ರಮ, ಸೃಷ್ಟಿಯ ವೈವಿಧ್ಯ-ಸುಜನಾ ಅವರ ಆಸಕ್ತಿಗಳು:

ಸೊನ್ನೆಯೆರಡರ ನಡುವೆ ಎಷ್ಟೆಲ್ಲ ಬನ್ನ ?
ಏಕೆಲ್ಲ ಇಷ್ಟು ಗುನ್ನ ? ಏನೆಲ್ಲ ಸುಣ್ಣ ಬಣ್ಣ ?
ಬೆಳಕಿನಿಕ್ಕೆಲದಿ-ಸುತ್ತಲದಿ-ಕಗ್ಗತ್ತಲೋ ?
ಕಗ್ಗತ್ತಲಂಚುಗಳಲ್ಲಿ ಬೆಳಕೋ ?
ಎರಡರಂಚಿನಲಿ ಮತ್ತಾವ ತಳುಕು ತುಳುಕೋ ?

ಇಂಥವೇ ಪ್ರಶ್ನೆಗಳನ್ನು ಸುಜನಾ ಅವರು ತಮ್ಮ ಬಹುಪಾಲು ಕವನಗಳಲ್ಲಿ ಕೇಳುತ್ತಾರೆ. ಬಹಳ ಸಾರಿ ಇಂಥ ಪ್ರಶ್ನೆಗಳ ನಡುವೆ ಕಾವ್ಯ ಮರೆಯಾಗಿಬಿಡುತ್ತದೆನ್ನುವುದು ವಿಷಾದದ ಸಂಗತಿ. ಸುಜನಾ ಅವರ ಕಾವ್ಯಾಭ್ಯಾಸ ಕವನ ಕಟ್ಟುವ ಅವರ ಕುಶಲತೆಯಲ್ಲಿ ಅಲ್ಲಲ್ಲಿ ಕಾಣಿಸುತ್ತದೆ. ಆದರೆ ಅಜ್ಞಾತ ಅಂಶವೊಂದು ಇದರೊಳಗೆ ಸೇರಿ ಜೀವ ತುಂಬುವ ಕ್ರಿಯೆ ಇಲ್ಲಿ ಕಾಣಿಸುವುದಿಲ್ಲ. ಬದುಕಿನ ಬಗೆಗಿನ ಗಂಭೀರ ಚಿಂತನೆ, ಪ್ರಬುದ್ಧ ಮನಸ್ಸು ಇಲ್ಲಿನ ಕವಿತೆಗಳನ್ನು ರೂಪಿಸಿದೆಯೆನ್ನುವುದು ಒಟ್ಟು ಕವಿತೆಗಳನ್ನು ಓದಿದಾಗ ಮೂಡುವ ಅಭಿಪ್ರಾಯ.

ಮುಂದಾರಿ (ಕೆ. ಗೋವಿಂದರಾಜು)

'ಮುಂದಾರಿ' ದಲಿತ ಕವಿ ಗೋವಿರಾಜು ಅವರ ಮೊದಲ ಸಂಕಲನ. ಮೊದಲ ಬಾರಿಗೆ ಭಾಷೆಯನ್ನು ತನ್ನ ಅನುಭವಗಳ,ಅನ್ನಿಸಿಕೆಗಳ ಅಭಿವ್ಯಕ್ತಿಗಾಗಿ ಬಳಸಿಕೊಳ್ಳುತ್ತಿರುವ ದಲಿತ ಸಾಹಿತಿಯೊಬ್ಬ ವಸ್ತುಪ್ರಪಂಚ ಹಾಗೂ ಅಭಿವ್ಯಕ್ತ ವಿಧಾನ ಗಳೆರಡರಲ್ಲೂ ಹೊಸಲೋಕ ತೆರೆಯಲು ಸಾಧ್ಯ. ದೇವನೂರರಂಥವರ ಶಕ್ತಿ ಇರುವುದೇ ಇಲ್ಲಿ. ಗೋವಿಂದರಾಜು ಅವರ ಸಮಸ್ಯೆಯಿರುವುದೂ ಇಲ್ಲಿಯೇ. ವಸ್ತುಪ್ರಪಂಚ ಹಾಗೂ ಅಭಿವ್ಯಕ್ತಿಯ ನಡುವೆ ಹೊಂದಾಣಿಕೆ ತರುವುದು ಅವರಿಗೆ ಸಾಧ್ಯವಾಗಿಲ್ಲವಾದುದರಿಂದಲೇ ಹೇಳಬೇಕಾದ್ದು ಇದ್ದೂ! ಹೇಳುವುದು ತೆಳುವಾಗಿದೆ.

'ಬಾಲ್ಯದ ಹಸಿರು' ಕವನ ಸರಳ ರಚನೆಯಾದರೂ ಭಿನ್ನತೆಯಿಂದಾಗಿ ಗಮನ ಸೆಳೆಯುತ್ತದೆ.

ಕುಡಿದು ಬಂದ ಅಪ್ಪನು
ಅವ್ವನೊಡನೆ ಜಗಳವಾಡುವಾಗ
ಮನೆಗೆಲ್ಲಾ ಮಂಕುಬಡಿದು
ತೋಚದೆ ಅಳು ಬರುತ್ತಿತ್ತು
ಹುಳಿಹೆಂಡದ ವಾಸನೆಯು
ಕುರಿಬಾಡಿನ ತುಂಡುಗಳು
ತಣಗೆಯಲ್ಲಿ ತುಂಬಿಕೊಂಡು
ಆಹ್ವಾನಿಸುತ್ತ ನಗುತ್ತಿತ್ತು,

ಗೋವಿಂದರಾಜು ಅವರ ಶಕ್ತಿ ಹಾಗೂ ಮಿತಿಗಳೆರಡಕ್ಕೂ ಈ ಸಾಲುಗಳನ್ನು ಉದಾಹರಣೆಯಾಗಿ ಗಮನಿಸಬಹುದು. ಬಯಲು, ಮುಂದಾರಿ, ಹಂಬಲ, ತಬ್ಬಲಿಗಳು – ಈ ಕವಿಯ ಬಗ್ಗೆ ಭರವಸೆ ಮೂಡಿಸುವಂಥ ಕವನಗಳು.

ಅವರು ಬೆಳೆಸಿದ ಗಿಡಗಳು (ಬಹುಮಾನಿತ ವಿದ್ಯಾರ್ಥಿ ಕವನಗಳು. ಸಂ : ಚಿ. ಶ್ರೀನಿವಾಸರಾಜು)

ಕ್ರೈಸ್ಟ್ ಕಾಲೇಜು ಕನ್ನಡ ಸಂಘದ ಮೂಲಕ ಶ್ರೀನಿವಾಸರಾಜು ಅವರು ನಮ್ಮ ಸಾಂಸ್ಕೃತಿಕ ಸಂದರ್ಭದಲ್ಲಿ ಅತ್ಯಂತ ಮಹತ್ವದ ಕೆಲಸ ಮಾಡುತ್ತಿದ್ದಾರೆ. ಯುವ ಪ್ರತಿಭೆಯನ್ನು ಪ್ರೋತ್ಸಾಹಿಸುವ ರಾಜರತ್ನಂ ಪರಂಪರೆಯನ್ನು ಅವರು ಯಶಸ್ವಿಯಾಗಿ ಮುಂದುವರಿಸಿಕೊಂಡು ಬರುತ್ತಿದ್ದಾರೆ. ದ. ರಾ. ಬೇಂದ್ರೆ ಸ್ಮೃತಿ ಅಂತರ ಕಾಲೇಜು ಕವನ ಸ್ಪರ್ಧೆಯನ್ನು ಏರ್ಪಡಿಸಿ ಬಹುಮಾನಿತ ಕವನಗಳನ್ನು ಪ್ರಕಟಿಸುವ ಈ ಯೋಜನೆ ಅಭಿನಂದನೀಯವಾದುದು. ಸ್ಪರ್ಧೆಗೆ ಬಂದ 169 ಕವನಗಳಲ್ಲಿ ಎಚ್. ಎಸ್ ರಾಘವೇಂದ್ರರಾವ್ ಹಾಗೂ ಎಚ್. ಎಸ್. ವೆಂಕಟೇಶಮೂರ್ತಿಯವರು 17 ಕವನಗಳನ್ನು ಆರಿಸಿಕೊಟ್ಟಿದಾರೆ. ಕವಿತೆಗಳು ಇಲ್ಲಿ ಸಂಕಲಿತವಾಗಿವೆ.

ಕೆಲವು ಭರವಸೆಯ ಧ್ವನಿಗಳು ಇಲ್ಲಿರುವುದು ಗಮನಾರ್ಹ. ಕಾ.ಸು. ರಾಮಚಂದ್ರ, ಬಸವರಾಜವಕ್ಕುಂದ, ಅಬ್ದುಲ್‌ರಶೀದ್, ಸಿ.ಪಿ. ರವಿಕುಮಾರ್, ಚಿಂತಾಮಣಿ ಕೂಡ್ಲೆಕೆರೆ, ವಿದ್ಯಾಭರತನಹಳ್ಳಿ – ಮೊದಲಾದವರ ಕವನಗಳಲ್ಲಿ ಕಾವ್ಯಶಕ್ತಿಯ ಹೊಳಹುಗಳು ಕಾಣಿಸುತ್ತವೆ.

ಹೊಸಾ ಕಾಲ ಬಂತ (ಧರಣೇಂದ್ರ ಕುರಕುರಿ)

ಇದು ಕುರಕುರಿಯವರ ಮೂರನೆಯ ಕವನ ಸಂಕಲನ. ಜಾನಪದ ಸತ್ವವನ್ನು ಬಳಸಿಕೊಂಡು ಸಮಕಾಲೀನ ಬದುಕನ್ನು ಚಿತ್ರಿಸುವ ಪ್ರಯತ್ನ ಇಲ್ಲಿದೆ. ಜಾನಪದ

ಚೌಕಟ್ಟನ್ನು ಬಳಸಿಕೊಳ್ಳುವಾಗ ಕವಿ ವಿಶೇಷ ಎಚ್ಚರದಿಂದಿರಬೇಕಾಗುತ್ತದೆ. ಏಕೆಂದರೆ ಅಂಥ ಧಾಟಿಯಲ್ಲಿ, ಮುಖ್ಯವಾಗಿ ಹೇಳಬೇಕಾದ್ದು ಹೊರಗಡೆಯೇ ಉಳಿದುಬಿಡುವ ಅಪಾಯ ಹೆಚ್ಚು. ಅಂಥ ಅಪಾಯದಿಂದ ಕುರಕುರಿಯವರು ಪಾರಾಗಬೇಕಿದೆ.

ಸಮಾಜವಾದೀ ಆಶಯವುಳ್ಳ ಶೋಷಿತಪರವಾದ ಸ್ಪಷ್ಟ ದನಿ – ಇಲ್ಲಿನ ಕವಿತೆಗಳಲ್ಲಿ ಕೇಳಿಸುತ್ತದೆ. ದಿನನಿತ್ಯದ ವಿವರಗಳ ಮೂಲಕವೇ ಕವನ ಕಟ್ಟುವ ಇವರ ಕೌಶಲ ಮೆಚ್ಚುಗೆ ಗಳಿಸುತ್ತದೆ.

ಕವಿತೆಗಳು 1980 (ಸಂ: ಚೆನ್ನವೀರಕಣವಿ)

ಸಾಹಿತ್ಯಕ ನಿಯತಕಾಲಿಕೆಗಳಲ್ಲಿ ಪ್ರಕಟಗೊಳ್ಳುವ ಬರಹಗಳು ಅವುಗಳ ಲೇಖಕರ ಪುಸ್ತಕ ರೂಪದ ಸಂಕಲನಗಳಲ್ಲಿ ಸೇರಬಹುದು,ಸೇರದಿರಬಹುದು. ಹಳೆಯ ಸಂಚಿಕೆಗಳಲ್ಲಿ ಚೆಲ್ಲಿಹೋಗಬಹುದಾದ ಈ ಬರಹಗಳನ್ನು ಆಯಾಯ ವರ್ಷ ಒಟ್ಟಿಗೇ ಒಂದು ಕಡೆ ಸಂಕಲಿಸಿ ಓದುಗರಿಗೆ ದೊರೆಯುವಂತೆ ಮಾಡುವ ಸಾಹಿತ್ಯ ಅಕಾಡೆಮಿಯ ಯೋಜನೆಯ ಫಲ– ಈ ಕವಿತಾ ಸಂಕಲನ. ಇದೊಂದು ಸ್ತುತ್ಯಾರ್ಹ ಯೋಜನೆ. 1980 ರಲ್ಲಿ ಪ್ರಕಟವಾದ ಕವಿತೆಗಳಲ್ಲಿ 44 ಕವಿತೆಗಳನ್ನು ಆಯ್ದು, ಸೂಕ್ತ ಪ್ರಸ್ತಾವನೆಯೊಂದಿಗೆ ಕನ್ನಡದ ಖ್ಯಾತ ಕವಿಗಳಲ್ಲೊಬ್ಬರಾದ ಚೆನ್ನವೀರಕಣವಿ ಯವರು ಇದನ್ನು ಸಂಪಾದಿಸಿಕೊಟ್ಟಿದ್ದಾರೆ.

ಹಿರಿಯ ಕವಿಗಳಾದ ಬೇಂದ್ರೆ, ಪು ತಿ ನ, ವಿನಾಯಕ, ಅಡಿಗರಿಂದ ಹಿಡಿದು ಇತ್ತೀಚಿನ ಡಿ. ವಿಜಯ, ಪ್ರತಿಭಾ ಅವರವರೆಗಿನ ಕವಿತೆಗಳು ಇಲ್ಲಿವೆ. ಭಿನ್ನ ಮನೋ ಧರ್ಮದ, ಭಿನ್ನ ಕಾವ್ಯಪ್ರಕಾರದ ಕವಿತೆಗಳೆಲ್ಲ ಇಲ್ಲಿ ಒಟ್ಟಿಗೆ ಸೇರಿವೆ. ಕನ್ನಡ ಕಾವ್ಯ ಪಡೆಯುತ್ತಿರುವ ದಿಕ್ಕನ್ನು ಅರ್ಥ ಮಾಡಿಕೊಳ್ಳಲು ಇಂಥ ಸಂಕಲನಗಳು ನೆರವಾಗ ಬಲ್ಲವು.

ಮಿಾನು ಮಲ್ಲಿಗೆ [ಭವಾನಿ ಶಂಕರ]

ಇದು ಇವರ ಎರಡನೆಯ ಕವನ ಸಂಕಲನ. ಸಾಮಾಜಿಕ ವಿಮರ್ಶೆ ಹಾಗೂ ಆತ್ಮ ಜಿಜ್ಞಾಸೆಯನ್ನು ಕುರಿತ ಕವನಗಳು ಇಲ್ಲಿವೆ. ಒಂದು ಸಣ್ಣ ಘಟನೆಯನ್ನು ನಿರೂಪಿ ಸುತ್ತಲೇ ವಿಶೇಷವಾದುದನ್ನು ಧ್ವನಿಸುವ ಪ್ರಯತ್ನ–ಭವಾನಿ ಶಂಕರರ ರೀತಿ. ಇದು ಕೆಲವು ಕಡೆ ಯಶಸ್ವಿಯಾಗಿದೆ. ವಸ್ತು ನಿರ್ವಹಣೆಯ ಮೇಲಿನ ಪ್ರಭುತ್ವ–ಇವರಲ್ಲಿ ಗಮನಿಸಬೇಕಾದ ಮುಖ್ಯ ಸಂಗತಿ. ನನ್ನ ಎರಡು ಮುಖಗಳು, ಖಿಂಗ್‌ಪಿಂಗ್, ಬಂಧಿ–ಮೊದಲಾದ ಕವನಗಳು ಗಮನ ಸೆಳೆಯುತ್ತವೆ.

ಹೃದಯ ಗೀತೆ (ಭೀ. ಹ. ಸುಂಕದ)

ಕರ್ನಾಟಕದ ಹೊರಗಿದ್ದುಕೊಂಡು ನಾಡು ನುಡಿಗಳ ಬಗ್ಗೆ ಅಪಾರ ಅಭಿಮಾನ ಪ್ರೀತಿಯನ್ನು ಬೆಳೆಸಿಕೊಂಡಿರುವ ಸುಂಕದ ಅವರು, ಆ ತಮ್ಮ ಪ್ರೀತಿ, ಅಭಿಮಾನ ಗಳಿಗೆ ಇಲ್ಲಿ ಪದ್ಯದ ವೇಷ ತೊಡಿಸಿದ್ದಾರೆ. ಬಹುಪಾಲು ರಚನೆಗಳು ಸಾನೆಟ್ ರೂಪ ದಲ್ಲಿವೆ. ಆದರೆ ಸಾನೆಟ್‌ನ ಬಿಗಿ ಇಲ್ಲಿಲ್ಲ. ದಾಸರ ಕೀರ್ತನೆಗಳನ್ನು ಅನುಸರಿಸಿದ ಹಾಡುಗಳು ಕೆಲವಿವೆ. ಈ ಹಾಡುಗಳ ಭಾವ ಸಹ ದಾಸರ ದಾಸ್ಯಕ್ಕೆ ಸಿಕ್ಕಿ ನರಳಿದೆ.

ಬಳ್ಳಿಯೊಡಲ ಕಡಲು (ಕೆ. ರಮಾನಂದ)

ಇದು ಕವಿಯ ಮೊದಲ ಸಂಕಲನ. ರತಿ, ರಂಭೆ, ಫೋಷಾ ಮೊದಲಾದವರ ಬಗ್ಗೆ ಪ್ರತಿಕ್ರಿಯಾರೂಪದ ಪದ್ಯಗಳೂ, ಕೆಲವು ದೇಶಭಕ್ತಿ ಗೀತೆಗಳೂ ಇಲ್ಲಿವೆ. ಲಯಜ್ಞಾನವಾಗಲೀ, ಭಾಷಾ ಸೂಕ್ಷ್ಮವಾಗಲೀ ಇಲ್ಲದ ಇಲ್ಲಿನ ಕವಿತೆಗಳು ಶಬ್ದ ಕಸರತ್ತುಗಳಾಗಿವೆ. 'ಶಕುಂತಲೆಯ ಮನ' ಇದ್ದುದರಲ್ಲಿ ಉತ್ತಮವೆನ್ನಬಹುದು.

ಚರಗದ ಬುಟ್ಟಿ (ಆರ್. ಡಿ. ಹಲಸಂಗಿ)

ವೃತ್ತಿಯಿಂದ ಶಿಕ್ಷಕರಾಗಿದ್ದ ಹಲಸಂಗಿಯವರು ಶಿಕ್ಷಕರಾಗಿದ್ದಾಗಲೇ ಕೀರ್ತನೆ, ಭಜನೆ ಇತ್ಯಾದಿ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುತ್ತಿದ್ದರೆಂದು ಕಾಪಸೆಯವರು ತಮ್ಮ ನಲ್ನುಡಿಯಲ್ಲಿ ತಿಳಿಸಿದ್ದಾರೆ. ನಿವೃತ್ತರಾದನಂತರ ಅದನ್ನೇ ಪೂರ್ಣಾವಧಿಯ ವೃತ್ತಿಯನ್ನಾಗಿ ಮಾಡಿಕೊಂಡು ರಚಿಸಿದ 66 ರಚನೆಗಳು ಇಲ್ಲಿವೆ. ಗುರುಭಕ್ತಿ, ದೇಶಭಕ್ತಿ, ಸಹಕಾರತತ್ವ, ಉಳಿತಾಯ ಯೋಜನೆ, ಕುಟುಂಬ ಕಲ್ಯಾಣ – ಆಹಾ ! ದೇಶಸೇವೆಗೆ ಇದಕ್ಕಿಂತ ಬೇರೆ ಮಾರ್ಗವಿಲ್ಲ ! ಎಲ್ಲ ರೀತಿಯ ರಚನೆ ಗಳೂ ಇಲ್ಲಿವೆ. ಇವುಗಳನ್ನು ಓದುವುದಂತೂ ಸಾಧ್ಯವಿಲ್ಲ. ಹಾಡಿದರೆ ಹೇಗಿರು ತ್ತದೋ ಹಲಸಂಗಿಯವರೇ ಬಲ್ಲರು.

ಚಿಕ್ಕಿಯ ಮಾಲೆ (ಎಸ್. ಎಸ್. ಗದಗಕರ)

ಗದಗಕರರ ಆರನೆಯ ಸಂಕಲನವಿದು. ಖಂಡಕಾವ್ಯ, ಸಾನೆಟ್, ಭಾವಗೀತೆ– ಹೀಗೆ ನಾನಾ ರೀತಿಯ ಪ್ರಯೋಗಗಳಿವೆ. ನವೋದಯ ಹಾಗೂ ನವ್ಯಮಾರ್ಗ ವೆರಡರಲ್ಲೂ ಗದಗಕರ ಅವರು ಕವಿತೆ ರಚಿಸಿದ್ದಾರೆ. ಲಯಜ್ಞಾನ ಚೆನ್ನಾಗಿದ್ದು ಕಾವ್ಯ ರಚನೆಯಲ್ಲಿ ಇವರ ಕೈ ಪಳಗಿದೆ. ಆದರೆ ಇಲ್ಲಿನ ಯಾವುದೇ ಕವಿತೆ ಬೆಳಕು ಚೆಲ್ಲುವು ದರಲ್ಲಿ ಯಶಸ್ವಿಯಾಗುವುದಿಲ್ಲ. ಕವಿಯ ಆರನೇ ಸಂಕಲನದಲ್ಲಿ ನಾವು ನಿರೀಕ್ಷಿಸಬಹು ದಾದ ಮಟ್ಟವನ್ನು ನಾವಿಲ್ಲಿ ಕಾಣುವುದಿಲ್ಲ.

ದಳಗಳು (ಡಿ. ಪಾಂಡುರಂಗರಾವ್)

ವಿದ್ಯಾರ್ಥಿ ಜೀವನದಿಂದ ಹಿಡಿದು ಇಲ್ಲಿಯವರೆಗೂ ಬರೆದಿರುವ ಎಲ್ಲವನ್ನೂ ಸಂಕಲಿಸಿ–ಈ ಪುಸ್ತಕ ಪ್ರಕಟಿಸಿದಾರೆ.

"ಈ ಸಂಕಲನದ ಪದ್ಯಗಳು ನವೋದಯ ಸಂಪ್ರದಾಯದ ಭಾವಗೀತೆಗಳ ಮಟ್ಟಗಳಲ್ಲಿ ರಚಿತವಾಗಿದ್ದರೂ ಭಾವಗೀತೆಗಳ ಬಂಧದ ಸಮಕಟ್ಟು ಇವರಿಗೆ ಪೂರ್ತಿಯಾಗಿ ಹಸ್ತಗತವಾದಂತೆ ತೊರುವುದಿಲ್ಲ. ಲಯಪ್ರಜ್ಞೆ ಜಾಗೃತವಾಗಿದ್ದರೂ ಭಾವಗೀತಕ್ಕೆ ಅಗತ್ಯವಾದ ಸಮಗತಿಯು ನಡೆ ಕಂಡುಬರುವುದಿಲ್ಲ. ಇವರ ಪ್ರಾಸ ಮೋಹವು ಕೆಲವೆಡೆ ಅತಿರೇಕಕ್ಕೆ ಹೋಗಿರುವುದುಂಟು. ಪ್ರಯತ್ನ ಪೂರ್ವಕವಾದ ಪ್ರಾಸ ಜೊಡಣೆಯ ಪ್ರವೃತ್ತಿಯನ್ನು ತಡೆಗಟ್ಟಿ, ಅಭ್ಯಾಸ ಪ್ರಯತ್ನದಿಂದ ಲಯ ವಿನ್ಯಾಸ ಕೌಶಲವನ್ನು ಕುದುರಿಸಿಕೊಂಡರೆ ಉತ್ತಮರಚನೆಗಳನ್ನೂ ಕೊಡಬಲ್ಲರು" ಎಂದು ಮುನ್ನಡಿಯಲ್ಲಿ ಎಂ. ವಿ ಸೀತಾರಾಮಯ್ಯನವರು ಹೇಳಿರುವ ಮಾತುಗಳಿಗಿಂತ ಈ ಸಂಕಲನದ ಬಗ್ಗೆ ಹೆಚ್ಚಿಗೇನು ಹೇಳಲು ಸಾಧ್ಯ?

ಏಳು ಬೀಳಿನ ಈ ಕಡಲಲ್ಲಿ (ರಾಜಶೇಖರ ಪಾಟೀಲ)

ಇದು ರಾಜಶೇಖರರ ಎರಡನೆಯ ಸಂಕಲನ. ಹಿರಿಯ ಕವಿಗಳ ಗಾಢ ಪ್ರಭಾವ ಇವರ ಮೇಲಿದೆ. ಕೆಲವು ಕವಿತೆಗಳು ನೇರ ಅನುಕರಣೆಗಳಾಗಿವೆ. ಸಂಕಲನದಲ್ಲಿ ಎರಡು ಭಾಗಗಳಿವೆ. ಮೊದಲನೆಯ ಭಾಗವನ್ನು ಪರಕ್ಕೂ, ಎರಡನೆಯ ಭಾಗವನ್ನು ಇಹಕ್ಕೂ ಮೀಸಲಿರಿಸಿದಂತೆ ಕಂಡುಬರುತ್ತದೆ. ಇಹ–ಪರಗಳೆರಡರಲ್ಲೂ ಕಾವ್ಯವೆಂಬುದು ಮಾತ್ರ ಕಾಣೆಯಾಗಿದೆ. ನೀತಿಯುತ ಬಾಳ್ವೆಯ ಬಗ್ಗೆ ಕವಿಗೆ ವಿಶೇಷ ಬಲವಿರುವಂತೆ ಅನ್ನಿಸುತ್ತದೆ. ಆದರೆ ಈ ನೈತಿಕತೆಯ ಸ್ವರೂಪ ತೀರಾ ತೆಳುವಾದುದಾದ್ದರಿಂದ ಕಾವ್ಯ ಸಂದರ್ಭದಲ್ಲಿ ಅದು ನಿಜವಾಗುವುದಿಲ್ಲ.

ಅವಳೇ ಇವಳು (ರಂಗನಹಳ್ಳಿ ಮುದ್ದೇಗೌಡ)

ಇದು ಮುದ್ದೇಗೌಡರ ಎರಡನೆಯ ಸಂಕಲನ. ಪ್ರೇಮಗೀತೆಗಳೆಂದು ಇಲ್ಲಿನ ಕವಿತೆಗಳನ್ನು ಅವರು ಕರೆದಿದ್ದಾರೆ. ಇಂಥ ಕವನಗಳನ್ನು ಓದಿದಾಗ ಪ್ರೇಮದ ಬಗೆಗೆ ನಮಗಿರುವ ಕಲ್ಪನೆಯೇ ಬದಲಾಗಿಬಿಡಬಹದು. ಗಂಡು–ಹೆಣ್ಣಿನ ಸಂಬಂಧದ ಯಾವ ಸೂಕ್ಷ್ಮಗಳೂ ಇವರನ್ನು ಕಾಡಿದಂತಿಲ್ಲ. ಅನುಕರಣೆಯಲ್ಲೂ ಕೆಟ್ಟ ಸಿನಿಮಾ ಹಾಡುಗಳ ಅನುಕರಣೆಯಿರುವುದು ವಿಷಾದನೀಯ. ಒಟ್ಟಾರೆ ಇವು ತೀರಾ ಸಾಮಾನ್ಯ ರಚನೆಗಳು.

ಜೀವರಾಗ (ವೇದವ್ಯಾಸ ಜೋಷಿ)

ಇದು ವೇದವ್ಯಾಸ ಜೋಷಿಯವರ ಐದನೆಯ ಸಂಕಲನ. 2–3 ವರ್ಷಗಳಲ್ಲಿ ಐದು ಸಂಕಲನಗಳನ್ನು ಪ್ರಕಟಿಸಿರುವ ಇವರ ಕಾವ್ಯೋತ್ಸಾಹ ಬೆರಗು ಹುಟ್ಟಿಸು

ವಂಥದು. ಕಾವ್ಯರಚನೆಯ ಕೆಲವು ಸಾಮಾನ್ಯ ಸೂತ್ರಗಳನ್ನು ಬಲ್ಲ ಜೋಷಿಯವರು ಸಲೀಸಾಗಿ ಪದ್ಯ ಬರೆಯಬಲ್ಲರು ಅದೇ ಅವರ ಸಮಸ್ಯೆ.

ಭಾವುಕತೆ–ಇಲ್ಲಿನ ಕವಿತೆಗಳಲ್ಲಿ ಎದ್ದು ಕಾಣುವ ಅಂಶ. ಬದುಕನ್ನು ಗ್ರಹಿಸುವಲ್ಲಿ ಯಾವುದೇ ರೀತಿಯ ನೆಲೆಯಿಲ್ಲದಿರುವುದರಿಂದಾಗಿ ಇಲ್ಲಿನ ಕವನಗಳು ಶಬ್ದ ಜೋಡಣೆಯ, ಪ್ರಾಸ ಕೂಡಿಸುವ ಪ್ರಯತ್ನಮಾತ್ರವಾಗಿ ಉಳಿದಿವೆ. ಕೆಲವು ಗೀತೆಗಳು ತಮ್ಮ ಗೇಯಗುಣದಿಂದಾಗಿ ಗಮನ ಸೆಳೆಯುತ್ತವೆ.

ನಿರೀಕ್ಷೆ (ಒಡೆಯರ್ ಡಿ. ಹೆಗ್ಗಡೆ)

ಇದು ಸದಾಶಿವ ಡಿ. ಹೆಗ್ಗಡೆಯವರ ಮೊದಲ ಸಂಕಲನ. 'ಸೋಗು ಹಾಕುವುದರ' ವಿರುದ್ಧದ ದನಿ ಇಲ್ಲಿನ ಬಹುಪಾಲು ಕವನಗಳಲ್ಲಿ ಪ್ರಧಾನವಾಗಿ ಕೇಳಿಬರುತ್ತದೆ. ಹೆಣ್ಣಿನ ಬಗ್ಗೆ ಬರೆಯುವಾಗಲಂತೂ ಇದು ಇನ್ನೊಂದು ಅತಿ ತಲುಪಿ ನೀತಿ ಹೇಳುವ ಧಾಟಿ ಹಿಡಿಯುತ್ತದೆ. ಇಲ್ಲೆಲ್ಲ ಕವಿ ಹೊರಗೆ ನಿಂತು ಮಾತಾಡುವುದರಿಂದ ಕಾವ್ಯ ತೀವ್ರತೆಯನ್ನು ಪಡೆದುಕೊಳ್ಳದೆ ನೀತಿಪರ ಭಾಷಣ ವಾಗಿಬಿಡುತ್ತದೆ. ಇವರ ಸಾಮಾಜಿಕ ಟೀಕೆಗೂ ಸಹ ಈ ಮಾತುಗಳು ಅನ್ವಯಿಸು ತ್ತವೆ. ಇವರ ಟೀಕೆ–ಒಳಗಿನಿಂದ ಮೂಡಿಬರುವುದು ಸಾಧ್ಯವಾದಾಗ ಹೆಗ್ಗಡೆ ಯವರಿಂದ ಉತ್ತಮ ಕವಿತೆಗಳನ್ನು ನಾವು ನಿರೀಕ್ಷಿಸಬಹುದು.

ಅಂತರಾಳ (ಶಾಂತಾರಾಮ ಹೆಗ್ಗಡೆ)

ಗ್ರಹಿಕೆಯ ರೀತಿ ಹಾಗೂ ಅಭಿವ್ಯಕ್ತಿಯ ಕ್ರಮದಿಂದಾಗಿ ಇಲ್ಲಿನ ಕವಿತೆಗಳು ನವ್ಯಕಾವ್ಯ ಪರಂಪರೆಗೆ ಸೇರುವಂಥವು. 'ಅಡ್ಡಗೋಡೆಯ ಮೇಲೆ ದೀಪವಿಡುವಂಥ ಇಬ್ಬಗೆಯ ವ್ಯಕ್ತಿಯಲ್ಲ' (ನಾನು) ಎಂದು ಹೆಗ್ಗಡೆಯವರು ಹೇಳಿಕೊಂಡರೂ 'ಇಬ್ಬಂದಿತನ'ವೇ ಇವರ ಕವನಗಳ ಸ್ಥಾಯೀ ಭಾವವಾಗಿದೆ. ಈ ಇಬ್ಬಂದಿತನ–ಬೇಸರದ, ನಿರಾಸೆಯ ದನಿ ಹೊರಡಿಸುತ್ತದೆ. ಹೀಗಾಗಿ ಸುತ್ತಮುತ್ತಲಿನ ಈ ಇಬ್ಬಂದಿತ, ಕೊಳಕುತನದ ಬಗ್ಗೆ ಶಾಂತಾರಾಮರು ಗೊಣಗಾಡುತ್ತಾರೆ. ದುರ್ಬಲ ವಾದ ಕಾವ್ಯಬಂಧದಿಂದಾಗಿ ಈ ಗೊಣಗಾಟ ಅರ್ಥಪೂರ್ಣವಾಗುವುದಿಲ್ಲ. ಮಾತಿನ ಮೋಡಿ ಹಾಗೂ ಶಬ್ದ ಚಾಕಚಕ್ಯತೆ ಹೆಗ್ಗಡೆಯವರಲ್ಲಿ ವಿಶೇಷವಾಗಿ ಕಂಡುಬರುತ್ತದೆ.

ಮುಂಜಾವದ ಮನ್ನ (ಟಿ. ನಾಗರಾಜ್)

ಇದು ನಾಗರಾಜರ ಮೂರನೆಯ ಸಂಕಲನ. ಕವನ ಬರೆಯಲೇಬೇಕು, ಪ್ರಕಟಿಸಲೇಬೇಕು–ಎಂಬ ಹಟ ಇವರಿಗಿರುವಂತಿದೆ. ಈ ಕಾವ್ಯಶ್ರದ್ಧೆ ಮೆಚ್ಚು ವಂಥದು. ಆದರೆ ಎಷ್ಟೇ ಸಹೃದಯತೆಯಿಂದ ಪರಿಶೀಲಿಸಿದರೂ ಇಲ್ಲಿನ ಕವನಗಳಲ್ಲಿ

ಕಾವ್ಯಾಂಶ ಹುಡುಕುವುದು ಸಾಧ್ಯವಾಗಲಿಲ್ಲ. ತಮ್ಮ ಹಸಿ ಹಸಿ ಅನ್ನಿಸಿಕೆಗಳಿಗೆ ನಾಗರಾಜರು ಪದ್ಯದ ವೇಷ ತೊಡಿಸಿದ್ದಾರೆ.

ಕಾಮರೂಪ (ಶಾರದಾನಂದನ)

ಇದು ಶಾರದಾನಂದನರ ಮೂರನೆಯ ಸಂಕಲನ. ಭಾವಜೀವಿಯಾದ ಶಾರದಾನಂದನರು ಮೋಡ ತಳೆಯುವ ವಿವಿಧ ರೂಪಗಳನ್ನು ಕಂಡಾಗ ಸ್ಫುರಿಸಿದ ಭಾವನೆಗಳನ್ನು ಇಲ್ಲಿ ಚಿತ್ರಿಸಿದ್ದಾರೆ. ಇಂಥ ಒಟ್ಟು 64 ಚಿತ್ರಗಳು ಇಲ್ಲಿವೆ. ಮರ್ತ್ಯ-ಅಮರ್ತ್ಯದ ಸಂಬಂಧದ ಎಳೆಯನ್ನೂ ನಾವಿಲ್ಲಿ ಗುರ್ತಿಸಲು ಸಾಧ್ಯವಿದೆ. ಸಮಕಾಲೀನವಾದ ಯಾವುದೇ ಸಂಗತಿಗಳು ಈ ಕವಿಯನ್ನು ತಟ್ಟಿದಂತಿಲ್ಲ. ಲಯದ ಬಗೆಗೆ ಇವರಿಗಿರುವ ಹಿಡಿತ–ಕವನಗಳ ಓದಿನಲ್ಲಿ ಅರಿವಿಗೆ ಬರುತ್ತದೆ.

ಸೌರಭ (ಚಂದ್ರಶೇಖರಾಚಾರ್)

ಕವನ ಬರೆಯುವುದು
ನನ್ನ ಆಸೆ
ಬರೆಯೋಣವೆಂದು ಬಿಚ್ಚಿದೆ ಲೇಖನಿಯ
ನೋಡುತ್ತೇನೆ ಬರೆಯಲೊಲ್ಲದು
ಮಸಿ ಇದೆ, ಆದರೂ?
ಆಗ ತಿಳಿಯಿತು
ವಿಷಯವೇ ಸಿಕ್ಕಿಲ್ಲವೆಂದು !

ಈ ಕವಿಯ ಮೇಲಿನ ಮಾತುಗಳು ಸತ್ಯ. ಯಾವುದರ ಬಗ್ಗೆ ಬರೆಯಬೇಕು, ಏನು ಬರೆಯಬೇಕೆಂಬುದೇ ಇವರ ಮುಖ್ಯ ಸಮಸ್ಯೆ. ಈ ಸಮಸ್ಯೆಯ ಅರಿವು ಕವಿಗಿರುವುದು ಸಮಾಧಾನದ ಸಂಗತಿ. ಆ ಅರಿವಿದ್ದೂ ಇಷ್ಟೆಲ್ಲ ಕವನಗಳನ್ನು ಬರೆದಿರುವುದು ವಿಷಾದದ ಸಂಗತಿ. ಸಂಕಲನದಲ್ಲಿ ಇದೊಂದೇ ಉತ್ತಮ ಕವನವೆನ್ನಬಹುದು.

ಮಹಾಂತ ಚಿಂತನ (ಮಹಾಂತ ಪ್ರಿಯ)

ಮಹಾಂತಪ್ರಿಯ ಕಾವ್ಯನಾಮದ ಬಿ. ಶೇಖರಪ್ಪನವರು ರಚಿಸಿರುವ ವಚನಗಳ ಸಂಕಲನ. ಇಲ್ಲಿ ನೂರೊಂದು ವಚನಗಳಿವೆ. ಅನಾಥರು, ದಲಿತರು, ಮಠಾಧೀಶರು, ಶಿಕ್ಷಣವ್ಯವಸ್ಥೆ, ರಾಜಕಾರಣ, ಕನ್ನಡ–ಹೀಗೆ ಹತ್ತು ಹಲವು ಸಂಗತಿಗಳು ಇಲ್ಲಿನ ವಚನಗಳಿಗೆ ವಸ್ತು ಒದಗಿಸಿವೆ. ಸಾಂಪ್ರದಾಯಿಕ ನೈತಿಕ ಶ್ರದ್ಧೆಯ ಮನಸ್ಸು ಈ ವಚನಗಳ ರಚನೆಯ ಹಿಂದಿರುವುದರಿಂದ–ಆ ನೈತಿಕನಿಟ್ಟು ಇಲ್ಲಿ ಅಭಿವ್ಯಕ್ತವಾಗಿದೆ. ಸಮಕಾಲೀನ ಸಮಾಜದ ಅನೇಕ ಕೊಳಕುಗಳ ಬಗ್ಗೆ ಮಹಾಂತಪ್ರಿಯರ ಮನಸ್ಸು ವ್ಯಗ್ರವಾಗಿ–ಈ ವಚನಗಳು ಸೃಷ್ಟಿಯಾಗಿವೆ. ಈ

ಸಂಕಲನದಲ್ಲಿ ನಾವು ಕಾಣುವುದು ಒಬ್ಬ ಕವಿಗಿಂತ ಹೆಚ್ಚಾಗಿ ಟೀಕಾಕಾರನನ್ನು ಅನ್ನಿಸುತ್ತದೆ.

ಅನುಕಂಪನ (ಸಿ. ಎನ್. ಸುನಂದನ)

ಆಧುನಿಕ ಜೀವನದ ಬಗೆಗಿನ ಅಸಮಾಧಾನ–ಈ ಸಂಕಲನದ ಕೇಂದ್ರಪ್ರಜ್ಞೆ. ಸಾಂಪ್ರದಾಯಿಕ ಪರಿಸರದಲ್ಲಿ ಬೆಳೆದ ಮನಸ್ಸು ಆಧುನಿಕ ಬದುಕಿಗೆ ಪ್ರತಿಕ್ರಿಯಿಸ ಬಹುದಾದ ರೀತಿಯನ್ನು ಇಲ್ಲಿನ ಕವನಗಳಲ್ಲಿ ನಾವು ಕಾಣಬಹುದಾಗಿದೆ. ಇಂಥ ಕವನಗಳಿಗಿಂತ ಭಿನ್ನವಾದ ಹೊಸತನ, ಕಣ್ಣುಗಳು–ಮೊದಲಾದ ಕವನಗಳಲ್ಲಿ ಸುನಂದನ ಅವರು ಹೆಚ್ಚು ಯಶಸ್ವಿಯಾಗುತ್ತಾರೆನಿಸುತ್ತದೆ. ಮಹತ್ವದ್ದನ್ನು ಹೇಳಲು ಹೋಗಿ ಅತ್ಯಂತ ತೆಳುವಾದ ಅನುಭವ ನೀಡುವ ರಚನೆಗಳಿಗಿಂತ, ಒಂದು ಸಣ್ಣ ಸಂಗತಿಯನ್ನು ಯಾವ ತೀರ್ಮಾನವನ್ನೂ ಕೊಡದೆ ಅನುಭವವಾಗಿಯೇ ಮುಂದಿಡುವ ಇಂಥ ರಚನೆಗಳು ಉತ್ತಮವೆನಿಸುತ್ತವೆ.

ಅನುಭವದ ಬಲವಿಲ್ಲದೆಯೆ
ಅಭಿನಯದ ಛಲವೇಕೆ ?

(ಏನ ಬರೆಯಲಿ ನಾನು)

ಎಂಬ ಕವಿಯ ಮಾತುಗಳು ವಿನಯದ ಮಾತುಗಳಾಗದೆ ಎಚ್ಚರಿಕೆಯ ಮಾತುಗಳೂ ಆಗುವುದಾದರೆ ಒಳ್ಳೆಯದು.

ಇದ್ದು ಹೋದವರು (ಬಿ. ರಾ. ಕೃಷ್ಣಮೂರ್ತಿ)

ಇಲ್ಲಿನ ಕೆಲವು ಪದ್ಯಗಳು 'ರತ್ನನ ಪದಗಳ' ಮಾದರಿಯಲ್ಲಿ ಬರೆಯಲ್ಪಟ್ಟಿವೆ. ಮತ್ತೆ ಕೆಲವು ಶಿಷ್ಟಭಾಷೆಯಲ್ಲಿವೆ. ಕೀರ್ತನೆಗಳ ಧಾಟಿಯ ರಚನೆಗಳೂ ಇವೆ. ಹಿಂದೂ ಮುಸ್ಲಿಂ ಭಾವೈಕ್ಯ, ಗಾಂಧೀ ಸ್ಮರಣೆ, ಇಂದಿನ ಬದುಕಿನ ದುಸ್ಥಿತಿ, ಜೀವನ ನಾಟಕವೆಂಬ ತತ್ವ—ಹೀಗೆ ವಸ್ತುವಿನಲ್ಲೂ ವೈವಿಧ್ಯವಿದೆ. ಎಲ್ಲವೂ ಇದೆ, ಆದರೆ ಕಾವ್ಯ ಎಲ್ಲಿದೆ ?

ಬರಗೂರು ರಾಮಚಂದ್ರಪ್ಪನವರು ಗುರ್ತಿಸಿರುವಂತೆ 'ಗೋಳು'—ಎಂಬ ಪುಟ್ಟಕವನ ಇದ್ದುದರಲ್ಲಿ ಉತ್ತಮವಾಗಿದೆ.

ಬಯಕೆ ತಂಗಾಳಿ (ನಾಗೇಂದ್ರ ಲಾಡ)

ಧಾರ್ಮಿಕ ಪರಿಸರದಲ್ಲಿ ಬೆಳೆದ ಮನಸ್ಸು—ಇಲ್ಲಿನ ಕವನಗಳ ಕೇಂದ್ರದಲ್ಲಿದೆ. ತಾನು ಮೆಚ್ಚಿದ ಪರಿಸರ, ಹಾಗೂ ವ್ಯಕ್ತಿಗಳನ್ನು ಕುರಿತ ಭಾವುಕ ಪ್ರತಿಕ್ರಿಯೆ ಕವನಗಳಾಗಿವೆ. ಹೀಗಾಗಿ ಇವು ಸ್ತುತಿಗೀತೆಗಳ ಜಾಡು ಹಿಡಿದಿವೆ.

ಈ ತರುಣಕವಿಗೆ ಹೆಣ್ಣನ್ನು ಕುರಿತ ತಾರುಣ್ಯಸಹಜವಾದ ಆಸಕ್ತಿಯಿದೆ. ಆದರೆ ಆ ಆಸಕ್ತಿ ಕಾವ್ಯವಾಗುವಾಗ 'ಶಿವನೊಲುಮೆ'ಯ ಜಾಡು ಹಿಡಿಯುವುದ ರಿಂದ ತಾರುಣ್ಯಸಹಜ ಭಾವನೆಗಳು ಹುಸಿವೇಷ ತೊಡುತ್ತವೆ. 'ಫಲಿಸಿದ ಬಯಕೆ' ಎಂಬ ಕವನದಲ್ಲಿ ಮಾತ್ರ ನಾಗೇಂದ್ರರು ತಮಗೆ ತಾವು ನಿಜವಾಗು ತ್ತಾರೆ. ಅದಕ್ಕೆ ಅವರು ಕಾರಣರಲ್ಲ, ಹಿರಿಯ ಕವಿಯೊಬ್ಬರ ಅನುಕರಣೆಯಿಂದಾಗಿ ಈ ಪದ್ಯ ಅವರ ಪ್ರಯತ್ನವನ್ನೂ ಮೀರಿ ಯಶಸ್ವಿಯಾಗಿದೆ.

ಭಾವಸ್ಪಂದನ (ಸಂ: ಜೈಸಂ)

ಇಪ್ಪತ್ತು ಯುವ ಕವಿಗಳ ಕವಿತೆಗಳು ಇಲ್ಲಿ ಸಂಕಲಿತವಾಗಿವೆ. ಉದಯೋನ್ಮುಖ ಬರಹಗಾರರನ್ನು ಪ್ರೋತ್ಸಾಹಿಸಲೆಂದೇ ಹೊರತಂದಿರುವ ಸಂಕಲನ. ಇಲ್ಲಿನ ಬಹುಪಾಲು ಕವಿತೆಗಳು ಸಿದ್ಧಶೈಲಿಯ ರಚನೆಗಳು. ಕೆಲವು ಕವಿತೆಗಳಲ್ಲಿ ಬಂಡಾಯದ ಧ್ವನಿಯಿದೆ. ಈ ಧ್ವನಿ ಕೂಡ ಈಗಾಗಲೇ ಪರಿಚಿತವಾಗಿರುವ ಧ್ವನಿಯ ಅನುಕರಣೆ ಯಾಗಿದೆ. ಪ್ರಾರಂಭದ ಹಂತದಲ್ಲಿ ಇದು ಸಹಜವೂ ಇರಬಹುದು. ವಿಜಯಶ್ರೀ, ಮೋಹನ ವೆರ್ಣೇಕರ—ಇವರ ಕವನಗಳು ಸಂಕಲನದಲ್ಲಿ ಗಮನ ಸೆಳೆಯುತ್ತವೆ.

ಹೂವಿನಂಥಾ ಹುಡುಗಿ ಹೇಳಿದ್ದು (ಮುಜಾಫ್ಫರ್ ಹುಸೇನ್ ಅಸ್ಸಾದಿ)

ಇದು ಅಸ್ಸಾದಿಯವರ ಮೊದಲ ಸಂಕಲನ. ಸಾಮಾಜಿಕ ಕಾಳಜಿ, ಅಸ್ಸಾದಿ ಯವರ ಕವನಗಳಲ್ಲಿ ದಟ್ಟವಾಗಿ ಕಾಣಿಸಿಕೊಂಡಿದೆ. ಸಮಕಾಲೀನ ಬದುಕಿನ ಬಗೆಗಿನ ವಿಷಾದದ ದನಿ ಇಲ್ಲಿನ ಲಯವನ್ನು ರೂಪಿಸಿದೆ. ಆದರೆ ಇಂಥ ಕವನಗಳಿಗಿಂತ ಮುಸ್ಲಿಂ ಪರಿಸರದ ಬಗ್ಗೆ ಕವಿ ಮಾತನಾಡುವ ಕವನಗಳಾದ ಕಪ್ಪು ಬುರ್ಕಾಗಳ ಆಲಾಪ, ಒಂದು ಪತ್ರ, ಆಹ್ವಾನ, ಟೋಪಿ—ಮೊದಲಾದ ಕವಿತೆಗಳಲ್ಲಿ ಅಸ್ಸಾದಿ ಯವರು ಹೆಚ್ಚು ಯಶಸ್ವಿಯಾಗುತ್ತಾರೆ. ಕಾವ್ಯಸೂಕ್ಷ್ಮಗಳನ್ನು ಬಲ್ಲ ಈ ತರುಣ ಮುಸ್ಲಿಂ ಕವಿಯ ಧ್ವನಿ ಕನ್ನಡದ ಸಂದರ್ಭದಲ್ಲಿ ಒಂದು ಮುಖ್ಯ ಧ್ವನಿಯಾಗಿ ರೂಪುಗೊಳ್ಳಲಿ ಎಂದು ಆಶಿಸಬಹುದು.

# ನಾಟಕ

**ಕ. ವೆಂ. ರಾಜಗೋಪಾಲ**

ಕನ್ನಡದ ಆಧುನಿಕ ನಾಟಕವನ್ನು ವಿಮರ್ಶಿಸುವಲ್ಲಿ ಎರಡು ಅಂಶಗಳನ್ನು ಗಮನಿಸಬೇಕಾದ ಅಗತ್ಯವುಂಟಾಗಿದೆ ! ಇವು ಭಾರತೀಯ ರಂಗಭೂಮಿಯ, ಅಂದರೆ ನಮ್ಮ ಸಂಸ್ಕೃತಿಯ ಪ್ರತಿ ಕೃತಿಗಳಾದರೂ ಭಾರತೀಯ ಕಾವ್ಯಮೀಮಾಂಸೆಯ ತತ್ವಗಳಿಂದಾಗಲಿ ಅರಿಸ್ಟಾಟಲನ ಖಚಿತ ಸಿದ್ಧಾಂತಗಳಿಂದಾಗಲಿ ರೂಪತಾಳಿದುವಲ್ಲ. ಇಂದಿನ ಸಾಂಸ್ಕೃತಿಕ ಸಂದರ್ಭದಲ್ಲಿ ಸಾಮಾಜಿಕ ಒತ್ತಡದಿಂದ ರೂಪತಾಳಿದಂಥವು ಇವು. ಇವುಗಳ ಮಾದರಿಗಳು ಐರೋಪ್ಯ ಸಂದರ್ಭಗಳಲ್ಲಿನ ಕೃತಿಗಳಾಗಿರ ಬಹುದಷ್ಟೆ: ಅದು ಸಾಮಾನ್ಯವಾಗಿ ಚೌಕಟ್ಟಿಗೆ ಮಾತ್ರ ಅನ್ವಯಿಸುವಂಥದು. ಆದುದರಿಂದ ಇವುಗಳ ರಂಗ ಸಾಧ್ಯತೆ ಮತ್ತು ಇಂದಿನ ಸಾಮಾಜಿಕತೆಯಲ್ಲಿ ಕಂಡು ಬರುವ ಒಪ್ಪಂದವೇ ನಿರ್ಧಾರಕವಾಗುತ್ತದೆ.

ಒಂದು ನಾಟಕದ ಅರ್ಥ ಮತ್ತು ಒಳತೋಟಿಯಿಂದ ಉಂಟಾಗುವ ಪರಿಣಾಮ ವನ್ನು ರಸಸಿದ್ಧಾಂತದಿಂದ ಅಳೆದರೆ ಏನೇನೂ ಸಾಲದಾಗುತ್ತದೆ. ಒಂದು ಕೃತಿಯು ಆನಂದವನ್ನು ಕೊಟ್ಟಿತೆಂದರೆ, ಯಾತಕ್ಕೆ ಮತ್ತು ಹೇಗೆಂದು ಕೇಳಬೇಕಾಗಿಬಂದಿದೆ. ಅಂಥ ಉತ್ತರದಲ್ಲಿ ಕೃತಿಯು ರಸಾನುಭವವನ್ನು ತಿರಸ್ಕರಿಸಿ ಬಿಡುತ್ತದೆ. ಏಕೆಂದರೆ ನಾಟಕದ ಒಟ್ಟು ಪರಿಣಾಮವು ರಸಾನುಭವಕ್ಕೂ ಮೀರಿದುದಾಗಿರುತ್ತದೆ. ಉದಾ. ಗೆ ಮಾಸ್ತಿಯವರ 'ಕಾಕನಕೋಟೆ' ಯನ್ನು ಕೊಡಬಹುದು. ಆದುದರಿಂದ ಈಗ ಒಂದು ಕೃತಿಯ ಸಾರ್ಥಕತೆಯನ್ನು ನಮ್ಮ ಬದುಕಿನಲ್ಲಿ ಮತ್ತು ಸುತ್ತ ಮುತ್ತಲಲ್ಲಿ ಇರಿಸಿ ಪರಿಶೀಲಿಸಬೇಕಾಗುತ್ತದೆ. ಇಲ್ಲಿಯೂ ಸಾಮಾಜಿಕವಾಸ್ತವತೆಯನ್ನು ಕೃತಿಯ ಅರ್ಥವಂತಿಕೆಗೆ ಸಮಾನಂತರದಲ್ಲಿರಿಸಿಯೇ ಪರಿಶೀಲಿಸಬೇಕಾಗುತ್ತದೆ. ಏಕೆಂದರೆ ಕೃತಿಯ ವ್ಯಂಗ್ಯವನ್ನು ಕವಿಯು ಉದ್ದಿಶ್ಯಪೂರ್ವಕವಾಗಿರಿಸಿರುತ್ತಾನೆ. ಇಂತಹ ಕಲಾತ್ಮಕ ರೂಢಿಯು ನಮ್ಮ ಆಧುನಿಕ ರಂಗಭೂಮಿಯಲ್ಲಿ ಸಾಮಾನ್ಯವಾಗಿ ಕಾಣ ಬಹುದಾಗಿದೆ. ಉದಾ : ಇಲ್ಲಿ 'ಅಂಜಿ' (ತೆಂಡೂಲ್ಕರ್)

ಇಲ್ಲಿ ಒಟ್ಟು 14 ಕೃತಿಗಳು ಪರಿಶೀಲನೆಗೆ ದೊರಕಿವೆ. ಇವುಗಳಲ್ಲಿ ಆಕಾಶ ನಾಟಕಗಳು (ರೇಡಿಯೋ ನಾಟಕಗಳು), ಬೀದಿ ನಾಟಕಗಳು ಮತ್ತು ರಂಗ ನಾಟಕಗಳು ಎಂದು ಗುರುತಿಸಬಹುದು. ರಂಗನಾಟಕಗಳಲ್ಲಿಯೂ ಏಕಾಂಕಗಳು

ಮತ್ತು ದೊಡ್ಡ ನಾಟಕಗಳಿರಬಹುದು. ಅಲ್ಲದೆ ಅನುವಾದಗಳೂ ರೂಪಾಂತರಗಳೂ ಸೇರಿಕೊಳ್ಳುತ್ತವೆ. ಇಷ್ಟನ್ನೂ ಪರಿಶೀಲನೆಯ ಅನುಕೂಲಕ್ಕಾಗಿ ಮಾತ್ರ ಗುರುತಿಸಲಾಗಿದೆ.

ಮೊದಲಿಗೆ ಆಕಾಶ ನಾಟಕಗಳು: ಕೃಷ್ಣಮೂರ್ತಿ ಪುರಾಣಿಕರ 'ವಾಸವದತ್ತೆ' ಎಂಬ ಗ್ರಂಥದಲ್ಲಿ ಆಯ್ದು ಸರಳ ರಗಳೆಯ ರಚನೆಗಳನ್ನು ತೆಗೆದುಕೊಂಡರೆ ಇವು ಗಳಲ್ಲಿ ಮಾತುಗಾರಿಕೆಯು ಮುಖ್ಯವಾಗಿ ಕಂಡುಬರುತ್ತದೆ. ಅಲ್ಲದೆ ಇಲ್ಲಿಯ ವಿಷಯವು ಪ್ರೇಮ ಮತ್ತು ದಾಂಪತ್ಯವನ್ನು ಕುರಿತವಾಗಿ ವಿಶೇಷವಾದುದೇನೂ ಇರುವು ದಿಲ್ಲ. ಕೇಳುವುದಕ್ಕೆ ಮಡಿವಂತ ಹಿತವನ್ನು ಒದಗಿಸುತ್ತವೆ. ಇವು ಗೀತನಾಟಕಗಳಲ್ಲ. ಆದುದರಿಂದ ರಂಗ ಪ್ರಯೋಗಕ್ಕೆ ಬೇಕಾಗುವುದಿಲ್ಲ.

'ವಾಸವದತ್ತೆ' ಯಂತೆ ಪ್ರಭುಶಂಕರರ 'ಗಾಳಿ ಎಂಬ ಕುದುರೆಏರಿ' –ಮೂರು ದೃಶ್ಯಗಳಲ್ಲಿ ಒಂದು ಗದ್ಯ ನಾಟಕ. ಬುದ್ಧನ ಬದುಕಿಗೆ ಸಂಬಂಧಿಸಿದ್ದು. ದಾಂಪತ್ಯ ಧರ್ಮ–ಇಲ್ಲಿಯ ವಿಷಯವಾಗಿದೆ. ಕೊನೆಗೆ ಸಿದ್ಧಾರ್ಥನು ಮುಪ್ಪು, ನೋವು, ಸಾವುಗಳಾಚೆ ಏನಿದೆಯೋ ಅದೇ ಸತ್ಯ–ಎಂಬ ಒಂದು ಮಾತನ್ನು ಹೇಳಿ ಹೋಗುವುದಕ್ಕಾಗಿ ಈ ಕೃತಿ ರಚಿತವಾದಂತಿದೆ. ಉದ್ದಕ್ಕೂ ಮಾತು ಸುಂದರವಾಗಿ ಬೆಳೆಯುತ್ತದೆ. ನಾಟಕವೂ ಘರ್ಷಣೆಯಿಲ್ಲದೆ ಸರಳವಾಗಿ ಮುಗಿಯುತ್ತದೆ. ಇಂತಹ ಕೃತಿಗಳು ಕನ್ನಡದಲ್ಲಿ ಹೇರಳವಾಗಿವೆ. ಮಾಸ್ತಿಯವರ ಯಶೋಧರ-ನಾಟಕದ ಮುಂದೆ ಇವುಗಳೆಲ್ಲಾ ಸಪ್ಪೆಯಾಗುತ್ತವೆ.

ಎರಡನೆಯದಾಗಿ, ಬೀದಿ ನಾಟಕಗಳು ಇಂದಿಗೂ ಜೀವಂತವಾಗಿವೆ. ಹಾಗೆ ಜೀವವಿರುವ ಇಲ್ಲಿಯ ಎರಡು ಸಂಗ್ರಹಗಳಲ್ಲಿ. 1. 'ಕೋತಿಕತೆ ಮತ್ತು ಅಪ್ಪಾಲೆ ತಿಪ್ಪಾಲೆ' 2. 'ಜನಮರುಳೋ' ಮೊದಲ ಎರಡು ಕೃತಿಗಳನ್ನು ಬಿ. ಸುರೇಶ್ ಮತ್ತು ಎರಡನೆಯದನ್ನು ಸುಪ್ರಸಿದ್ಧ ಎ. ಎಸ್. ಮೂರ್ತಿಯವರು ರಚಿಸಿದ್ದಾರೆ. ಆದರೆ ಕೋತಿ ಕತೆ ರೂಪಕವು ಮೊದಲಿಗೆ ಬೆಸಗರಹಳ್ಳಿ ರಾಮಣ್ಣನವರ ಪ್ರಜಾಪ್ರಭುತ್ವ ಮತ್ತು ಮೂರು ಕೋತಿಗಳು-ಎಂಬ ಸಣ್ಣ ಕತೆಯಿಂದ ರೂಪಾಂತರಗೊಂಡಿದೆ. ಇದನ್ನು ಮೊದಲು ರೂಪಿಸಿ ಪ್ರದರ್ಶಿದವರು ನಿರ್ದೇಶಕ ಬಾದರದಿನ್ನಿಯವರು. ಸುರೇಶ್ ಈ ಕಾರ್ಯದಲ್ಲಿ ನೆರವಾದವರು ಮಾತ್ರ. ನಂತರ ಅದನ್ನು ಬಿ. ಸುರೇಶ್ ಅವರೇ ನಿರ್ದೇಶಿಸಿ ರಂಗಭೂಮಿಯಲ್ಲಿ ಪ್ರದರ್ಶಿಸಿದ್ದಾರೆ. ಜೊತೆಗೆ ಅವರದೇ ಆದ 'ಅಪ್ಪಾಲೆ- ತಿಪ್ಪಾಲೆ' ಕೂಡ ಸೇರಿ ಈ ತರುಣರ ಬೆಳವಣಿಗೆಯನ್ನು ಸೂಚಿಸುತ್ತದೆ. ನಮ್ಮ ತರುಣರ ನಿರುದ್ಯೋಗದ ವಿಷಯವನ್ನು ವಿಡಂಬನೆಗೊಳಿಸುವಲ್ಲಿ ಈ 'ಅಪ್ಪಾಲೆ-ತಿಪ್ಪಾಲೆ' ಕೃತಿಯು ಸಾರ್ಥಕವಾಗುತ್ತದೆ ಎನ್ನಬಹುದು. ಆದರೆ ಕೋತಿ ಕತೆಯ ಕಲಾತ್ಮಕ ವ್ಯಂಗ್ಯ ಸಾಮರ್ಥ್ಯ ಮಾತ್ರ ಇದರಲ್ಲಿ ಮೊಟಕಾಗಿದೆ. ಈ ಕೋತಿ ಕತೆಯು ಬೀದಿ ನಾಟಕಗಳಲ್ಲಿ ತುಂಬ ಕಲಾತ್ಮಕವಾದ ಒಂದು ಪ್ರದರ್ಶನವೂ ಆಗಿರುವುದಲ್ಲದೆ 'ಬೆಲ್ಚಿ'ಯಂತೆ (ನಿರ್ದೇಶನ : ಸಿ. ಜಿ. ಕೃಷ್ಣ ಸ್ವಾಮಿ ) ರಂಗ

ಭೂಮಿಯಲ್ಲೂ ಪರಿಣಾಮಕಾರಿಯಾಗ ಬಲ್ಲಂಥದು. ಇದು ಬಿ. ಸುರೇಶ್ ಅವರ ನಿರ್ದೇಶನದಲ್ಲಿ ರಂಗಭೂಮಿಯ ಮೇಲೂ ಬಂದಿದೆ.

'ಜನಮರುಳೋ',ಬೀದಿ ನಾಟಕವನ್ನು ಸುಪ್ರಸಿದ್ಧ ನಾಟಕಕಾರರಾದ ಎ. ಎಸ್. ಮೂರ್ತಿಯವರು ರಚಿಸಿ, ಸುಧೀಂದ್ರ ಶರ್ಮಾ ದಂಪತಿಗಳು ನಿರ್ದೇಶಿಸಿದ್ದಾರೆ. ಇದರಲ್ಲಿರುವ ವಿಡಂಬನೆಯು ವಸ್ತುನಿಷ್ಠವಾದುದು ಮತ್ತು ಮಾಸ್ತಿಯವರ 'ನವರಾತ್ರಿ' ಕಥೆಗಳಲ್ಲಿ ಒಂದಾದ 'ಒಂದು ಸಮಾಧಿಯ ಕತೆ'ಯನ್ನು ಹೋಲುತ್ತದೆ. ಇದನ್ನು ನಾಟಕಕಾರರು ಎಲ್ಲಿಯೂ ಹೇಳದಿರುವುದರಿಂದ ಆಶ್ಚರ್ಯವಾಗುತ್ತದೆ. ಆದರೂ ಇದೊಂದು ನಮ್ಮ ಸಾಂಸ್ಕೃತಿಕ ವಿಡಂಬನೆಗೆ ಸೇರುವ ಒಂದು ಮಹತ್ವದ ಕೃತಿಯಾಗಿದೆ. ಗಾಂಪರ ಕಥೆಗಳಂತೆಯೇ ನಮ್ಮ ದೇಶದ 'ಮಠ'ವೆಂಬ ಧಾರ್ಮಿಕ ಸಂಸ್ಥೆಯನ್ನು ವಿಡಂಬಿಸುವ ಒಂದು (ಹೊರಗಿನ) ಕತೆಯೂ ಆಗಿದೆ. ಒಟ್ಟಿನಲ್ಲಿ ಕೋತಿಕತೆಯಂತೆ ಮುಖ್ಯವಾದ ರಚನೆಯಾಗಿದೆ.

ಉಳಿದ ಅಯ್ದು ದೊಡ್ಡ ನಾಟಕಗಳು ಕನ್ನಡದ ಮೂಲ ಕೃತಿಗಳಾಗಿವೆ— 1. ಸನ್ನಿವೇಶ (ಬಿ. ವಿ. ವೈಕುಂಠರಾಜು), 2. ದೊಡ್ಡಪ್ಪ (ಗೋಪಾಲ ವಾಜಪೇಯಿ) 3. ಹರಕೆಯ ಕುರಿ (ಚಂದ್ರಶೇಖರ ಕಂಬಾರ), 4. ಅಗ್ನಿರಾಜ (ಚೆನ್ನಣ್ಣ ವಾಲಿಕಾರ) ಮತ್ತು 5. ಜೈ ಪದ್ಮಾವತಿ ಅಥವಾ ಪುಣ್ಯಪುರುಷ (ಜಿ. ಟಿ. ಸ್ವಾಮಿ)—ಇವುಗಳಲ್ಲಿ ಕೊನೆಯ ಎರಡೂ ನಾಟಕಗಳು ಪ್ರಯೋಗವನ್ನು ಕಂಡಿಲ್ಲ.

'ಸನ್ನಿವೇಶ' ವು ಉಳಿದ ಕನ್ನಡ ನಾಟಕಗಳಂತೆ ಆಗಿರದೆ ಒಂದು ಉದ್ವಿಗ್ನಕಾರಿ ಕೃತಿಯಾಗಿದೆ. ವೇಶ್ಯಾವಾಟಿಗಳು ಇಂದಿಗೂ ಜೀವಂತವಾಗಿರುವುದನ್ನೂ ಪ್ರಜಾಪ್ರಭುತ್ವ ಮತ್ತು ನಾಗರಿಕತೆಯಿಂದಾಗಿ ಪ್ರಜ್ಞಾವಂತರು ಸ್ತ್ರೀ-ಪುರುಷ ಸಮಾನತೆಯನ್ನು ಪ್ರಜಾಪ್ರಭುತ್ವದ ಒಂದು ಮೌಲ್ಯವಾಗಿ ಪರಿಗಣಿಸುತ್ತಿದ್ದಾರೆಯಷ್ಟೆ. ಇದರ ಫಲವಾಗಿ ಒಬ್ಬ ಕಲಿತವನ ಪರೀಕ್ಷೆಯೆನ್ನುವಂತೆ ಈ ನಾಟಕವು ಪರಿಣಾಮಕಾರಿಯಾಗಿದೆ. ಇಲ್ಲಿಯ ನಾಯಕನು ಇಂದಿನ ವೇಶ್ಯಾ ಸಮಸ್ಯೆಗೂ ಪರಿಹಾರವನ್ನು ಕಾಣಲಾರದೆ ತನ್ನ ದೌರ್ಬಲ್ಯವನ್ನೇ ತೋರಿಸಿಕೊಳ್ಳುವುದರಲ್ಲಿ ನಾಟಕದ ಪ್ರತಿಕ್ರಿಯೆಯು ಒಡಮೂಡುತ್ತದೆ. ಹಾಗಾಗದೆ ಈ ನಾಯಕನು ಸಮರ್ಥನಾಗಿಯೂ ಪರಿಹಾರವನ್ನು ಕಾಣದಾಗಿದ್ದರೆ ಇದೊಂದು ಮಾಮೂಲು, ಸರಳೀಕೃತವಾಗುತ್ತಿತ್ತು ಮತ್ತು ಅದಕ್ಕೆ ನಾಟಕ ರಚನೆಯೂ ವ್ಯರ್ಥವಾಗುತ್ತಿತ್ತು. ಬದಲು ನಾಯಕಿಯು ಹಾಕುವ ಸವಾಲಿನಲ್ಲಿ ಗಂಭೀರತೆಯಿದೆ—ಇದನ್ನು ಚೆನ್ನಾಗಿ ಅರಿತು ನಿರ್ದೇಶಿಸಿದವರು ಸಿ. ಜಿ. ಕೃಷ್ಣಸ್ವಾಮಿ. ಕನ್ನಡ ರಂಗಭೂಮಿಗೆ ಇದೊಂದು ವಿಶೇಷ ಬಗೆಯ ಕೃತಿಯೆಂಬುದರಲ್ಲಿ ಅನುಮಾನವಿಲ್ಲ.

ಗೋಪಾಲ ವಾಜಪೇಯಿಯವರ 'ದೊಡ್ಡಪ್ಪ'-ಒಂದು ಪ್ರಗತಿ ಶೀಲ ಧೋರಣೆಯನ್ನು ಒಳಗೊಂಡ ಕೃತಿಯಾಗಿದೆ. ನಮ್ಮ ಹಳ್ಳಿಯ ಜನಜೀವನದ ಅಮಾಯಕ

ಮೌಢ್ಯವನ್ನು ಬೆಳಕಿಗೊಡ್ಡುವುದಕ್ಕಾಗಿಯೇ ರಚಿತವಾದಂತಿದೆ. ಒಬ್ಬ ಹಳ್ಳಿಯ ಮುದುಕ (ಸಂಪ್ರದಾಯಸ್ಥ) ಮತ್ತು ಒಬ್ಬ ವಿದ್ಯಾವಂತ ಯುವಕ (ಸುಧಾರಕ) ಇವರ ನಡುವಿನ ನಾಟಕೀಯ ವ್ಯವಹಾರವು ಇಲ್ಲಿ ಮುಖ್ಯ ವಸ್ತುವಾದರೂ ನಾಯಕನ ಛಲಕ್ಕೆ ಇಲ್ಲಿ ಸೋಲಾಗುತ್ತದೆ. ದೃಷ್ಟಾಂತದಂತೆ ಒಡಮೂಡುವ ಕಥಾನಕದಲ್ಲಿ ಅಂತಹ ಹೇಯವಾದುದೇನೂ ಇರದೆ ಕೇವಲ ಆತನ ಭಕ್ತಜನತೆಯಲ್ಲಿ ಪರಂಪರಾಗತವಾಗಿ ಬಂದಿರುವ ಕೆಟ್ಟ ಆಚಾರಗಳನ್ನು ಮಾತ್ರ ವಿರೋಧಿಸಬೇಕಾಗಿ ಬರುವ ಸ್ಥಿತಿಯಲ್ಲಿ ನಾಟಕದ ದೌರ್ಬಲ್ಯವಿರುವಂತಿದೆ. ಇಲ್ಲಿ ನಾಟಕಕಾರರು ಭೂತ ಮತ್ತು ವರ್ತಮಾನಗಳೆರಡನ್ನೂ ಒಂದೇ ಹಂತದಲ್ಲಿ ರೂಪಕಗೊಳಿಸಿದ್ದಾರೆ. ಇದರಿಂದ ಸುಧಾರಣೆಯ ವಿಷಯವು ದುರ್ಬಲವಾದ ಪ್ರದರ್ಶನವಾಗುತ್ತದೆ. ಇಲ್ಲಿ ಉದ್ದೇಶವು ಸಾಧುವಾದರೂ ಕಲಾವಂತಿಕೆಯು ಸೋಲುತ್ತದೆ. ಇದನ್ನು ನಮ್ಮ ಸುಧಾರಣೆಯ ದುರಂತವೆಂದೂ ಹೇಳಲಾಗುವುದಿಲ್ಲ...ಆದುದರಿಂದ ಇದನ್ನು ಶ್ರೇಷ್ಠ ಕೃತಿಯೆಂದು ಹೇಳಲಾಗುವುದಿಲ್ಲ. ಇದು ಪ್ರಯೋಗಕ್ಕೆ ಮಾತ್ರ ಜಾನಪದ ಸತ್ವದಿಂದ ಅನುಕೂಲವಾದ ಕೃತಿಯಾಗಿದೆ. ಇದು ಅರ್ಥವಂತಿಕೆಯಿಂದ ದುರ್ಬಲ ವಾಗಿರುವುದೆ, ಮುಖ್ಯ ಆಕ್ಷೇಪಣೆಯೂ ಆಗಿದೆ.

ಚಂದ್ರಶೇಖರ ಕಂಬಾರರ 'ಹರಕೆಯ ಕುರಿ' ಅವರ ಈವರೆಗಿನ ನಾಟಕ ಗಳನ್ನೆಲ್ಲಾ ಹಿಂದಿಕ್ಕಿದ ಕೃತಿಯಾಗಿದೆ. ಅಲ್ಲದೆ ಲಂಕೇಶರ 'ಸಂಕ್ರಾಂತಿ'ಯ ನಂತರ ತುಂಬ ಅರ್ಥಪೂರ್ಣವಾದ ರಚನೆಯಾಗಿದೆ ಎನ್ನಬಹುದು. ಲಂಕೇಶರ 'ಕ್ರಾಂತಿ ಬಂತು ಕ್ರಾಂತಿ'ಯ ನೆನಪು ತರುವುದಾದರೂ ಇಂದಿನ ಬದುಕನ್ನು ರಾಜಕೀಯದ ಬೆಳಕಿನಲ್ಲಿ ವಿಶ್ಲೇಷಿಸುವ ಕೃತಿಯೂ ಆಗಿದೆ. ಮಧ್ಯಮ ವರ್ಗಕ್ಕೆ ಸೇರಿದ ಇದರ ನಾಯಕ ಸಿದ್ದಲಿಂಗು, ಒಬ್ಬ ದುರಂತ ಪಾತ್ರವಾಗುತ್ತಾನೆ. ಈತನು ಯಾವುದೇ 'ವಾದ'ಕ್ಕೆ ಬದ್ಧನಾದವನಲ್ಲ. ಆದರೆ ಇಂದಿನ ರಾಜಕೀಯವು ಇವನನ್ನು ಒಂದು ಸಾಧನವನ್ನಾಗಿ ಬಳಸಿಕೊಂಡುದಲ್ಲದೆ ಗುಂಡಿಕ್ಕಿಕೊಂದುಬಿಡುತ್ತದೆ. ಈತನಲ್ಲಿ ವಾಸ್ತವವಾಗಿ ಕ್ರಾಂತಿಕಾರಿಯ ಹಿರಿಮೆಯಿದ್ದು ನಮ್ಮ ಗೌರವಕ್ಕೆ ಪಾತ್ರನಾಗುತ್ತಾನೆ. ಇಂಥವನು ಸುಲಭವಾಗಿ ಬಲಿಯಾಗುವುದರಿಂದ 'ಹರಕೆಯ ಕುರಿ'ಯೂ ಸಂದರ್ಭ ವನ್ನು ಎದುರಿಸುವಲ್ಲಿ ಹುತಾತ್ಮನೂ ಆಗುತ್ತಾನೆ. ಭಗತ್‌ಸಿಂಗ್ ಮೊದಲಾದವರನ್ನು ಬ್ರಿಟಿಷರು ಬೇಟೆಯಾಡಿದಂತೆ ಇಂದಿನ ದುಷ್ಟ ರಾಜಕೀಯವು ಈತನನ್ನು ಬೇಟೆ ಯಾಡುತ್ತದೆ. ಆದುದರಿಂದ ನಮ್ಮ ಉಸಿರು ಸಿಕ್ಕಿಸಬಲ್ಲ ನಮ್ಮ ಪ್ರಜಾಪ್ರಭುತ್ವದ ಲಕ್ಷಣಗಳನ್ನೆಲ್ಲಾ ಕುರಿತು ಪುನರ್ವಿಮರ್ಶೆಗೆ ತೊಡಗುವಂತೆ ಮಾಡಬಲ್ಲ ಶಕ್ತಿ—ಅರ್ಥವಂತಿಕೆ ಈ ನಾಟಕಕ್ಕಿದೆ. ಕಂಬಾರರು ಇಂಥ ಒಳಪದರಗಳನ್ನು ಬಿಡಿಸುವಲ್ಲಿ ವಿಶೇಷ ಜಾಣ್ಮೆಯನ್ನು ತೋರಿದ್ದಾರೆ ಮತ್ತು ನಮ್ಮ ನಾಟಕಕಾರರಲ್ಲಿ ಮೊದಲ ಹೆಸರಾಗಿಯೂ ಉಳಿದಿದ್ದಾರೆ ಎನ್ನಬಹುದು.

ಉಳಿದರೆಡು ನಾಟಕಗಳಲ್ಲಿ ಚೆನ್ನಣ್ಣವಾಲಿಕಾರರ 'ಅಗ್ನಿರಾಜ' ಒಂದು:- ನಮ್ಮ ದೇಶದಲ್ಲಿ ತುರ್ತು ಪರಿಸ್ಥಿತಿಯ ಕತ್ತಲು, ಅನೀತಿಯುಂತವಾದುದೆಂದು ಸಮರ್ಥಿಸುವಂತೆ ಈ ನಾಟಕ ರಚಿತವಾಗಿದೆ. ಕನ್ನಡದ 'ವಡ್ಡಾರಾಧನೆ'ಯಲ್ಲಿ ಬರುವ ಕಾರ್ತಿಕರಿಸಿಯ ಕಥೆಯನ್ನು ಆಧರಿಸಿ ಅದರ ದುಷ್ಟರಾಜನ ಆಳ್ವಿಕೆಯನ್ನು ಹೀಯಾಳಿಸುವಂತೆ ಇಲ್ಲಿಯ ಕಥಾನಕವು ಬೆಳೆದು ಕೊನೆಗೂ ಅದೇ ಗೆಲುವನ್ನು ಸಾಧಿಸಿತೆನ್ನುವಂತೆ ನಾಟಕವು ಮುಗಿಯುತ್ತದೆ. ಮೂಲಕಥೆಯಲ್ಲಿ ಕಾರ್ತಿಕನು ವೈರಾಗ್ಯತಾಳಿ 'ರುಸಿ'ಯಾಗುವುದರಲ್ಲಿ ಪರಮ ಪುರುಷಾರ್ಥವಿರುವುದನ್ನು ಸಮರ್ಥಿಸಲಾಗಿದೆಯಷ್ಟೆ. ಆದರೆ ಈ ನಾಟಕವು ಅಂಥ ಗುರಿಯನ್ನು ಸೂಚಿಸುವುದೂ ಇಲ್ಲ- ಒಂದು ರೀತಿಯಲ್ಲಿ ದೇಶದ ತುರ್ತು ಪರಿಸ್ಥಿತಿಯೂ ಪರಿಹಾರವಾದ ಮೇಲೆ ಅದರ ನೆನಪನ್ನು ಮಾತ್ರ ತರುವಲ್ಲಿ, ಅದೂ ಬುದ್ಧಿ ಜೀವಿಗಳಿಗೆ ನೆನಪು ಮಾಡುವಲ್ಲಿ ಇದು ಯಶಸ್ವಿಯಾಗುವಂತೆ ತೋರುತ್ತದೆ. ಇದರ ಕಥಾನಕವು ಸುಮಾರು ಅರ್ಧದ ನಂತರ ಸಡಿಲವಾಗಿರುವುದರಿಂದ ಪ್ರಯೋಗ ಕೂಡ ಸಮರ್ಥನೀಯವಾಗಲಾರದು.

ಜಿ. ಟಿ. ಸ್ವಾಮಿಯವರ 'ಜೈ ಪದ್ಮಾವತಿ ಮಾತಾ ಅಥವಾ ಪುಣ್ಯ ಪುರುಷ'- ನಾಟಕವು ಇಂದಿನ ಕಂಪನಿ ನಾಟಕಗಳ ದೌರ್ಬಲ್ಯಗಳನ್ನೆಲ್ಲಾ ಒಳಗೊಂಡ ಕೃತಿಯಾಗಿದೆ. ಇಲ್ಲಿಯ ಪಾತ್ರಗಳು, ಬರಿಯ ಆದರ್ಶವನ್ನು ಒತ್ತಿ ಒತ್ತಿ ಹೇಳುವಂತೆ ತೊಡಗುತ್ತಾ ಯಾವುದೇ ಸಂದರ್ಭವಾಗಲಿ ಗಟ್ಟಿಯಾದ ಅನುಭವವಾಗದೇ ಹೋಗುತ್ತದೆ, ಇದಕ್ಕೆ ಒಂದು ಸಂದರ್ಭವನ್ನೇ ಉದಾಹರಿಸುವುದು ಒಳ್ಳೆಯದು- ಪುಟ 129ರಲ್ಲಿ

ರತಿ — ಅಲ್ಲ, ಎಲ್ಲಿದ್ರಿ ಎಲ್ಲಿಂದ ಬಂದ್ರಿ ?

ಪಂಡಿತ — ಏನಪಾ ಧರ್ಮ ? ಏನೇನ ವಿಶೇಷ ? ಹೇಳಪಾ

ಧರ್ಮ — ಹೇಳೋದು ಬಾಳಾ ಐತ್ರಿ ಪಂಡಿತರೇ...

ಪಂಡಿತ — ಹೇಳು ಮತ್ತೆ...

ನರ್ತಕಿ — ಆ ಗಂಟುಗಳ ಕೆಳಗಿಡ್ರಿ, ಕೇಳ್ರಿ, ಕಿವಿಗೊಟ್ಟು ಕೇಳ್ರಿ, ಮನಗೊಟ್ಟು ಕೇಳ್ರಿ, ಉತ್ತಮರ ಕಥೆ-ಪುಣ್ಯ ಕಥೆ.

ರತಿ — ಮೂಗಿಗಿಂತ ಮೂಗ್ತಿ ಭಾರುತ, ಹೇಳೋದನ್ನ ಹೇಳವಲ್ಲ...

ಧರ್ಮ — ಕಂಡ ಕಂಡವರಿಗೆಲ್ಲಾ, ಕಂಡು ಕಂಡಲ್ಲೆ, ಕೂಗಿ ಕೂಗಿ, ಕುಣಿದು ಕುಣಿದು ಹೇಳಬೇಕನಸ್ತದ...

ಪಂಡಿತ — ನೀ ಹೇಳಿದಂಗಾತು... (ಹೋಗಹತ್ತುವನು)

ಧರ್ಮ — ಹೇಳ್ತಿನಿ- ನಿಲ್ರಿ, ನಾವು ಜಿನದತ್ತ ಮಾರಾಜರನ್ನ ಹಿಡಿದು ತರಾಕ ಅಂತ ಹೋದ್ವೆಲ್ಲಾ...

ಪಂಡಿತ — ಹೋದ್ರಿ...

ಧರ್ಮಿ — ಹೋದವ್ರು ಅಲ್ಲೇ, ಆತನ ಸೇವೆಗೇ ನಿಂತ ಬಿಟ್ನೆ.

ಪಂಡಿತ — ಸಿಕ್ಕನಾ, ಎಲ್ಲಿದ್ದಾನೆ ಪುಣ್ಯಾತ್ಮ ?

ಧರ್ಮಿ — ಸ್ವರ್ಗ ಲೋಕದಾಗದಾನ.

ಹೀಗೆ ಉದ್ದಕ್ಕೆ ಬೆಳೆಯಂತ್ತಾ ಹೋಗುವುದೇ ಇಲ್ಲಿಯ ವೈಖರಿ! ಬಹುಶಃ ಜೈನ ಧರ್ಮಿಗಳು ಮಾತ್ರ ತಮ್ಮ ಭಕ್ತಿಯಿಂದ ಬದ್ಧರಾಗಿ ಗಮನಿಸಬಹುದಷ್ಟೇ – ಈ ಕೃತಿಯ ಲಾಭ.

ಇನ್ನು ರಂಗ ನಾಟಕಗಳಲ್ಲಿ ಅಯ್ದು ದೊಡ್ಡ ನಾಟಕಗಳಿವೆ. ಇವು ಇಂಗ್ಲಿಷ್. ಮತ್ತು ಮರಾಠಿಯಿಂದ ಬಂದ ಅನುವಾದಗಳು. ಮತ್ತೈದು ಸ್ವತಂತ್ರ ನಾಟಕಗಳೂ ಇವೆ. ಮರಾಠಿಯಿಂದ ಕನ್ನಡ ರಂಗಭೂಮಿಗೆ ಚೆನ್ನಾಗಿ ಪರಿಚಿತರಾದ ವಿಜಯ ತೆಂಡೂಲ್ಕರ್ ಅವರ 'ಮಾಡುಸಿಕ್ಕದಲ್ಲಾ', (ಅನು :ಹೇಮಾ) ಮತ್ತು 'ಅಂಜಿ' (ಅನು : ಸಿದ್ಧಲಿಂಗ ಪಟ್ಟಣಶೆಟ್ಟಿ) ಇವೆರಡರಲ್ಲೂ ಅನುವಾದವು ಅಚ್ಚುಕಟ್ಟಾಗಿದೆ ಮತ್ತು ಇವೆರಡೂ ರಂಗಪ್ರಯೋಗಕ್ಕಾಗಿಯೇ ರಚಿತವಾಗಿವೆ. 'ಮಾಡುಸಿಕ್ಕದಲ್ಲಾ' ಪ್ರಯೋಗವನ್ನು ಆರ್. ನಾಗೇಶ ಸಾಧಿಸಿದ್ದಾರೆ. ಆದರೆ 'ಅಂಜಿ' ಇನ್ನೂ ಕಾಯುತ್ತಿದೆ. ಇಂದಿನ ಸಾಮಾಜಿಕ ಕಾಳಜಿಯಲ್ಲಿ 'ಅಂಜಿ' ಒಂದು ಮಹತ್ವದ ಕೃತಿ. ಮಧ್ಯಮವರ್ಗಕ್ಕೆ ಸಂಬಂಧಿಸಿದ್ದು. ಇದರ ಮೇಲೆ ಸಾಮಾನ್ಯವಾಗಿ ಮೇಲು ವರ್ಗದ ನೆರಳು ಬೀಳುವುದರಲ್ಲಿಯೇ 'ದುರಂತ' ಇರುತ್ತದೆ ಮತ್ತು ಪರಿಣಾಮ ವಿಷಾದ ಪೂರ್ಣವಾಗುತ್ತದೆ. ತೆಂಡೂಲ್ಕರ್ ಇದರ ನಾಯಕಿಯ ನಡವಳಿಕೆಯನ್ನು ನಾಟಕ ಕ್ರಿಯೆಯಲ್ಲಿ ಮುಖ್ಯವಾಗಿಸಿ ಸೆರೆ ಹಿಡಿಯಬಲ್ಲ ಟೆಕ್‌ನಿಕ್‌ನಿಂದ ಯಶಸ್ವಿಯಾಗಿದ್ದಾರೆ ಕೊನೆಗೂ ಇದೊಂದು ವಿಷಾದ ಪೂರ್ಣ ಕಾಮೆಡಿಯಾಗುವುದರಲ್ಲಿ ಹಿರಿಮೆಯನ್ನೂ ಸಾಧಿಸಿಕೊಂಡಿದೆ. ಆದರೆ 'ಮಾಡು ಸಿಕ್ಕದಲ್ಲಾ'–ಕೃತಿಯು ಕೊಂಚ ಎಲ್ಲೆ ಮೀರಿದ ನಿರೂಪಣಾ ವಿಧಾನವನ್ನು ಒಳಗೊಂಡಿರುವುದರಿಂದ ಪ್ರಾರಂಭದ ಅಂಶಗಳು ಅಂತ್ಯದ ವೇಳೆಗೆ ಅರ್ಥವನ್ನೂ ಅಸ್ತಿತ್ವವನ್ನೂ ಕಳೆದುಕೊಳ್ಳುತ್ತವೆ ಎನ್ನಬಹುದು. ಇದೇ ಈ ಕೃತಿಯ ನಾಟಕೀಯತೆಯ ಅಥವಾ ರೀತಿಯಲ್ಲಿರುವ ದೌರ್ಬಲ್ಯವೂ ಆಗುತ್ತದೆ. 'ಅಂಜಿ' ಹೀಗಾಗದೆ ಯಶಸ್ವಿಯಾಗುತ್ತದೆ– ಅವರ ಇತ್ತೀಚಿನ ನಾಟಕಗಳಲ್ಲಿ ಇದರ ಕಲಾತ್ಮಕತೆಯು ಉಳಿಯುವಂಥದಾಗಿದೆ. ಇವುಗಳ ಅನುವಾದವು ಕನ್ನಡಕ್ಕೆ ಕಷ್ಟವಾಗುವುದಿಲ್ಲ. ಏಕೆಂದರೆ ಇದರ ಮರಾಠಿ ಮತ್ತು ಕನ್ನಡ (ಉ. ಕರ್ನಾಟಕ)– ಬಳಕೆಯಲ್ಲಿ ಅದಲು ಬದಲಾಗಬಲ್ಲ ಹೊರಳುಗಳನ್ನು ಪಡೆದಂಥವಾಗಿವೆ. ಆದುದರಿಂದ ಇಲ್ಲಿಯ ಭಾಷಾಂತರವು ನಿಜವಾಗಿ ರಂಗಭೂಮಿಯ ಸಮಸ್ಯೆಯಾಗುವುದಿಲ್ಲ.

ಉಳಿದ ಮೂರು ಅನುವಾದಿತ ನಾಟಕಗಳಲ್ಲಿ: 1. ಪರಹಿತ ಪಾಷಾಣ (ಅನು : ಬಿ. ಚಂದ್ರಶೇಖರ್) 2. ಇಲ್ಲದಿದ್ದವರು (ಅನು : ವಿದ್ಯಾ ಆರ್ಯ) ಮತ್ತು

ನಿಜದ ನೆಲೆ ನಿಜಕಿಲ್ಲ 3 (ಅನು : ವಿನಾಯಕ ನಾಯಕ). ಇವುಗಳಲ್ಲಿ ಮೊದಲೆರಡೂ ಕನ್ನಡ ರಂಗಭೂಮಿಯಲ್ಲಿ ಪ್ರಯೋಗವಾಗಿವೆ. ಬಿ. ಸಿ. ಯವರ ನಿರ್ದೇಶನದಲ್ಲಿ 'ಪರಹಿತ ಪಾಷಾಣ'ವು ತುಂಬ ಯಶಸ್ವಿಯಾಗಿವೆ. ಇದು ಇಂಗ್ಲಿಷ್‌ನಲ್ಲಿ 1940 ರ ವೇಳೆಗೆ ರಚಿತವಾಗಿದ್ದ (?) ಒಂದು ಕೃತಿಯ ರೂಪಾಂತರವೂ ಆಗಿದೆಯಷ್ಟೆ. ಕಾರಣಾಂತರದಿಂದ ಇದರ ಮೂಲ-ಪ್ರೇರಣೆಯನ್ನು ಹೇಳದಿರುವುದರಿಂದ ಆಶ್ಚರ್ಯ ವುಂಟಾಗುತ್ತದೆ. (ಪ್ರಕಾಶಕರು ಇದನ್ನು ಗಂಭೀರವಾಗಿ ತೆಗೆದುಕೊಳ್ಳಬೇಕಾದ ಆವಶ್ಯಕತೆಯೂ ಇದೆ. ಇಲ್ಲದಿದ್ದರೆ ಇದೊಂದು ಸ್ವತಂತ್ರ ಕೃತಿಯೆಂದು ನಾಟ್ಯ ಪ್ರೇಮಿಗಳು ಮೋಸಹೋಗಬಹುದಾಗಿದೆ. ಇದರ ಮೂಲ ಕೃತಿ : ಆರ್ಸೆನಿಕ್ ಅಂಡ್ ಓಲ್ಡ್ ಲೆಡೀಸ್—ಜೋಸೆಫ್ ಕೆಸ್ಸಲ್ರಿಂಗ್). ಈ ನಾಟಕದ ಅನನ್ಯ ಪರತಂತ್ರತೆಯು ಕಲಾತ್ಮಕವಾದುದು. ಇದರಲ್ಲಿನ ಇಬ್ಬರು ಅಕ್ಕ-ತಂಗಿಯರು ಸಾವಿನ ಬಗ್ಗೆ ತೋರುವ ಆಸಕ್ತಿಯೇ ಮುಖ್ಯವಸ್ತುವಾಗಿಬಿಡುತ್ತದೆ. ಮನೆಗೆ ಬಂದ ಅತಿಥಿಯನ್ನು ವಿಷದಿಂದ ಕೊಂದರೂ ಆತಂಕವಿಲ್ಲದವರಾಗಿ 'ಆತನ' ಸಂಸ್ಕಾರವನ್ನು ಅತ್ಯಂತ ಧಾರ್ಮಿಕವಾದ ವಿಶ್ವಾಸದಿಂದ ನಡೆಸುವುದರಲ್ಲಿ ಮಾನವ ಸ್ವಭಾವದಲ್ಲಿ ಅಡಗಿರುವ ಒಂದು ವಿಶಿಷ್ಟ ಸ್ತರವನ್ನೇ ಕಾಣುವಂತಾಗುತ್ತದೆ. ಇದರಿಂದುಂಟಾಗುವ ರೋಮಾಂಚ ನವನ್ನೂ ಅರ್ಥವಂತಿಕೆಯನ್ನೂ ಒಂದು ಜೀವಂತ ಅನುಭವವನ್ನಾಗಿಸುವುವರಲ್ಲಿಯೇ ಈ ಕೃತಿಯ ಹಿರಿಮೆಯಿದೆ. (ಈ ಹಂತದಲ್ಲಿಯೇ ಈ ನಾಟಕವು ಅಭಾರತೀಯವಾಗಿ ಉಳಿಯುವ ಅಪಾಯವೂ ಇದೆ). ಆದರೂ ಮಾನವ ಸ್ವಭಾವವನ್ನು ಬೆಳಕಿಗೊಡ್ಡು ವುದರಲ್ಲಿ ಇದೊಂದು ತುಂಬ ಮುಖ್ಯವಾದ ಕೃತಿಯಾಗಿದೆ.

ಇಲ್ಲದಿದ್ದವರು-ಕೂಡ ಕನ್ನಡದಲ್ಲಿ ರಂಗಪ್ರಯೋಗವನ್ನು ಕಂಡಿದೆ (ನಿರ್ದೇಶಕ: ಎಚ್. ವಿ. ವೆಂಕಟಸುಬ್ಬಯ್ಯ) ಮೂಲ ನಾಟಕಕಾರ ಸಾರ್ತರನ ಅಸ್ತಿತ್ವವಾದಕ್ಕೆ ಸೇರಿದ 'ಹೂ ಯಿಸ್ ಕ್ಲಾಸ್' (ಇಂಗ್ಲಿಷ್‌ನಲ್ಲಿ 'ನೋ ಎಕ್ಸಿಟ್') ಎಂಬ ಕೃತಿಯನ್ನು ಫ್ರೆಂಚ್ ಭಾಷೆಯಿಂದಲೇ ನೇರವಾಗಿ ಕನ್ನಡಕ್ಕೆ ತಂದಿರುವುದರಿಂದ ಮಧ್ಯಂತರದ ನಷ್ಟವೂ ಕಡಿಮೆಯಾಗಿರುತ್ತದೆ. (ಇಂತಹ ಅನುವಾದಗಳು ಇನ್ನೂ ನಮಗೆ ಬೇಕಾಗಿವೆ). ಇದೇ ಮಾತನ್ನು 'ನಿಜದ ನೆಲೆ ನಿಜಕಿಲ್ಲ'—ಎಂಬ ಜರ್ಮನ್ ನಾಟಕದ ಬಗ್ಗೆ ಹೇಳಲಾಗುವುದಿಲ್ಲ.ಬಹುಶಃ ಇದು ಇಂಗ್ಲಿಷ್ ಅನುವಾದದ ಅನುವಾದವಾಗಿದೆ. ಆದರೂ ಡ್ಯೂರೆನ್ ಮಟ್‌ರ 'ಒಂದು' ನಾಟಕವು ಕನ್ನಡಕ್ಕೆ ಅನುವಾದವಾಗಿದೆ ಎನ್ನುವುದರಲ್ಲಿ ಒಂದು ಸಂತೋಷವಂತೂ ಇದೆ. ಇದರ ಪ್ರಯೋಗವೇನೂ ಸುಲಭವಾದುದಲ್ಲ. ಆದುದರಿಂದ ಇದು ಓದಿಕೊಳ್ಳುವುದರಲ್ಲಿಯೇ ಕೃತಾರ್ಥವಾಗ ಬಹುದು.

ಈ ವರ್ಷದ ರಚನೆಗಳಲ್ಲಿ ಕನ್ನಡ ನಾಟಕದ ಒಂದು ಹೊಸ ತಿರುವು ಗೋಚರ ವಾಗುವಂತಿದೆ. ಇಲ್ಲಿಯ ರಚನಕಾರರೆಲ್ಲರಿಗೂ ರಂಗ ಪ್ರಯೋಗದ ಅರಿವಿರುವುದು

ಮತ್ತೊಂದು ಗುಣವಾಗಿದೆ. ನಾಟಕವು ಪ್ರೇಕ್ಷಕನನ್ನು ಕುರಿತದ್ದೆಂದೂ ಇವರೆಲ್ಲಾರೂ ತಿಳಿದವರಾಗಿರುವಂತಿದೆ– ರಂಗ ನಾಟಕಗಳಂತೆಯೇ ಬೀದಿ ನಾಟಕಗಳೂ ಕನ್ನಡ ರಂಗ ಭೂಮಿಯ ಅಭಿವೃದ್ಧಿಯಲ್ಲೂ, ಅನುಭವವನ್ನು ಗಟ್ಟಿ ಮಾಡುವುದರಲ್ಲೂ ಗುರಿ ಮುಟ್ಟುವಂಥವಾಗಿವೆಯೆಂದು ಮಾತ್ರ ಹೇಳಬಹುದು.

# ಸಣ್ಣ ಕಥೆ



**ಹು. ಕಾ. ಜಯದೇವ್**

ಈ ವರ್ಷದ ವಿಮರ್ಶೆಗೆ ದೊರೆತಿರುವ ಸಣ್ಣ ಕಥೆಗಳ ಸಂಖ್ಯೆ ಹದಿನಾರು. ಪೌರಾಣಿಕ, ಐತಿಹಾಸಿಕ ಮತ್ತು ಅನುವಾದಿತ ಕಥಾ ಸಂಕಲನಗಳಿಲ್ಲ. ವಿವಿಧ ಲೇಖಕರ ಕಥೆಗಳ ಸಂಕಲನ ಒಂದು ಮಾತ್ರ ಇದೆ.

ಸಮತಾ

ಐವರು ಕತೆಗಾರ್ತಿಯರ ಮತ್ತು ಐವರು ಕತೆಗಾರರ ತಲಾ ಒಂದೊಂದು ಕತೆಗಳುಳ್ಳ ಹತ್ತು ಕತೆಗಳ ಸಂಕಲನ. ಎಲ್ಲ ಕತೆಗಾರರು ಕರ್ನಾಟಕ ವಿಶ್ವವಿದ್ಯಾಲಯದ ಅಧ್ಯಾಪಕರು. ಸಂಪಾದಕರು ವೀರಣ್ಣ ರಾಜೂರ ಮತ್ತು ಕಾಶಿ ಪುಟ್ಟ ಸೋಮಾರಾಧ್ಯ. ಭಕ್ತಿ ವಿಶ್ವಾಸಗಳಿಂದ ಈ ಕೃತಿಯನ್ನು ಆರ್. ಸಿ. ಹಿರೇಮಠರಿಗೆ ಅರ್ಪಿಸಿ ಗುರು ಋಣವನ್ನು ತೀರಿಸಲು ಪ್ರಯತ್ನಿಸಿದ್ದಾರೆ. ಸುಮಾರು ಹತ್ತು ವರ್ಷಗಳ ಗಜಗರ್ಭವಾಸದನಂತರ ಹೊರಬಂದಿರುವ ಈ ಸಂಕಲನವನ್ನು ಅವಲೋಕಿಸಿದಾಗ ಆರ್. ಸಿ. ಹಿರೇಮಠರ ವ್ಯಕ್ತಿತ್ವಕ್ಕೆ ತಕ್ಕ ಕಾಣಿಕೆ ಇದಲ್ಲ ಎನ್ನಿಸದಿರದು. ಕತೆಗಾರ್ತಿಯರ ಎಲ್ಲ ಕತೆಗಳೂ ವರದಿ ರೂಪದ ಬಾಲಿಶವಾದ ಆದರ್ಶಗಳಿಂದ ಕೂಡಿವೆ. ಕತೆಗಾರರಲ್ಲಿ ವೀರಣ್ಣ ರಾಜೂರ ಅವರ 'ಮೊದಲು ಪ್ರೀತಿಸಿದಾಕೆ' ಈ ಸಂಕಲನದಲ್ಲಿ ಹೆಸರಿಸಬಹುದಾದ ಕಥೆ. ಈ ಕಥೆಯಲ್ಲಿ ಸಿ. ಕೃಷ್ಣ ಮತ್ತು ಆನಂದರ ಪ್ರಭಾವವನ್ನು ಕಾಣಬಹುದು. ಸ್ನಾತಕೋತ್ತರ ತರಗತಿಗಳಲ್ಲಿ ನಾನಾ ರೀತಿಯಿಂದ ವಿದ್ಯಾರ್ಥಿನಿಯರನ್ನು ಬಲೆಗೆಹಾಕಿಕೊಳ್ಳುವ ಅಧ್ಯಾಪಕರೊಬ್ಬರ ಕಥೆಯನ್ನು ಬಿ. ಬಿ. ಬಿರಾದರರ 'ಹಿಡಿತ' ಹೇಳುತ್ತದೆ. ಈ ಕಥೆಯ ನಿರೂಪಣೆಯಲ್ಲಿ ಇನ್ನಷ್ಟು ಸಂಯಮವಿದ್ದಿದ್ದರೆ ಇದೊಂದು ಒಳ್ಳೆಯ ಕಥೆಯಾಗಬಹುದಿತ್ತು. ಈ ಕಥಾ ಸಂಕಲನದ ಪ್ರಾರಂಭದಲ್ಲಿ "... ಈ ಸಂಕಲನದ ಕಥೆಗಳು ತೀರ ಪ್ರಾರಂಭದ ಸ್ಥಿತಿಯಲ್ಲಿ ರಚಿಸಿದವು ಎನಿಸಬಹುದು" ಎಂಬ ಸಂಪಾದಕರ ಮಾತು ನೂರಕ್ಕೆ ನೂರು ಸತ್ಯ. ಹಾಗೆಯೆ ಈ ಸಂಕಲನಕ್ಕೆ ಮುನ್ನುಡಿ ರೂಪದ ಸ್ವಾಗತ ಕೋರುತ್ತ ಕೆಲವು ಕತೆಗಾರ್ತಿಯರ ಬಗ್ಗೆ ಹೇಳಿರುವ "... ಸಣ್ಣ ಕತೆಯೆಂದರೆ ಇದಲ್ಲ ಎಂದು ಎತ್ತಿ ಹೇಳುವಂತಿದೆ." "... ಅವರ ಕತೆಗಾರಿಕೆ ಇನ್ನೂ ಕುದುರಬೇಕು." ಎಂಬ ಎನ್ಕೆ ಅವರ ಮಾತುಗಳು ಎಲ್ಲ ಕತೆಗಾರರಿಗೂ ಅನ್ವಯಿಸುತ್ತದೆ. 'ಸಮತಾ' ಎಂಬ ಈ ಸಂಕಲನದ ಹೆಸರು ಕಥೆಗಾರ್ತಿಯರು ಮತ್ತು ಕತೆಗಾರರು ಸಮನಾಗಿದ್ದಾರೆ ಎಂಬಷ್ಟಕ್ಕೆ ಸೀಮಿತಗೊಳ್ಳುತ್ತದೆ.

### ಆಸರೆ

ಕೆ. ಎಸ್. ಭಾರತಿ ಅವರ ಪ್ರಥಮ ಕಥಾ ಸಂಕಲನ. ವಿಶ್ವ ಕನ್ನಡ ಸಮ್ಮೇಳನದ ಮಹಿಳೆಯರ ಕಥಾ ಸಂಕಲನದಲ್ಲಿ ಸೇರಿರುವ 'ಮಿಲನ' ಕಥೆಯೂ ಸೇರಿ ಎಂಟು ಕಥೆಗಳಿವೆ. 'ಮಾಯಾ ದೀಪ' ಒಂದನ್ನು ಬಿಟ್ಟರೆ ಉಳಿದೆಲ್ಲ ಕಥೆಗಳೂ ಗಂಡು ಹೆಣ್ಣಿನ ಪ್ರೇಮದ ಪರಿಧಿಯೊಳಗೇ ಸುತ್ತುತ್ತವೆ. ಎಲ್ಲ ಕಥೆಗಳ ಒಟ್ಟು ಆಶಯವನ್ನು ಹೀಗೆ ಹೇಳಬಹುದು. 'ಹೆಣ್ಣು ಸರಿಯಾಗಿದ್ರೆ ಗಂಡಸು ಖಂಡಿತಾ ಕೆಟ್ಟು ಹೋಗೋಲ್ಲ.' 'ಅವಳಿಗೆ (ಹೆಣ್ಣು) ಗಂಡಿನ ರಕ್ಷಣೆ ಇದ್ದರೆ ಅವಳು ಸರಿಯಾಗಿ ಬಾಳುವುದು.' ಈ ಸಂಕಲನದ ಕೊನೆಯ ಕಥೆಯಾದ 'ಆಸರೆ' ಈ ಸಂಕಲನದ ಶೀರ್ಷಿಕೆಯಾಗಿದೆ. 'ಮಾಯಾ ದೀಪ'ದಲ್ಲಿ ಮಾಯಾ ಎನ್ನುವ ಬೆಕ್ಕಿನ ಬಗೆಗೆ ದೀಪಳ ಮುಗ್ಧ ಪ್ರೇಮವನ್ನು ಕಥೆ ಚಿತ್ರಿಸುತ್ತದೆ. ಎಲ್ಲ ಕಥೆಗಳೂ ಭಾವುಕತೆಯಿಂದ ಕೂಡಿವೆ. ಬದುಕಿನ ಆಳಕ್ಕಿಳಿದು ಬದುಕಿನ ಇತರ ಮುಖಗಳನ್ನೂ ಸಂಯಮದಿಂದ ಚಿತ್ರಿಸಬಲ್ಲರಾದರೆ ಭಾರತಿಯವರು ಒಳ್ಳೆಯ ಕಥೆಗಳನ್ನು ನೀಡಬಲ್ಲರು.

### ಯಾತನೆಗಳು

ಈರಯ್ಯ ಹೊಂಗೆರೆ ಅವರ ಮೂರ ಕಥೆಗಳ ಪುಟ್ಟ ಸಂಕಲನ. 'ಯಾತನೆಗಳು' ಮತ್ತು 'ತೊನ್ನು' ದಲಿತರಿಗೆ ಸಂಬಂಧಿಸಿದ ಕತೆಗಳು. ಹಿರಿಯರ ಬಲಾತ್ಕರದಿಂದ ಇಷ್ಟವಿಲ್ಲದ ಮುದುಕನೊಬ್ಬನನ್ನು ಕೈ ಹಿಡಿಯಬೇಕಾಗಿ ಬಂದ ರಂಗಿ ಗಂಡ ಸತ್ತ ಮೇಲೆ ಮಾದನೊಡನೆ ಓಡಿ ಬಂದು ಅಲ್ಲೂ ಸುಖವನ್ನು ಕಾಣದೆ ಹಿಂದಿನ ಬಾಳನ್ನು ನೆನೆಯುತ್ತಾ ಯಾತನೆಗೊಳಗಾಗುತ್ತಾಳೆ. 'ತೊನ್ನು' ಕಥೆಯಲ್ಲಿ ತೊನ್ನು ರೋಗ ಗ್ರಸ್ತ ಸಮಾಜಕ್ಕೆ ಸಂಕೇತವಾಗುತ್ತದೆ. ಕಥಾನಾಯಕನ ಮೂಢನಂಬಿಕೆಯ ವಿರುದ್ಧದ ಬಡಾಯಿ ಪಟ್ಟಭದ್ರ ಸಮಾಜ ವ್ಯವಸ್ಥೆಯ ಎದುರಿನಲ್ಲಿ ಸೋಲುತ್ತದೆ. ಬಿಡುಗಡೆ ಕಥೆಯಲ್ಲಿ ಸರಪಳಿಗೆ ಕಟ್ಟಿದ ನಾಯಿ ಸ್ವಾತಂತ್ರ್ಯವನ್ನು ಕಳೆದುಕೊಂಡ ಸ್ವಾಮಿಗೆ ಸಂಕೇತವಾಗುತ್ತದೆ. ಕಥೆಗಾರರಿಗೆ ಕಥಾ ತಂತ್ರದಲ್ಲಿ, ನಿರೂಪಣೆಯಲ್ಲಿ ಇನ್ನಷ್ಟು ಎಚ್ಚರ, ಕಲಾವಂತಿಕೆ ಬೇಕು ಎನ್ನಿಸುತ್ತದೆ.

### ಮಾತು ಕತೆ

'ಮಾತು ಕತೆ' ದಿವಂಗತ ಕಳ್ಳಿಗೆ ಮಹಾಬಲ ಭಂಡಾರಿಯವರ ಕಥೆಗಳು ಮತ್ತು ಲೇಖನಗಳ ಸಂಗ್ರಹ. ಇದರ ಸಂಪಾದಕರು ಎಂ. ವಿ. ಬಳ್ಳುಳ್ಳಾಯ ಮತ್ತು ಎಂ. ಗಂಗಾಧರ ಭಟ್. ಇದರಲ್ಲಿ ಮೂರು ಕಥೆಗಳು, ಅಸ್ಥಿ ಪಂಜರಗಳೊಡನೆ ಮಾತು ಕತೆ ಎಂಬ ಹನ್ನೊಂದು ಬರಹಗಳು ಮತ್ತು ಆರು ಲೇಖನಗಳಿವೆ. ಕಥೆಗಳಲ್ಲಿ 'ಕಣ್ಣು ತೆರೆಯಿತು!' ಉತ್ತಮ ವಸ್ತುವನ್ನುಳ್ಳ ಕಥೆ. ಅನ್ಯೋನ್ಯವಾಗಿದ್ದ ನೆರೆಹೊರೆಯವರಲ್ಲಿ ಕಾರಣಾಂತರದಿಂದ ಧರ್ಮಾಂಧತೆಯ ವಿಷಬೀಜದ ಹೊಗೆಯಾಡುತ್ತಿದ್ದಾಗ ಆಕಸ್ಮಿಕ ಘಟನೆಯಿಂದಾಗಿ ಮೊದಲಿನ ಆತ್ಮೀಯ ಮಧುರ ಸಂಬಂಧವನ್ನು

ಪಡೆಯುಕೊಳ್ಳುತ್ತಾರೆ. 'ಅಸ್ಥಿಪಂಜರಗಳೊಡನೆ ಮಾತು ಕತೆ' ಎಂಬ ಭಾಗದಲ್ಲಿ ಭಂಡಾರಿಯವರು ವಿದ್ಯಾರ್ಥಿಯಾಗಿದ್ದಾಗ 'ಸಂಗಾತಿ' (ಪತ್ರಿಕೆ)ಗೆ ಬರೆಯುತ್ತಿದ್ದ ಹನ್ನೊಂದು ಬರಹಗಳಿವೆ. ಇವುಗಳಲ್ಲಿ ಭಂಡಾರಿಯವರು ದಲಿತರ, ಶೋಷಿತರ ಧ್ವನಿಯಾಗಲು ಯತ್ನ ಮಾಡಿದ್ದಾರೆ. ಆದ್ದರಿಂದ ಅವುಗಳಲ್ಲಿ ಕಥನ ಗುಣಕ್ಕಿಂತಲೂ ಹೆಚ್ಚಾಗಿ ತಕ್ಷಣದ ಪ್ರತಿಕ್ರಿಯೆ ಕಂಡುಬರುತ್ತದೆ. ಆದರೂ 'ಜೇಡನ ಬಲೆ', 'ಹತ್ತನೆಯ ಮದುವೆ' ಮತ್ತು 'ಬಲಾತ್ಕಾರದ ಪಟ್ಟಾಭಿಷೇಕ' ಉತ್ತಮ ಕಥೆಗಳಾಗಬಹುದಿದ್ದ ಲಕ್ಷಣಗಳನ್ನು ಹೊಂದಿವೆ. ಜೇಡನ ಬಲೆ' ಸಮಾಜದ ನಯವಂಚಕರಿಗೆ ಸಂಕೇತವೂ ಆಗಿ ಒಳ್ಳೆಯ ಕಥಾ ಲಕ್ಷಣವನ್ನು ಹೊಂದಿದೆ. ಲೇಖನಗಳ ಮೂರನೆಯ ಭಾಗ ಕಥಾ ಸಂಗ್ರಹಕ್ಕೆ ಸೂಕ್ತವಲ್ಲವಾದರೂ ಭಂಡಾರಿಯವರ ಲೇಖನಗಳನ್ನು ಒಂದೆಡೆಯಲ್ಲಿ ಕೊಡುವ ಉದ್ದೇಶದಿಂದ ಇಲ್ಲಿ ಸೇರಿಸಲ್ಪಟ್ಟಿವೆ. ಅವುಗಳಲ್ಲಿ ಎರಡು ಲಘು ಹರಟೆಯ ಸ್ವರೂಪದ್ದಾಗಿವೆ. 'ವೀ.ಸೀ.' ಅವರ ವ್ಯಕ್ತಿ ಚಿತ್ರ ಒಂದು ಲೇಖನದಲ್ಲಿದೆ. ಉಳಿದವು ರಾಷ್ಟ್ರನಾಯಕರ ಹೆಸರಿನ ದುರುಪಯೋಗ, ಯಕ್ಷಗಾನ ಮತ್ತು ಹರಿಜನರನ್ನು ಕುರಿತ ಲೇಖನಗಳು.

**ದಾರಿ**

'ದಾರಿ' ಕೆ. ಜೆ. ಚಂಪಾವತಿ ಅವರ ಐದು ಕಥೆಗಳ ಮೊದಲ ಸಂಕಲನ. ಎಲ್ಲ ಕಥೆಗಳೂ ಗಂಡಿನಿಂದ ವಂಚಿತರಾದ ಅಥವಾ ಬಲಾತ್ಕರಿಸಲ್ಪಟ್ಟ ಅಥವಾ ಅವನ ಸವಿಮಾತಿಗೆ ತಾವಾಗಿಯೆ ಮನಸೋತ ಹೆಣ್ಣಿನ ಕಥೆಗಳು. 'ಕಥೆ ಹೇಳಿ ಕಣ್ಮರೆಯೂದಳು' ಕಥೆಯಲ್ಲಿ ಯಾವುದೇ ಘಟನೆ ಅಥವಾ ಪಾತ್ರದಮೇಲೆ ಒತ್ತು ಇಲ್ಲದೆ ಕಥೆ ಜಾಳುಜಾಳಾಗಿದೆ. 'ಹರಣ' ಮತ್ತು 'ವಾರಸುದಾರ' ಈ ಸಂಕಲನದ ಉತ್ತಮ ಕಥೆಗಳು. 'ವಾರಸುದಾರ' ಕಥೆಯ ವಸ್ತು ಸಣ್ಣಕಥೆಗೆ ಮೀರಿದುದು. ತಮ್ಮ ಪ್ರಥಮ ಸಂಕಲನದಲ್ಲಿ 'ಓರೆ–ಕೋರೆ'ಗಳಿರುವ ಎಚ್ಚರ ಕಥೆಗಾರ್ತಿಗಿರುವುದರಿಂದ ಮುಂದೆ ಅವರಿಂದ ಇನ್ನೂ ಒಳ್ಳೆಯ ಕಥೆಗಳನ್ನು ನಿರೀಕ್ಷಿಸಬಹುದು.

**ಸಿಡಿದವರು**

'ಸಿಡಿದವರು' ಆರ್ . ಜಿ . ಹಳ್ಳಿನಾಗರಾಜ್ ಅವರ ಐದು ಕಥೆಗಳ ಸಂಕಲನ. ಮೊದಲಿನ ಎರಡು ಕಥೆಗಳಾದ 'ಸಿಡಿದವನು' ಮತ್ತು 'ಹೊಗೆ' ಬಂಡಾಯದ ಕಥೆಗಳು. 'ಸಿಡಿದವನು' ಕಥೆಯಲ್ಲಿ ಮಂಜನ ಪ್ರತಿಭಟನೆಯ ಬಗ್ಗೆ ಒತ್ತುಬೀಳಬೇಕಾದದ್ದು ಬೀಳದೆ ಎತ್ತೆತ್ತಲೊ ಹರಿಯುವುದರಿಂದ ಪರಿಣಾಮ ನಿರೀಕ್ಷಿಸಿದಷ್ಟು ಗಾಢವಾಗದೆ ಹೋಗುತ್ತದೆ. ಬರಗೂರರು ಗಮನಿಸಿರುವಂತೆ ಕಥೆಯ ಕೊನೆಯ ಭಾಗ ಕಲಾತ್ಮಕವಾಗಿ ಬಂದಿರುವಂತೆ ಮೊದಲಭಾಗ ಬಾರದಿರುವುದಕ್ಕೆ ನಿರೂಪಕನ ಕೈ ಮೇಲಾಗಿರುವುದು ಕಾರಣ. ಒಟ್ಟಿನಲ್ಲಿ ಕಥೆಗಾರರೇ ಹೇಳಿಕೊಂಡಿರುವಂತೆ

‘ಪತ್ರಿಕೆಗಳಲ್ಲಿನ ಸಮೀಕ್ಷೆ, ವರದಿತರ ಈ ಕತೆ ಬಂದ್ರೆ ಅದಕ್ಕೆ ಪೂರ್ತಿ ಹೊಣೆಗಾರ ನಾನೇ’ ಎಂಬ ಮಾತು ನೂರಕ್ಕೆ ನೂರರಷ್ಟು ಸತ್ಯ. ‘ಹೊಗೆ’ ಕಥೆಯಲ್ಲಿ ಸಾಹುಕಾರ ಕಾಡಪ್ಪನ ಮೇಲಿನ ದುರಗನ ಆಕ್ರೋಶ ಹೊಗೆಯಾಗಿ ಬೆಂಕಿಯಾಗಿ ಸುಡುವ ಮೊದಲೇ ದುರುಗನ ಕೊಲೆಯೊಡನೆ ಆರಿಹೋಗುತ್ತದೆ. ಕಥೆ ಇಲ್ಲಿಗೇ ಮುಕ್ತಾಯವಾಗದೆ ದುರುಗನ ಹೆಂಡತಿ ಮಾರವ್ವ ಕಾಡಪ್ಪನ ಕೊಲೆ ಮಾಡುವುದರೊಂದಿಗೆ ಪರ್ಯವಸಾನವಾಗುವುದು ಕಲೆಗಾರಿಕೆಯ ದೃಷ್ಟಿಯಿಂದ ಸಮಂಜಸ ಎನಿಸುವುದಿಲ್ಲ. ಅಷ್ಟೇ ಅಲ್ಲದೆ ಕಾಡಪ್ಪನ ಕೊಲೆಗೆ ದುರುಗನ ಆಕ್ರೋಶದ ಹಿನ್ನೆಲೆಯಿಲ್ಲದೆ ಸತ್ವಹೀನವಾಗುತ್ತದೆ. ಉಳಿದ ಕಥೆಗಳಲ್ಲಿ ಮುಕ್ತ ಪ್ರೇಮದ ಬಗ್ಗೆ ಕಥೆಗಾರರ ವಿಚಾರ ಲಹರಿ ಹರಿದಂತೆ ಕಾಣುತ್ತದೆ. ಆ ಕಥೆಗಳಲ್ಲಿ ಪ್ರೇಮ ಕಾಮಗಳ ಬಗ್ಗೆ ಗೆರೆ ಎಳೆಯುವುದು ಕಷ್ಟ ಒಟ್ಟಿನಲ್ಲಿ ಕಥೆಗಾರಿಕೆಯಲ್ಲಿ ಒಳ್ಳೆಯ ಹಿಡಿತವಿರುವ, ಗ್ರಾಮ್ಯವೂ ಗ್ರಾಂಥಿಕವೂ ಅಲ್ಲದ, ಹದವರಿತ ಭಾಷಾಪ್ರಯೋಗದ ನಾಗರಾಜ್ ಅವರು ಇನ್ನೂ ಮೇಲೇರುವ ಭರವಸೆ-ಹುಟ್ಟಿಸುವ ಕಥೆಗಾರರು. ಈ ಸಂಕಲನಕ್ಕೆ ಬರಗೂರು ರಾಮಚಂದ್ರಪ್ಪನವರ ವಿಚಾರಪೂರಿತ ಮುನ್ನುಡಿಯಿದೆ.



**ಕೊಲ್ಲಿಯ ಹಣ**

ಟಿ. ಕೆ. ರಾಮರಾವ್ ಅವರ ‘ಕೊಲ್ಲಿಯ ಹಣ’ ಆ ಶೀರ್ಷಿಕೆಯ ಕಥೆಯನ್ನು ಒಳಗೊಂಡಂತೆ ಎಂಟು ಕಥೆಗಳ ಸಂಕಲನ. ‘ಮದ್ದು’ ಮತ್ತು ‘ಕಪ್ಪು ಬಿಳುಪು’ ಹೊರತಾಗಿ ಉಳಿದೆಲ್ಲ ಕಥೆಗಳು ಪತ್ತೇದಾರಿ ಕಥೆಗಳು. ಐವತ್ತರ ವಿಧುರ ಹಿಮಾಂಶು ಶರ್ಮನ ವಿನಮಸ್ಕತೆಯ ಕಾರಣವನ್ನು ಪತ್ತೆಮಾಡಿ ಅವನನ್ನು ಎರಡನೆ ಮದುವೆಗೆ ಮಕ್ಕಳು, ಅಳಿಯಂದಿರು ಮತ್ತು ಗೆಳೆಯ ಒಪ್ಪಿಸುವುದೇ ‘ಮದ್ದು’ ಕಥೆಯ ಕಥಾವಸ್ತು. ಕಪ್ಪನ್ನು ನಖಶಿಖಾಂತ ದ್ವೇಷಿಸುವ ರಂಭಾ ಕಪ್ಪುಪ್ರಿಯ ಇಟಾಲಿಯನ್ ಮುಲ್ಯಾಟೊ (ಕಪ್ಪುಬಿಳಿ ಜನಾಂಗದವರ ಸಂಯೋಗದಿಂದ ಹುಟ್ಟಿದವನು) ಗ್ಯಾರಿಬಾಲ್ಡಿಯನ್ನು ಮದುವೆಯಾಗಿ ದುರಂತಕ್ಕೀಡಾದವಳು. ಎರಡು ಕಥೆಗಳೂ ಸುಂದರವಾಗಿ ರಚಿಸಲ್ಪಟ್ಟಿವೆ. ಸುಲಭವಾಗಿ ಸಿಗಬಹುದಾದ ಆಸ್ತಿಯನ್ನು ಲಪಟಾಯಿಸಲು ಪ್ರಯತ್ನಿಸಿ ವಿಫಲರಾಗುವ ಕಥೆಗಳು ‘ಕೊಲ್ಲಿಯ ಹಣ’ ಮತ್ತು ‘ದೊಗಳೆ ಕೋಟು’. ನಿಜಕ್ಕೂ ಪತ್ತೇದಾರಿ ಕಥೆಗಳೆನ್ನಿಸಿಕೊಳ್ಳುವವು ‘ಪತ್ತೇದಾರಿ’, ‘ರಾತ್ರಿಯ ಭೋಜನ’ ಮತ್ತು ‘ನಗಾರಿಮನೆ’ ಇವುಗಳಲ್ಲಿ ಕೊಲೆಗಾರ ಅಥವಾ ಅಪರಾಧಿಯನ್ನು ಹಿಡಿಯುವ ತನಿಖಾ ರೀತಿ ನಿಜಕ್ಕೂ ಮೆಚ್ಚುವಂಥದು. ಅದರಲ್ಲೂ ‘ನಗಾರಿಮನೆ,’ಯ ಪಾಕ್ ಏಜೆಂಟ್ ಹಮೀದನನ್ನು ಮತ್ತು ಅವನಿಗೆ ಸುದ್ದಿಯನ್ನು ಕೊಡುತ್ತಿದ್ದ ಚೆಬ್ರಿಯನ್ನು ಪತ್ತೇದಾರ ರಾಜಿ ಹಿಡಿಯುವ ರೀತಿ ಅನನ್ಯವಾದುದು. ಎಲ್ಲ ಕಥೆಗಳೂ ರಾಮರಾವ್ ಅವರಿಗೆ ವಿಶಿಷ್ಟವಾದ ಸಂಭಾಷಣಾ ಶೈಲಿಯಲ್ಲಿಯೇ ಇವೆ. ಚುರುಕಾದ ಸಂಭಾಷಣೆಗಳು ಮತ್ತು ಕೊನೆಯವರೆಗೂ ರಹಸ್ಯವನ್ನು ಕಾಪಾಡುವ.

ಜಾಣ್ಮೆ ಕಥೆಯನ್ನು ಓದಲು ಪ್ರಾರಂಭಮಾಡಿದ ಮೇಲೆ ಮುಗಿಸುವವರೆಗೂ ಓದುಗನ ಆಸಕ್ತಿಯನ್ನು ಸೆರೆಹಿಡಿಯುತ್ತವೆ.

ವಿದ್ರೋಹಿಯ ವೀರಗಾಥೆ

ರೇಣುಕ ಅವರ 'ವಿದ್ರೋಹಿಯ ವೀರಗಾಥೆ' ಸೈನಿಕ ಜೀವನದ ಆಸೆ, ಹತಾಶೆ, ತೇಜೋವಧೆ, ಅಭಿಮಾನ, ಆದರ್ಶಗಳ ನಾನಾ ಮುಖಗಳನ್ನು ಚಿತ್ರಿಸುವ ಹತ್ತು ಕಥೆಗಳ ಸಂಕಲನ. ಈ ಕಥೆಗಳ ಕಾರ್ಯಕ್ಷೇತ್ರ ಕಾಶ್ಮೀರ ಕಣಿವೆಯಿಂದ ನಾಗಾ ಗುಡ್ಡಗಾಡು, ಬರ್ಮಾಗಡಿಗಳವರೆಗೂ ಹರಡಿವೆ. ಎರಡನೆಯ ಮಹಾಯುದ್ಧದ ಕಾಲದಿಂದ 1965ರ ಭಾರತ ಪಾಕ್ ಯುದ್ಧದವರೆಗಿನ ವಿವಿಧ ಕಾಲಗಳಲ್ಲಿ ನಡೆದ ಘಟನೆಗಳ ಕಥೆಗಳು ಇಲ್ಲಿ ದಾಖಲಾಗಿವೆ. 'ಒಂದು ಹತ್ಯಾಕಾಂಡದ ನೆನಪು', 'ವಿದ್ರೋಹಿಯ ವೀರಗಾಥೆ'ಗಳು ವಿದ್ರೋಹಿಯ ಬಗೆಗೆ ಮರು ಚಿಂತನೆಗೆ ಹಚ್ಚುತ್ತವೆ. ನಮ್ಮ ದೃಷ್ಟಿಯಲ್ಲಿ ವಿದ್ರೋಹಿಯಾದ ಆತ ತನ್ನ ನಾಡಿನ ಬಿಡುಗಡೆಗಾಗಿ ಹೋರಾಡುವ ಸ್ವಾತಂತ್ರ್ಯ ಹೋರಾಟಗಾರ. ಆ ಹೋರಾಟಗಾರನ ಧೀಮಂತ ಚಿತ್ರವನ್ನು 'ವಿದ್ರೋಹಿಯ ವೀರಗಾಥೆ' ಕೊಡುತ್ತದೆ. ಈ ಕಥೆಯ ಅಕಲು ಸೇಮನ ನಾಡಪ್ರೇಮ, ಬಲಿದಾನಗಳು ಬಹುಕಾಲ ನೆನಪಿನಲ್ಲುಳಿಯುವಂಥವು. 'ಪಾಕ್ ಸೆರೆಮನೆಯಲ್ಲಿ' ಸಿಪಾಯಿ ಸೂರ್ಯಾರಾವು ಅಂತರ ರಾಷ್ಟ್ರೀಯ ಸೈನಿಕ ಸೆರೆಯಾಳುಗಳ ಶಾಸನಕ್ಕೆ ವಿರೋಧವಾಗಿ ಚಿತ್ರಹಿಂಸೆಗೆ ಗುರಿಯಾದರೆ, ನಮ್ಮ ಸೈನಿಕರೆ ಹುಚ್ಚೆದ್ದು ಯಾವ ನೀತಿನಿಯಮಗಳನ್ನೂ ಗಮನಿಸದೆ ನಾಗಾ ಗುಡ್ಡಗಾಡಿನ ಜನರ ಮೇಲೆ ಎಸಗುವ 'ಒಂದು ಹತ್ಯಾಕಾಂಡದ ನೆನಪು' ತಲೆ ತಗ್ಗಿಸುವಂತೆ ಮಾಡುತ್ತದೆ. ಎರಡನೆ ಮಹಾಯುದ್ಧದ ಸಮಯದಲ್ಲಿ ಜಪಾನಿ ಸೈನಿಕರಿಂದ ತಪ್ಪಿಸಿಕೊಂಡು ಸೂರ್ಯ ಕಿರಣಗಳೇ ಪ್ರವೇಶಿಸದಂತಹ 'ಪಹಾಂಗ್' ದಟ್ಟಾರಣ್ಯದಲ್ಲಿ ಐದು ವರ್ಷಗಳ ಕಾಲ ಮಾನವ ಸಂಪರ್ಕವೇ ಇಲ್ಲದೆ ಬದುಕಿದ ನಾನಕ್ ಗುರುಂಗ ಬಹಾದ್ದೂರನ ಕಥೆ ಒಂದು ವೀರಗಾಥೆಯೇ ಸರಿ. ಬಹುಕಾಲ ಮನೆ ಮಡದಿಯರಿಂದ ದೂರವಿರಬೇಕಾದ ಸೈನಿಕನ ಜೀವನದಲ್ಲಿ ಕಾಮವೂ ಪ್ರಧಾನ ಪಾತ್ರವಹಿಸುತ್ತದೆ. ಸಿಪಾಯಿಯಿಂದ ಅಧಿಕಾರಿಯವರೆಗೆ ಮಿಲಿಟರಿ ಕ್ಯಾಂಪಿನ ನಿಯಮವನ್ನು ಮೀರಿ ರಾತ್ರಿಯವೇಳೆ ಹೊರ ಹೋಗಿ ದೈಹಿಕ ಬಯಕೆಯನ್ನು ತೀರಿಸಿಕೊಂಡು ಬರುವವರೆ ಎಲ್ಲರೂ. ಈ ವಸ್ತುವನ್ನು ಕುರಿತ ಮೂರು ಒಳ್ಳೆಯ ಕಥೆಗಳಿವೆ. 'ನಾವು ನದಿ ದಾಟಿದೆವು' ಕಥೆಯ ಸಿಪಾಯಿ ಶಿವಣ್ಣ ಮತ್ತು ನಾಯಿ ರಾಣಿಯ ಸಾಹಸ, 'ಸೇತುವೆ ಮುರಿದು ಬಿದ್ದಾಗ' ಕಥೆಯ ಸುಬೇದಾರ್ ಮಾಧವನ್‌ರ ಬಲಿದಾನ ಬಹುಕಾಲ ನೆನಪಿನಲ್ಲುಳಿಯುತ್ತವೆ. ವ್ಯಾವಹಾರಿಕ ಜೀವನದ ತಾರತಮ್ಯ ಮಿಲಿಟರಿ ಜೀವನದಲ್ಲೂ ಕಾಣಬರುತ್ತದೆ. ಇಂತಹ ತಾರತಮ್ಯಕ್ಕೆ ಅನಾದರಣೆಗೆ ಒಳಗಾಗಿ 'ಸಿಪಾಯಿಯೊಬ್ಬನ ವ್ಯಥೆಯ ಕಥೆ'ಯಲ್ಲಿ

ಭೊಮಯ್ಯ ಆತ್ಮಹತ್ಯೆ ಮಾಡಿಕೊಳ್ಳುತ್ತಾನೆ. ಸೊಗಸಾಗಿ ಕಥೆ ಹೇಳಬಲ್ಲ ರೇಣುಕ ಅವರಿಂದ ಮಿಲಿಟರಿ ಜೀವನದ ಬಗೆಗೆ ಇನ್ನಷ್ಟು ಕಥೆಗಳನ್ನು ಓದುಗರು ನಿರೀಕ್ಷಿಸಿದರೆ ಅದು ಅಸಹಜವೇನಲ್ಲ.

## ಅಸಂಬದ್ಧರು

ಎಸ್. ಬಿ. ನರಗುಂದಕರರ 'ಅಸಂಬದ್ಧರು' ಐದು ಕಥೆಗಳ ಸಂಕಲನ. ಇಲ್ಲಿಯು ಕಥೆಗಳಲ್ಲಿ 'ಇದ್ದದ್ದನ್ನು ಇಲ್ಲದ ಹಾಗೆ ಹೇಳಲು' ಕಥೆಗಾರರು ಯತ್ನಿಸಿದ್ದಾರೆ. ಅವರೇ ಹೇಳಿಕೊಂಡಿರುವಂತೆ ಇಲ್ಲಿಯ ಕಥೆಗಳು 'ವಿಲಿಯಂ ಸಾರಾಯನ್' ಇವನ ಬರಹಗಳ ಮೇಲೆ ಆಧಾರಿತವಾಗಿದ್ದರೂ ಅವೇ ಅಲ್ಲ. ಇದ್ದದ್ದನ್ನು ಇಲ್ಲದ ಹಾಗೆ ಹೇಳುವ ಈ ಕಥೆಗಳು ಇಲ್ಲಿನ ಕಥೆಗಳನ್ನು ಅಸಂಗತ (absurd) ಕಥೆಗಳನ್ನಾಗಿಸಿವೆ. ಈ ಅಸಂಗತತೆಯೊಂದಿಗೆ ಫ್ಯಾಂಟಸಿ (Fantacy)ಯೂ ಬೆರತ ಕಥೆ 'ಕೊಳಲನೂದೀsದಾನೇನss'. 'ಕಂಡದೆಲ್ಲ ನಿಜವಲ್ಲದಿದ್ದರೂ ಕಂಡ ಕನಸು ಮತ್ತು ಚಿತ್ರಗಳು ಸುಳ್ಳಲ್ಲವಲ್ಲ!' ಈ ತತ್ವವನ್ನು ಹೇಳುವ ಕಥೆ 'ಗುಲಾಬಿಯ ಹೊಲ'. ಇದ್ದದ್ದನ್ನು ಇಲ್ಲದ ಹಾಗೆ ಹೇಳುವ 'ಮೋಟಾರು ಸ್ವಾಮೇರು' ಕಥೆಯಲ್ಲಿ ಮೋಟಾರು ಸ್ವಾಮಿ ನೋಟುಗಳನ್ನು ಕುರಿತು '...ಆ ಕಾಗದ ತೋರಿಸಿದ್ರು ಅವರು ಹಿಡಿಯೂದಿಲ್ಲ. ಪೋಲೀಸರಷ್ಟೇ ಯಾಕ? ಯಾರೂ ಹಿಡಿಯೂದಿಲ್ಲ.' '......ಇಕಾ, ಇಲ್ಲೆ ಇದರ ಮ್ಯಾಗ ಏನೇನೋ ಬರದಾರ ನೋಡು ಅದಕ್ಕ ಕಾಯಿದೆ ಪುಸ್ತಕದಾಗ ಬರದದ್ದರಗಿಂತ ಭಾಳ ಮಹತ್ವ ಇರತೈತಿ...' ಎಂದು ಹೇಳುವ ಮಾತುಗಳು ಎಷ್ಟೊಂದು ಸತ್ಯ. 'ರೇಸಿನ ಕುದುರೆ'ಯಲ್ಲಿ ಓಟದ ಸ್ಪರ್ಧೆಯಲ್ಲಿ ಶಾಮ ಓಟಕ್ಕೆಂದು ಕುಳಿತಲ್ಲೇ ನಿದ್ರಿಸುತ್ತಾನೆ! 'ಕವಿಯ ಕಥೆ' ಶಾಮನ ಕವಿತ್ವವನ್ನು ಕುರಿತದ್ದಾದರೂ ವಾಸ್ತವವಾಗಿ ಹೆಡ್‌ಮಾಸ್ಟರ್ ಮತ್ತು ಲೇಡಿ ಟೀಚರರ ಪ್ರಣಯ ಪ್ರಸಂಗದ ಕಥೆಯಾಗಿದೆ. ಈ ಎಲ್ಲ ಕಥೆಗಳಲ್ಲಿ ಹನ್ನೊಂದರಿಂದ ಹದಿನಾರು ವರ್ಷಗಳ ಶಾಮನ ಪಾತ್ರವಿದೆ. ಆ ಶಾಮ ಒಬ್ಬನೆಯೊ ಅಥವಾ ಬೇರೆ ಬೇರೆಯೊ ಎನ್ನುವುದು ಇಲ್ಲಿನ ಕಥೆಗಳನ್ನು ಇನ್ನಷ್ಟು ಗಾಢ ವಿಮರ್ಶೆಗೆ ಹಚ್ಚಿದಾಗ ಮಾಡಬೇಕಾದ ಕೆಲಸ. ಇಂಥ ಕಥೆಗಳ ಅಗತ್ಯ ಕಥಾ ಸಾಹಿತ್ಯದ ಆರೋಗ್ಯದ ದೃಷ್ಟಿಯಿಂದ ಅಗತ್ಯ.

## ಸಾವು ಮತ್ತು ಇತರ ಕತೆಗಳು

ಬಿ. ಸಿ. ದೇಸಾಯಿಯರ 'ಸಾವು ಮತ್ತು ಇತರ ಕತೆಗಳು' ಎಂಟು ಕಥೆಗಳ ಸಂಕಲನ. 'ಬರೆಯುವುದೆಂದರೇನೆ ಅನುಭವಿಸುತ್ತಿರುವುದನ್ನು articulate ಮಾಡುವುದೆಂದು' ಬರೆದ ಕಥೆಗಳಿವು. ಹಳ್ಳಿಯ ಬದುಕಿನ ಬಗೆಗೆ ಕೆಲವು ಕಥೆಗಳಿದ್ದರೆ ನಗರ ಜೀವನದ ಬಗೆಗೆ ಕೆಲವು ಕಥೆಗಳಿವೆ. ಕಥೆಗಾರರು ಕಥೆಯಲ್ಲಿ ಹೇಳಹೊರಟಿರು

ವುದಕ್ಕೂ ಕಥೆಯ ಶೀರ್ಷಿಕೆಗೂ ತಾಳಮೇಳವಿಲ್ಲದೆ ಓದುಗನನ್ನು ಗೊಂದಲಿಸಿದರೆ ಆಶ್ಚರ್ಯವಾಗಲಾರದು. ಉದಾಹರಣೆಗೆ 'ದುಷ್ಟ' ಕಥೆಯ ದುಷ್ಟ ಯಾರೆಂದೇ ಗೊತ್ತಾಗುವುದಿಲ್ಲ. ಹಾಗೆಯೆ 'ನನ್ನದನ್ನೂದೆಲ್ಲಾ' ಮತ್ತು 'ಸಾವು' ಕಥೆಗಳೂ ಕೂಡ. ಕಥೆಗಳಾಗಿ ಇವು ಚೆನ್ನಾಗಿಯೆ ಇದ್ದರೂ ಕಥೆಗಾರರ ಉದ್ದೇಶ ಕಥೆಹೇಳು ವುದಷ್ಟಕ್ಕೆ ಸೀಮಿತವಾಗದೆ ಅದರಾಚೆಗೂ ಇರುವುದರಿಂದಾಗಿ ಈ ಪ್ರಶ್ನೆ ಏಳುತ್ತದೆ. 'ಬಲಾತ್ಕಾರ' ಮತ್ತು 'ಗರ್ದಿಗಮ್ಮತ್ತು' ಕಥೆಗಳಲ್ಲಿ ಮೊದಲಿನ ಕಥೆಯ ವಿವಾಹಿತ ಸ್ತ್ರೀ ಗಂಡನ ಸ್ನೇಹಿತನ ಬಲಾತ್ಕಾರಕ್ಕೊಳಗಾಗಿ ಅನಂತರ ಆಕೆಯೆ ಗಂಡನ ಮೇಲೆ ದೈಹಿಕ ಬಲಾತ್ಕಾರವನ್ನೆಸಗಲೊತ್ನಿಸಿದರೆ ಎರಡನೆಯ ಕಥೆಯಲ್ಲಿ ಕಥಾ ನಾಯಕಿ ವಿವಾಹ ಪೂರ್ವದಲ್ಲಿಯೆ ಬಲಾತ್ಕಾರಕ್ಕೊಳಗಾಗಿ ಗಂಡಿಗೆ ಪ್ರತಿಯಾಗಿ ಸ್ಪಂದಿಸುವು ದನ್ನೇ ಕಳೆದುಕೊಳ್ಳುತ್ತಾಳೆ. ಇದರ ಜೊತೆಗೆ ರಾಜಕೀಯ ಆಲೋಚನೆಗಳು' ಭ್ರಾಂತಿಮೂಲ ಆಲೋಚನೆಗಳು, ರಚನಾತ್ಮಕ ಆಲೋಚನೆಗಳು ಎಲ್ಲಾ ಸೇರಿ ಓದುಗನನ್ನು ಗೊಂದಲಕ್ಕೆ ಹಚ್ಚುತ್ತವೆ. 'ಗಂಟುಗಳು' ಕಥೆಯೂ ಅಷ್ಟೆ. ಅರೆವಾಸ್ತವ ಅರೆಭ್ರಾಮಕ(Fantacy)ತೆಯಿಂದ ಕೂಡಿದ ಕಥೆಯಲ್ಲಿ ಸಾಹಿತ್ಯ, ಕಾರ್ಲ್‌ಮಾರ್ಕ್ಸ್, ಮನಶ್ಶಾಸ್ತ್ರ ಮುಂತಾದುವುಗಳ ಚರ್ಚೆಯೆ ಅಧಿಕವಾಗಿ ಕಥೆಯೊಂದು ಕಗ್ಗಂಟಾಗು ತ್ತದೆ. ಒಟ್ಟಿನಲ್ಲಿ ಈ ಕಥಾಸಂಕಲನದ ಬಗ್ಗೆ ಹೇಳಬಹುದಾದುದಿಷ್ಟು: ಕಥೆಗಾರರಿಗೆ ಇಂಗ್ಲಿಷ್ ಸಾಹಿತ್ಯದ ಆಳವಾದ ಜ್ಞಾನವಿದೆ. ಅದರ ಪ್ರಭಾವ ಇಲ್ಲಿನ ಕಥೆಗಳ ಮೇಲಿದೆ. ಆದರೆ ಕಥೆಗಳು ಆಂತರಿಕ ತುಡಿತದಿಂದ, ಒತ್ತಾಯದಿಂದ ಬಂದಿಲ್ಲ. ಹೀಗಾಗಿ ಇಲ್ಲಿನ ಕಥೆಗಳು ಸಾಮಾನ್ಯ ಓದುಗನಿಗೆ ಎಟುಕಲಾರದ ಬೌದ್ಧಿಕ ಕಸರತ್ತಾಗಿ ನಿಲ್ಲುತ್ತವೆ.

### ಜೀವಂತ ದೇವರುಗಳು

'ಜೀವಂತ ದೇವರುಗಳು' ದಿವಂಗತ ಬಸವರಾಜ ದುರ್ಗಂ ಅವರ ಹತ್ತು ಕಥೆಗಳ ಸಂಕಲನ. ಅವರು ಸರ್ಕಾರಿ ಕೆಲಸದಿಂದ ನಿವೃತ್ತರಾದಮೇಲೆ (೧೯೭೦) 'ಜೀವನದಲ್ಲಿ ಕಂಡುಂಡ ಅನೇಕ ಅನುಭವಗಳನ್ನು ಅವರು ಕಥೆಗಳ... ರೂಪದಲ್ಲಿ ಬರೆಯತೊಡಗಿದರು' ಎಂದು ನಿವೇದನೆಯಲ್ಲಿ ಮಗಳು ರೇಖಾರಾಜ್ ಅವರೂ ಅವರ ಕಥೆಗಳಲ್ಲಿ ಜೀವನಾನುಭವ ಹಲವು ಮುಖಗಳಲ್ಲಿ ಹೊಮ್ಮತೊಡಗಿತು ಎಂದು ಟಿ.ಆರ್. ಮಹಾದೇವಯ್ಯ ಬ್ಲರ್ಬ್‌ನಲ್ಲಿ ಹೇಳಿದ್ದಾರೆ. ಈ ಕಥಾಸಂಕಲನದ ಮೊದಲ ಕಥೆಯಾದ 'ಜೀವಂತ ದೇವರುಗಳು' ಸಣ್ಣಕಥೆಯ ವ್ಯಾಪ್ತಿಗೆ ಮೀರಿದುದು. ಮುವ್ವತ್ತು ನಲವತ್ತು ವರ್ಷಗಳ ಬದುಕಿನ ಅನುಭವವನ್ನು ಒಂದು ಸಣ್ಣಕಥೆಯಲ್ಲಿ ಸೆರೆಹಿಡಿಯುವ ಪ್ರಯತ್ನಮಾಡಿದ್ದಾರೆ. ಚಂದಪ್ಪ ತನ್ನ ಪ್ರೀತಿಪಾತ್ರ ಮಗಳನ್ನು ಕಳೆದುಕೊಂಡಮೇಲೆ ಕಲ್ಲು ದೇವರಲ್ಲಿ ನಂಬಿಕೆಯನ್ನು ಕಳೆದುಕೊಂಡು ನಿಸರ್ಗದಲ್ಲಿಯೆ ದೇವರನ್ನು ಕಾಣುವ ಸಾಧಕನಾಗುತ್ತಾನೆ. ಕೊನೆಯ ಕಥೆಯಾದ 'ವಿಲೇಜ್ ವಿಜಿಲೆನ್ಸ್

ಹಳ್ಳಿಗರ ಬಾಳು ಹಸನಾಗುವುದಕ್ಕೆ ಹಳ್ಳಿಗರು ಏನುಮಾಡಬೇಕೆಂಬುದನ್ನು ಹೇಳುತ್ತದೆ. ಉಳಿದ ಕಥೆಗಳಲ್ಲಿ 'ಕಣು ತೆರೆಸಿದ ಛಳ್ಳಿಗಿಂಡಿ', 'ಋಣ' ಮತ್ತು 'ಬಾಳೆ ಎಲೆಯ ಊಟ'ಗಳು ಅನಿರೀಕ್ಷಿತ ಅಂತ್ಯದಿಂದ ಕೂಡಿವೆ. 'ವೆಂಕಟೇಶ್ವರನ ಪ್ರಸಾದ' ಮತ್ತು 'ಕೈ ಬದಲಾಯಿತು' ಆದರ್ಶವನ್ನು ಹೇಳುವಕಥೆಗಳು. 'ಕೈ ಬದಲಾಯಿತು' ಕಥೆಯಲ್ಲಿ ಗೇಣಿ ಪದ್ಧತಿ ರದ್ದತಿಯಿಂದ ನೊಂದ ಜಾನಕಮ್ಮನ ಬಗ್ಗೆ ಗೇಣಿದಾರನಾಗಿದ್ದ ನರಸೇಗೌಡ ತೋರುವ ಔದಾರ್ಯ ಪರಿಹಾರವಲ್ಲ. ಸಮಸ್ಯೆಯ ಆಳಕ್ಕಿಳಿಯದೆ ಅದರ ಒಂದು ಮುಖವನ್ನು ಮಾತ್ರ ಇಲ್ಲಿ ಚಿತ್ರಿಸಿದೆ. 'ವಧುಪರೀಕ್ಷೆ' ಇನ್ನಷ್ಟು ಸಂಗ್ರಹವಾಗಿದ್ದರೆ ಚೆನ್ನಾಗಿತ್ತು. ಕಥೆಗಾರರು ಬದುಕಿದ್ದರೆ ಅವರ ಆಳವಾದ ಜೀವನಾನುಭವದಿಂದ ಇನ್ನೂ ಒಳ್ಳೆಯಕಥೆಗಳನ್ನು ನಿರೀಕ್ಷಿಸಬಹುದಾಗಿತ್ತು ಎಂದು ಹೇಳಬಹುದು.

ಕರಿಮಣ್ಣಿನ ಬೊಂಬೆಗಳು

'ಕರಿಮಣ್ಣಿನ ಬೊಂಬೆಗಳು' ಕರೀಗೌಡ ಬೀಚನಹಳ್ಳಿ ಅವರ ಒಂಬತ್ತು ಕಥೆಗಳ ಸಂಕಲನ. "...ಇವರ ಕಥೆಗಳಲ್ಲಿ ಪ್ರಧಾನವಾಗಿ ಪ್ರತಿಭಟನೆಯ ಪ್ರವೃತ್ತಿ ಕಂಡುಬಂದರೂ ಅದು ಎಲ್ಲೂ ತನ್ನ ಕಲಾತ್ಮಕತೆಯನ್ನು ಬಿಟ್ಟುಕೊಟ್ಟಿಲ್ಲದಿರುವುದೊಂದು ಮೌಲಿಕ ಅಂಶ. ಇಲ್ಲಿಯ ಕಥೆಗಳು ವಸ್ತು, ಭಾಷೆ, ಪಾತ್ರ, ಪರಿಸರದಲ್ಲಿ ರಕ್ತ ಮಾಂಸ ತುಂಬಿಕೊಂಡು ಹೊಸ ದಿಗಂತವನ್ನು, ದೋರಣೆಯನ್ನು ಪ್ರತಿನಿಧಿಸುತ್ತವೆ." "ವೈಚಾರಿಕವಾಗಿ ಇವರು ಸಮಾಜವಾದಿ ಚಿಂತನೆಯಲ್ಲಿ ಆಸಕ್ತಿಯುಳ್ಳವರು." ಎಂಬ ಪ್ರಕಾಶಕರಹೇಳಿಕೆ ಸ್ವಲ್ಪಮಟ್ಟಿನ ಉತ್ಪ್ರೇಕ್ಷೆಯಿಂದ ಕೂಡಿದ ಹೇಳಿಕೆ. "ಈ ನನ್ನ ಕಥೆಗಳ ಸೃಷ್ಟಿಗೆ ನನ್ನ ಪ್ರಜ್ಞೆ ಮತ್ತು ಪರಿಸರ ಮೂಲಕಾರಣ" ಎಂದು ಕಥೆಗಾರರೇ ಹೇಳಿಕೊಂಡಿದ್ದಾರೆ. ಈ ಹಿನ್ನೆಲೆಯಲ್ಲಿ ಕಥೆಗಳನ್ನು ನೋಡಿದಾಗ ಹಳ್ಳಿಯಬದುಕಿನಲ್ಲಿ ಹಿಂದೆ ರೂಢಿಯಲ್ಲಿದ್ದ ಕೂಡಿಕೆ ಕಥೆಗಾರರನ್ನು ಬಹುವಾಗಿ ಕಾಡಿರುವುದನ್ನು ನೋಡಬಹುದು. ಕೂಡಿಕೆ ಅಪರಾಧವಲ್ಲ. ಸಮಾಜದ ವ್ಯವಸ್ಥೆಗೆ ಹೊರತಾದುದೂ ಅಲ್ಲ, ಅಂತಹ ಸಂಸಾರಗಳಲ್ಲಿನ ಮಕ್ಕಳು ಅನ್ಯೋನ್ಯವಾಗಿಯೂ ಬದುಕಬಹುದೆಂಬುದು ಕಥೆಗಾರರ ನಿಲುವು. ಇದೇವಸ್ತುವನ್ನುಳ್ಳ 'ಆಸಕ್ತಿ', 'ಕರಿಮಣ್ಣಿನ ಬೊಂಬೆಗಳು' ಮತ್ತು 'ಸಂಗಾತಿ' ಗಳಲ್ಲಿ 'ಆಸಕ್ತಿ'ಯ ನಾಯಕನ ದಿವ್ಯ ನಿರ್ಲಕ್ಷತೆಗೆ, ನಿಷ್ಠುರ ಋಜು ನಡೆಗೆ ಸಾಕಷ್ಟು ಹಿನ್ನೆಲೆಯಿಲ್ಲ. ಬೇರೆಯಕಥೆಗಳಲ್ಲಿ ಅನವಶ್ಯಕ ಪಾತ್ರಗಳ ಹೆಸರನ್ನು ಹೇಳುವ ಕಥೆಗಾರರು ಇಲ್ಲಿ ಕಥಾನಾಯಕನ ಹೆಸರನ್ನೂಹೇಳಲು ಹೋಗಿಲ್ಲ. 'ಆಸಕ್ತಿ' ಕಥೆಯ ಉತ್ತರಾರ್ಧದಂತಿರುವ 'ಕರಿಮಣ್ಣಿನ ಬೊಂಬೆಗಳು' ಕಥೆಯಲ್ಲಿ ಅವಿದ್ಯಾವಂತ ಮುಡ್ಲಿಯೆ ವಿದ್ಯಾವಂತ ಸೋದರನಿಗಿಂತಲೂ ಹೆಚ್ಚಾಗಿ ಶೋಷಣೆಯ ವಿರುದ್ಧ ಪ್ರತಿಭಟಿಸುತ್ತಾನೆ. ಹಳ್ಳಿಗರ ಅಜ್ಞಾನವನ್ನೇ ಬಂಡವಾಳ ಮಾಡಿಕೊಂಡು

ಶಾಸ್ತ್ರ ಹೇಳುವುದು, ಮಾಟ ಕೀಳುವುದು ಇವೇ ಮೊದಲಾದ ಪೂಜಾರಯ್ಯನ ಶೋಷಣೆಯ ವಿರುದ್ಧ ಮೂಡ್ಲಿ ಬಂಡೇಳುತ್ತಾನೆ. ಇಂತಹುದೇ ಬಂಡಾಯದ ಒಂದು ಕ್ಷೀಣ ಧ್ವನಿ 'ಒಂದು ಅಪೂರ್ವ ಸಂಸಾರ' ಕಥಯಲ್ಲಿದೆ. ಈ ಕಥೆಯ ಹನ್ನೆರಡು ವರ್ಷದ ಅತ್ತರ್ ತನ್ನ ಮಾಲೀಕನ ಶೋಷಣೆಯ ವಿರುದ್ಧ ಸಿಡಿದು "ಹಂದೀ ನನ್ಮಗ! ಬಿಟ್ಟಿ ಗೇಯಕ್ಕೆ ನಾವೇನು ಬಿಟ್ಟಿ ಬಿದ್ದಿದ್ದೀವಾ?" ಎಂದು ಒರಸುತ್ತಿದ್ದ ಸೈಕಲ್ಲನ್ನು ಅಲ್ಲೇ ಬಿಟ್ಟು ಕೈ ಒರಸುತ್ತಾ ಎದ್ದು ನಿಂತು ತನ್ನ ತಮ್ಮನನ್ನು "...ಲೇ ಬಾರೋ! ಎದ್ದು ಬಾರೊ. ಇವನಂಗಡಿ ಇಲ್ದೆ ಇದ್ರೆ ಇನ್ನೊಂದಾಯ್ತು" ಎಂದು ಕರೆಯುವಲ್ಲಿ ನಿಜಕ್ಕೂ ಬಂಡಾಯವಿದೆ. ಉಳಿದ ಕಥೆಗಳಲ್ಲಿ ಸಮಾಜದ ಪ್ರಕೃತ ವ್ಯವಸ್ಥೆಯನ್ನು ಒಪ್ಪಿಕೊಂಡು ಇದ್ದುದನ್ನು ಇದ್ದಂತೆ ಚಿತ್ರಿಸಿದ್ದಾರೆ, ಕಥೆಗಾರರು. 'ಅರಣ್ಯ' ಮತ್ತು 'ಒಡಲ ತವಕಕೆ ಕಾಡು ಹೊಕ್ಕನು' ಅಂಥ ಕಥೆಗಳು. ಮೊದಲ ಕಥೆಯಲ್ಲಿ ಸಮಾಜಬಾಹಿರ ನೈತಿಕ ಸಂಬಂಧದಿಂದ ಗರ್ಭಿಣಿಯಾಗಿ ಹದಿವಯಸ್ಸಿನ ಚೆನ್ನಿಯು ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ಎರಡನೆಯ ಕಥೆಯಲ್ಲಿ ಅದೇ ವಯಸ್ಸಿನ ಭಾಗ್ಯ ರೂಪ, ವಿದ್ಯಾ, ಗುಣ, ಶೀಲಗಳಿಂದ ಕೂಡಿದ್ದೂ ಪರಿಸ್ಥಿತಿಯ ಒತ್ತಡದಿಂದ ಅವಿದ್ಯಾವಂತ, ಅನಾಗರಿಕ ರಾಜನನ್ನು ಕೈ ಹಿಡಿದು ಬಾಳಮೊದಲ ದಿನಗಳಲ್ಲೇ ಗಂಡನಿಂದಲೇ ಸಾವನ್ನಪ್ಪುತ್ತಾಳೆ. ಈ ಎರಡೂ ಕಥೆಗಳ ಶೀರ್ಷಿಕೆಗಳೂ ಅಸಂಗತ. ಈ ಎರಡೇ ಕಥೆಗಳೇಕೆ ಬಹುತೇಕ ಕಥೆಗಳ ಶೀರ್ಷಿಕೆಗಳು ಅಸಂಗತ, 'ಸಂಗಾತಿಗಳು' ಕಥೆಯ ಶೀರ್ಷಿಕೆ 'ಒಂದು ಅಪೂರ್ವ ಸಂಸಾರ' ಎಂದಿದ್ದರೆ ಉಚಿತವಾಗಿರುತ್ತಿತ್ತು. ಈಗಿರುವಂತೆ 'ಒಂದು ಅಪೂರ್ವ ಸಂಸಾರ' ಅಪೂರ್ವ ಸಂಸಾರವಾಗದೆ ನಮ್ಮ ಸಮಾಜದಲ್ಲಿ ಅನ್ಯಾನ್ಯಗತಿಕವಾದ ಸಂಸಾರವಾಗಿದೆ. 'ಸಂಗಾತಿಗಳು' ಸಮಾಜದಲ್ಲಿ ಅಪರೂಪವಾದ ಹಿಂದೂ ಮುಸ್ಲಿಂ ಮೈತ್ರಿಯನ್ನು ಚಿತ್ರಿಸುವ ಅಪೂರ್ವ ಸಂಸಾರವಾಗಿದೆ. 'ಆಸಕ್ತಿ' ಮತ್ತು 'ಸಂಬಂಧ' ಕಥೆಗಳ ಶೀರ್ಷಿಕೆಗಳೂ ಅಷ್ಟೆ. ತನ್ನದೇನೂ ತಪ್ಪಿಲ್ಲದೆ 'ಸಂಬಂಧ' ಕಥೆಯ ಐದನೆ ಕ್ಲಾಸಿನ ವಿದ್ಯಾರ್ಥಿ ಗೋವಿಂದ ತನ್ನ ಹೆಡ್ಮಾಸ್ಟರಿಂದ ಸಾಯಬೀಳ ಏಟು ತಿಂದುದರಲ್ಲಿ ಶೀರ್ಷಿಕೆ ಏನು ಸಮರ್ಥನೆಯನ್ನು ಕೊಡುತ್ತದೆ? ಹೀಗೆ ಏಟು ತಿಂದ ಗೋವಿಂದ ಸಂಜೆ ಶಾಲೆಯಿಂದ ಹಿಂದಿರುಗುವಾಗ ಕೆಂಪಟ್ಟೆ ಕೆಂಪಗೆ ಉರಿಯುತ್ತಿದ್ದ ಕೆಂಪು ಸೂರ್ಯನನ್ನು ನೋಡಿ ಎಲ್ಲಿಲ್ಲದ ಸಿಟ್ಟನ್ನು ಹೊಂದುವುದು ಅರ್ಥಹೀನ. ಏಕೆಂದರೆ ಕಥೆಯ ಕೊನೆಗೆ ಬರುವ ಇಂತಹ ಒಂದೆರಡು ವಾಕ್ಯಗಳಿಂದ ಅದು ಬಂಡಾಯ ಕಥೆಯಾಗುವುದಿಲ್ಲ. ಬಂಡಾಯ ಅಥವಾ ಪ್ರತಿಭಟನೆ ಕಥೆಯೊಳಗೆ ಸಹಜವಾಗಿ ಬಂದಿರಬೇಕು. ಇಂತಹುದೇ ಅಂತ್ಯ 'ಕರಿಮಣ್ಣಿನ ಬೊಂಬೆಗಳು' ಮತ್ತು 'ದನಿ' ಕಥೆಗಳಲ್ಲಿ ಬಂದಿದೆ. 'ಕಳಕಳಿ' ಮತ್ತು 'ದನಿ' ಎರಡು ಔಚಿತ್ಯಪೂರ್ಣವಾದ ಕಥೆಗಳು. ರಾಮಣ್ಣನ ಓದಿನ ಬಗ್ಗೆಯ ಕಳಕಳಿ, ಅವನಿಗೆ ಪೆನ್ನಿಲ್ಲದಿರುವುದನ್ನು ಗಮನಿಸಿ ಅವನ ಪೆನ್ನಿಗೆ ದೇವರಿಗೆ ಬಿಟ್ಟ ಹುಂಜವನ್ನೇ ಮಾರಿ ಹಣ ಕೊಡುವ

ತಾಯಿಯ ಕಳಕಳಿ ಕಣ್ಣಿಗೆ ಕಟ್ಟುವಂತೆ ಚಿತ್ರಿತವಾಗಿದೆ. 'ದನಿ' ಕಥೆಯು ನಾಗಿಯ ಓದಿನ ಬಗೆಗಿನ ಆಸಕ್ತಿ ಓದಬೇಡವೆಂಬ ಅವಳ ತಾಯಿ ಕೆಂಚವ್ವನ ವಿರುದ್ಧದ ಧ್ವನಿಯಾಗುತ್ತದೆ. ಒಟ್ಟಿನಲ್ಲಿ ಹೇಳುವುದಾದರೆ ಹಳ್ಳಿಗಾಡಿನ ಬವಣೆಯ ಚಿತ್ರವನ್ನು ಎಲ್ಲ ಕಥೆಗಳಲ್ಲಿಯೂ ಕೊಟ್ಟಿರುವ ಕಥೆಗಾರರು ಇನ್ನಷ್ಟು ವೈಚಾರಿಕತೆ, ಶೋಷಣೆಯ ನಿಜವಾದ ಕಳಕಳಿ ಮತ್ತು ಪ್ರತಿಭಟನೆ, ಕಾಮದ ಬಗೆಗೆ ಶೋಧನೆ, ನಿರೂಪಣೆಯಲ್ಲಿ ಕಲಾತ್ಮಕತೆಯನ್ನು ರೂಢಿಸಿಕೊಂಡರೆ ಇನ್ನೂ ಒಳ್ಳೆಯ ಕಥೆಗಳನ್ನು ಇವರು ಕೊಡಬಲ್ಲರು.

ಈಡು

'ಈಡು' ಮಳಲಿ ವಸಂತಕುಮಾರ್ ಅವರ ಹತ್ತು ಕಥೆಗಳ ಸಂಕಲನ. 'ಈಡು' ಮತ್ತು 'ಸ್ಥಿತ್ಯಂತರ' ಹೊರತು ಉಳಿದವು ಗ್ರಾಮೀಣ ಬದುಕಿನ ಕಥೆಗಳು. 'ಈಡು' ಕಥೆಗೆ ಮುಂಚೆಯಿದ್ದ 'ಬಣ್ಣ' ಎಂಬ ಹೆಸರನ್ನು ಬದಲಿಸಿ 'ಈಡು' ಎಂದು ಹೆಸರಿಟ್ಟಿರುವುದು ಔಚಿತ್ಯಪೂರ್ಣವಾಗಿದೆ. ಈಡು ಗುರಿತಪ್ಪಿ ಪ್ರಾಣಿ ಉಳಿದು ಕೊಳ್ಳುವಹಾಗೆ ಇಲ್ಲಿ ಮಂಜುಳೆ ಶ್ರೀಶ್ರೀಶ್ರೀ ಜಗದ್ಗುರುಗಳ ಮತ್ತು ಪ್ರಿನ್ಸಿಪಾಲರ ಸಂಚಿನಿಂದ ಉಳಿದುಕೊಳ್ಳುತ್ತಾಳೆ. ಆದರೆ ಪ್ರಾಣಿ ಘಾಸಿಗೊಳ್ಳುವ ಹಾಗೆ ಮಂಜುಳೆಯೂ ಮಾನಸಿಕವಾಗಿ ಕುಗ್ಗಿಹೋಗುತ್ತಾಳೆ. ಕಥೆಯ ಅಂತ್ಯದಲ್ಲಿ ಮಂಜುಳೆ ಕೋಳಿಮರಿಯೊಂದನ್ನು ಹದ್ದಿನಿಂದ ಪಾರುಮಾಡುವ ಚಿತ್ರ ಸಾಂಕೇತಿಕವಾಗಿದೆ. ಕಥೆ ಬಹು ದೀರ್ಘವಾಗಿ ತನ್ನ ಪರಿಣಾಮದ ಗಾಢತೆಯನ್ನು ಕಳೆದುಕೊಳ್ಳುತ್ತದೆ. 'ಸ್ಥಿತ್ಯಂತರ' ಕಥೆಯಲ್ಲಿ ಜಲಜಳು ವೇಶ್ಯೆಯಾಗಲು ಕಾರಣನಾಗಿದ್ದ ಧರಣೇಶನೇ 'ಜಾಗೃತಿ ಸಂಘದ' ಸಂಚಾಲಕನಾಗಿ ವೇಶ್ಯೆಯರ ಉದ್ಧಾರಕ್ಕಾಗಿ ಪ್ರಯತ್ನಿಸುವುದು ವ್ಯಂಗ್ಯದ ಪರಮಾವಧಿ. ನಾಯಿಯೊಂದು ತನ್ನ ಬಾಲವನ್ನು ಕಚ್ಚಲು ಯತ್ನಿಸುತ್ತ ಚಕ್ರಾಕಾರವಾಗಿ ತಿರುಗುವ ಚಿತ್ರ ಸಾಂಕೇತಿಕವಾಗಿದೆ. ಕಥೆಯ ಪ್ರಾರಂಭದಲ್ಲಿನ ದೀರ್ಘ ವಿವರಣೆ ಮತ್ತು ಫಾಂಟಸಿ ತರಹದ ಮುಕ್ತಾಯ ಕಥೆಯನ್ನು ಸ್ವಲ್ಪ ಜಾಳುಜಾಳಾಗಿಸುತ್ತದೆ. 'ಇಲ್ಲಿನ ಯಾವ ಕಥೆಯೂ ಕಲ್ಪನೆಯಿಂದ ಊಹೆಯಿಂದ ರಚನೆಗೊಂಡಿಲ್ಲ. ಸಮಾಜದಲ್ಲಿ ಕಣ್ಣಾರೆ ಕಂಡ ಘಟನೆಗಳು ಸಂಗತಿಗಳು ಕತೆಯಾಗಿ ರೂಪುಗೊಂಡಿವೆ, ಎಂಬ ಕಥೆಗಾರರ ಮಾತಿನ ಹಿನ್ನೆಲೆಯಲ್ಲಿ 'ರಿಕ್ತ' ಮತ್ತು, 'ಅನಿವಾರ್ಯ' ಕಥೆಗಳನ್ನು ನೋಡಿದಾಗ ಕಥೆಗಾರರ ಹೇಳಿಕೆ ಪ್ರಶ್ನಾರ್ಹವಾಗುತ್ತದೆ. 'ರಿಕ್ತ' ಕಥೆಯಲ್ಲಿ ತಮ್ಮಪ್ಪ 'ಆಲೋಗ್ಯಂಡೆ'ಯನ್ನು ಬೆಳೆದು ಊರಿನಲ್ಲಿ ತಾನೂ ಒಂದು ಕುಳವಾಗಬೇಕೆಂದು ರಾಮಪ್ಪ ಗೌಡನಿಗೆ ತನ್ನ ಜಮೀನನ್ನು ನಂಬಿಕೆ ಕ್ರಯ ಮಾಡಿ ವಂಚಿತನಾಗುತ್ತಾನೆ.ರಾಮಪ್ಪನ ಬೆಣ್ಣೆಯಲ್ಲಿ ಕೂದಲು ತೆಗೆಯುವಂಥ ಮಾತುಗಳಿಗೆ ತಮ್ಮಪ್ಪ ಮರುಳಾದುದರಲ್ಲಿ ಆಶ್ಚರ್ಯವೇನೂ ಇಲ್ಲ. ಆದರೆ ರಾಮಪ್ಪ ಇದೇ ತಮ್ಮಪ್ಪನ ಹಸುಮಾರಿದ ಹಣವನ್ನೂ ಗುಳುಂ ಮಾಡುವುದು ಅತಿ

ಯಾಗುತ್ತದೆ. ಹೀಗಾಗಿ ಒಂದು ಶುದ್ಧ ಸಾಧು ಪಾತ್ರವೂ ಮತ್ತೊಂದು ಧೂರ್ತತೆಯ ಮೈವೆತ್ತ ರಾಕ್ಷಸ ಪಾತ್ರವೂ ಆಗಿ ಇದು ಸಾಧಾರಣ ಕಥೆಯಾಗಿಬಿಡುತ್ತದೆ. 'ಅನಿವಾರ್ಯ' ಕಥೆ ಭಾಗ್ಯಳ ಆಲೋಚನೆಯಲ್ಲಿ ತೆರೆದುಕೊಂಡು ಸರಾಗವಾಗಿ ಓದಿಸಿಕೊಂಡು ಹೋದರೂ ಅವಾಸ್ತವ ನೆಲೆಗಟ್ಟಿನಮೇಲೆ ನಿಂತಿದೆ. ಊರಿನ ದೊಡ್ಡ ಕುಳವಾದ ರಾವಣಪ್ಪ ದೊಡ್ಡ ಹಬ್ಬ, ತೋಟದ ಹಬ್ಬಗಳನ್ನು ಮಾಡುತ್ತಾ, ಆದಾಯಕ್ಕಿಂತ ಖರ್ಚೇ ಹೆಚ್ಚಾಗಿ ಅಂಗಡಿ ಮಂಜಣ್ಣನಿಗೆ ಆಸ್ತಿಯನ್ನೊಪ್ಪಿಸುವುದನ್ನು ಒಪ್ಪಬಹುದಾದರೂ, ದಿನ ನಿತ್ಯದ ಕೂಳಿಗೇ ಕೈಯೊಡ್ಡುವ ಪರಿಸ್ಥಿತಿ ಬಂದಾಗಲೂ ಹಿಂದಿನ ಡೌಲನ್ನೇ ಮೆರೆಯಬೇಕೆಂದು ತನ್ನ ಮಕ್ಕಳನ್ನೇ ಮಂಜಣ್ಣನಿಗೆ ಒಪ್ಪಿಸುವುದನ್ನು ಯಾರೂ ಒಪ್ಪಲಾರರು. ಗ್ರಾಮೀಣ ಜನತೆಗೆ ಎಲ್ಲಕ್ಕಿಂತಲೂ ಮಾನ ಹೆಚ್ಚಿನದು. ಒಂದು ವೇಳೆ ಗಂಡುಸಾದ ತಂದೆ ಇಂತಹ ಕಾರ್ಯವನ್ನು ಮಾಡಿಯಾನು ಎಂದುಕೊಂಡರೂ ತಾಯಿಯಾದವಳು ಖಂಡಿತಾ ಇಂಥ ತಲೆಹಿಡುಕತನವನ್ನು ಮಾಡುವುದಿಲ್ಲ. ಹೀಗಾಗಿ ಇಂಥ ಕಥೆಯನ್ನು ಬರೆಯುವುದು ಕಥೆಗಾರರಿಗೆ ಅನಿವಾರ್ಯವಾಗಿರಲಿಲ್ಲ. ಆಸ್ತಿಯನ್ನು ಕಳೆದುಕೊಳ್ಳುವುದು ರಾವಣಪ್ಪನಿಗೆ ಅನಿವಾರ್ಯವಾಗಿರಲಿಲ್ಲ. ಮಂಜಣ್ಣನಿಗೆ ಸೆರಗನ್ನು ಹಾಸುವುದು ಭಾಗ್ಯಳಿಗೆ ಅನಿವಾರ್ಯವಾಗಿರಲಿಲ್ಲ. ಇಂಥ ಕಥೆಯನ್ನು ಬರೆದು ತಮ್ಮ ಶಕ್ತಿಯನ್ನು ಅಪವ್ಯಯಗೊಳಿಸಿಕೊಂಡಿದ್ದಾರೆ ಕಥೆಗಾರರು. ಅಷ್ಟೆ. 'ಸಾಸ್ತ' ಮತ್ತು 'ಅಭಿಸಾರ' ಎರಡು ಒಳ್ಳೆಯ ಕಥೆಗಳೇ. 'ಅಭಿಸಾರ' ಕಥೆಗೆ ಹಿಂದೆಯಿದ್ದ 'ಕಲ್ಯಾಣಿ' ಎಂಬ ಹೆಸರೇ ಔಚಿತ್ಯಪೂರ್ಣವಾದುದು. ಏಕೆಂದರೆ ಕಥೆಯಲ್ಲಿ ಕಲ್ಯಾಣಿ ಊರಿನ ಹಿಂದಿನ ಮತ್ತು ಇಂದಿನ ಸ್ಥಿತಿಗೆ ಪ್ರತಿಮೆಯಾಗಿ ನಿಲ್ಲುತ್ತದೆ. 'ಸಾಸ್ತ' ಕಥೆಯ ಬೆಳ್ಳಿ ಹಕ್ಕಿಬಿಕ್ಕಿಯ ಕಟುಮರ ರಾಮಯ್ಯನಿಗೆ ಮಕ್ಕಳ ಆಸೆಗಾಗಿ ಸೋಲುವುದು ಅಷ್ಟೊಂದು ಸಮಂಜಸವಾಗಿ ಕಾಣುವುದಿಲ್ಲ. ಏಕೆಂದರೆ ಅವಳ ವಿವಾಹಪೂರ್ವದ ಬಾಳಿನಲ್ಲೂ ವಿವಾಹನಂತರದ ಹತ್ತುವರ್ಷಗಳ ಸಾಂಸಾರಿಕ ಬದುಕಿನಲ್ಲೂ ಪ್ರಶ್ನಾರ್ಹವಾಗುವಂತಹ ನಡವಳಿಕೆ ಏನೂ ಇಲ್ಲ. 'ಅಭಿಸಾರ'ದ ಜಯಳು ಜಾರಿದ್ದಕ್ಕೆ ಅರ್ಥವೂ ಇಲ್ಲ ಸಮರ್ಥನೆಯೂ ಇಲ್ಲ. ಜಾರಿದ್ದು ಕಥೆಗಾರರಷ್ಟೆ. ಏಕೆಂದರೆ 'ರಸಿಕತೆಯಲ್ಲಿ ನನಗಿಂತ ಅವಳೇ ಒಂದು ಕೈಮುಂದೆ. ಕಲ್ಯಾಣಿ ತೋಟದಲ್ಲಿ ಬಾಳೆಯಬುಡದಲ್ಲೊಮ್ಮೆ ಅವಳು ತನಗೆ ಬಲವಾಗಿ ಜೋತು ಬಿದ್ದುದು...ಜೇನಿನ ಬಣ್ಣದ ಹಳಸಿನತೊಳೆಯ ಪಕಳೆಯಂತಹ ಅವಳ ತುಟಿಗೆ ಮುತ್ತಿಟ್ಟು...' 'ತೋಟದ ಒಂದೊಂದು ಗಿಡದ ಉಸಿರಾಟದಲ್ಲೂ ನಮ್ಮ ಪ್ರಣಯದ ಕಥೆ ತುಂಬಿದೆ.' ಎಂಬ ಮಾತುಗಳಿಗೆ ಅರ್ಥವೇ ಇರುವುದಿಲ್ಲ. ಅದೂ ಕಲ್ಕತ್ತೆಗೆ ಹೋದ ಮೂರು ತಿಂಗಳಿನಲ್ಲಿಯೆ ಈಕೆ ಜಾರಿದಳು ಎಂಬುದನ್ನಾಗಲಿ ಇವರ ಪರಿಣಾಮವಾಗಿ ಅವಳು ಮತ್ತು ಅವಳ ಪ್ರಿಯಕರ ಜುಂಜ ಕೊಲೆಯಾದರು ಎಂಬುದು ಒಂದೂವರೆ ವರ್ಷಗಳವರೆಗೂ ಕಥಾನಾಯಕನಿಗೆ ತಿಳಿಯಲೇ ಇಲ್ಲ ಎಂಬುದನ್ನಾಗಲಿ ಓದುಗರು ನಂಬುವುದು ಕಷ್ಟ. ಈ ಒಂದು

ನ್ಯೂನತೆಯನ್ನು ಬಿಟ್ಟರೆ ಕಥೆ ಒಳ್ಳೆಯ ಕಥೆಯೆ. 'ಸಮರ್ಥ ಕಥೆಗಾರ ತಂತ್ರಗಳನ್ನು ಅನುಸರಿಸಿ ಕಥೆ ಬರೆಯುವುದಿಲ್ಲ'. ಎಂಬ ಕಥೆಗಾರರ ಹೇಳಿಕೆಗೆ ಸವಾಲೆಸೆಯುವಂಥಹ ಕಥೆಯಿದು! ಕಥೆಯ ಅಂತ್ಯ ಪಾತ್ರ ತೀರ ಕೃತಕವಾದದ್ದು. ಬೆದೆಯಾಡುತ್ತಾ ಉಡಿದುಕೊಂಡಿದ್ದ ಹಾವುಗಳನ್ನು ಗರುಡ ಎತ್ತಿಕೊಂಡು ಹೋಗುವ ಚಿತ್ರ ಮೈ ಜುಮ್ಮೆನಿಸುವಂತೆಯೆ ಕಥೆಯ ಅತ್ಯಂತ ಸಮರ್ಥವೂ ಸಾರ್ಥಕವೂ ಆದ ಸಂಕೇತವೂ ಆಗಿದೆ. ಬಿ. ರಾಜಣ್ಣ ಹೇಳಿರುವಂತೆ 'ಹರ್ಷ' ಕಥೆ, ಕಥೆ ಮತ್ತು ಪ್ರಬಂಧಗಳೆರಡರ ಗುಣಗಳನ್ನೂ ಮೇಳವಿಸಿಕೊಂಡು ಅಚ್ಚುಕಟ್ಟಾಗಿ ಹೇಳಿರುವ ಕಥೆ. 'ಹರ್ಷ' ನಾಯಿಮರಿಯನ್ನು ಒಮ್ಮೆ ಪಾದ್ರಿಯೊಬ್ಬರು ಕೊಟ್ಟರೆಂದು ಒಂದುಕಡೆ, ಹೆಡ್ಮಾಸ್ಟರು ಕೊಟ್ಟರೆಂದು ಇನ್ನೊಂದು ಕಡೆ ಹೇಳುವ ಮಾತು ಮೊಸರನ್ನದಲ್ಲಿ ಕಲ್ಲು ಸಿಕ್ಕಿದಂತಾಗುತ್ತದೆ. ಈ ಕಥೆಯೂ ಸೇರಿದಂತೆ 'ಅಪಥ್ಯ' ಮತ್ತು 'ಸಿಕ್ಕು'ಗಳ ಅನಿರೀಕ್ಷಿತ ಅಂತ್ಯ ಸತ್ವಶಾಲಿ ಕಥೆಗಾರನಿಗೆ ಮಾತ್ರ ಸಾಧ್ಯ. 'ಅಪಥ್ಯ' ಕಥೆಯ ಹೆಸರು ಸೂಕ್ತವಲ್ಲದಿದ್ದರೂ ಈ ಕಥೆಯಲ್ಲಿ ಮತ್ತು 'ಹರ್ಷ' ಕಥೆಯಲ್ಲಿ ಹಂದಿ ಮತ್ತು ನಾಯಿಗಳ ಗುಣ ಸ್ವಭಾವಗಳನ್ನು ಚಿತ್ರಿಸುವಲ್ಲಿ ಕಥೆಗಾರರ ನಿರೀಕ್ಷಣಾ ಸಾಮರ್ಥ್ಯ ಎದ್ದು ಕಾಣುತ್ತದೆ. 'ಸಿಕ್ಕು' ಕಥೆಯ ಭಾವ, ಭಾಷೆ, ಪರಿಸರ, ಕ್ರಿಯೆ ಎಲ್ಲವೂ ಏಕಮುಖವಾಗಿ ಗಮಿಸಿ ಕಥೆಯನ್ನು ಪರಿಣಾಮಕಾರಿಯನ್ನಾಗಿಸಿವೆ. ಈ ಕಥೆಯ ಭಾಷಾ (ಗ್ರಾಮ್ಯ) ಪ್ರಯೋಗ, ಗಾದೆ ಮಾತುಗಳ ಬಳಕೆ ಗಮನಿಸುವಂಥದು. ಗ್ರಾಮೀಣ ಬದುಕಿನ ದಟ್ಟ ಅನುಭವದ ಹಿನ್ನೆಲೆಯೂ, ಗ್ರಾಂಥಿಕ, ಗ್ರಾಮ್ಯ ಭಾಷೆಗಳ ಮೇಲಿನ ಹದವರಿತ ಹಿಡಿತವೂ, ಸೌಂದರ್ಯ ಪ್ರಜ್ಞೆಯೂ ಇರುವ ಮಳಲಿ ವಸಂತ ಕುಮಾರರಿಂದ ನಾವು ಇನ್ನೂ ಉತ್ತಮ ಕಥೆಗಳನ್ನು ನಿರೀಕ್ಷಿಸಬಹುದು.

### ದೇವರುಗಳ ರಾಜ್ಯದಲ್ಲಿ

'ಅತ್ತ ಇತ್ತಗಳ ಸುತ್ತ ಮುತ್ತ' ಕಥಾ ಸಂಕಲನದಿಂದ ಪ್ರಸಿದ್ಧರಾಗಿರುವ ಬೊಳುವಾರು ಮಹಮದ ಕುಂಞ ಅವರ 'ದೇವರುಗಳ ರಾಜ್ಯದಲ್ಲಿ' ಒಂಬತ್ತು ಕಥೆಗಳ ಕಥಾಸಂಕಲನ. ಮುಸ್ಲಿಂ ಜನಾಂಗದ ದುಸ್ಥಿತಿ, ಅಜ್ಞಾನ ಇವುಗಳ ಚಿತ್ರಣಗಳೊಂದಿಗೇ ವೈಚಾರಿಕತೆ ಹಾಸುಹೊಕ್ಕಾಗಿರುವುದರಿಂದ ಇವರ ಕಥೆಗಳು ಪ್ರಾಮುಖ್ಯತೆಯನ್ನು ಪಡೆದುಕೊಳ್ಳುತ್ತವೆ. ಧಫನದ ಕಥೆ ಹೇಳುತ್ತಾ 'ಅಮ್ಮ ಮಸೀದಿಯ ಒಳಗಿದ್ದಳು. ನಾನು ಹೊರಗಿದ್ದೆ.' ಎಂದು ಬಂಡಾಯದ ಧ್ವನಿ ಎತ್ತುವ ಕಥೆಗಾರರು 'ಒಬ್ಬ ಜಾತಿಗೆಟ್ಟ ಹುಡುಗನ ತಾಯಿ ತೀರಿಕೊಂಡಳು ಜಾತಿ ಬಾಂಧವರು ಅವಳನ್ನು ಮಣ್ಣು ಮಾಡಿದರು.' ಎಂದು ಕಥೆಯನ್ನು ಮುಕ್ತಾಯಗೊಳಿಸುತ್ತಾರೆ. ಸಾಧಾರಣವಾಗಬಹುದಾಗಿದ್ದ ಈ ಕಥೆ ಕಥೆಯೊಡಲಲ್ಲಿ ಏಳುವ ಮುಸ್ಲಿಮನೊಬ್ಬ ವಿಚಾರವಾದಿಯಾಗುವುದು ಎಂದರೆ ಹಿಂದುವಾಗುವುದೇ ಎಂಬ ಪ್ರಶ್ನೆಯಿಂದ

ಹೊಸ ಆಯಾಮವನ್ನು ಪಡೆದುಕೊಳ್ಳುತ್ತದೆ. ಈ ಪ್ರಶ್ನೆ ಇನ್ನಷ್ಟು ಸಂಕೀರ್ಣವಾಗಿ 'ದಯವಿಟ್ಟು ಹೇಳುವಿರಾ' ಕಥೆಯಲ್ಲಿ ವ್ಯಕ್ತವಾಗುತ್ತದೆ. 'ಪಾರಾಟ' ಕಥೆಯಲ್ಲಿ ಸೀತಮ್ಮ ತನ್ನ ವೃತ್ತಿಯಲ್ಲಿ ತನ್ನ ಮಗಳು ಮುಂದುವರೆಯಬಾರದೆಂದು ಜಲಜಳನ್ನು ರಹೀಮನಿಗೆ ಕೊಟ್ಟಂತೆ 'ದಯವಿಟ್ಟು ಹೇಳುವಿರಾ' ಕಥೆಯಲ್ಲಿ ಇಸ್ಮಾಲಿಯನ್ನು ಹಿಂದು ಧರ್ಮಕ್ಕೂ ಅಥವಾ ಶಾಲಿನಿಯನ್ನು ಮುಸ್ಲಿಂ ಧರ್ಮಕ್ಕೂ ಮತಾಂತರಗೊಳಿಸಿ ಸಮಸ್ಯೆಯನ್ನು ಪರಿಹಾರಮಾಡಬಹುದಿತ್ತು. ಆದರೆ ಕಥೆಗಾರರ ಉದ್ದೇಶ ಅದಲ್ಲ. ಇಸ್ಮಾಲಿ ಇಸ್ಮಾಲಿಯಾಗಿಯೇ, ಶಾಲಿನಿ ಶಾಲಿನಿಯಾಗಿಯೇ ಒಟ್ಟಿಗೆ ಬಾಳುವಂಥ ಆರೋಗ್ಯಕರವಾದ ಸಮಾಜ ನಮ್ಮಲ್ಲಿದೆಯೆ? 'ಹಿಂದೂ ಹುಡುಗಿಯೊಬ್ಬಳನ್ನು ಹಾರಿಸಿಕೊಂಡು ಬಂದ ಇಸ್ಮಾಲಿಯನ್ನು ನಿಮ್ಮ ನಡುವೆ ಸಹಜವಾಗಿ ಬದುಕ ಬಿಡುವಿರಾ?' ಎಂಬ ಕಥೆಗಾರರ ಪ್ರಶ್ನೆ ಹಿಂದುಗಳನ್ನು ವಿಚಾರ ಮಾಡುವಂತೆ ಮಾಡಿದರೆ ಆಶ್ಚರ್ಯವಿಲ್ಲ. 'ಜನ ಗಣ ಮನ' ಕಥೆಯಲ್ಲಿ ವಿಧವೆ ಆಮಿನಾಬಿಯ ಮೇಲೆ ಮಗುವಿನ ಅಪಹರಣದ ಸುಳ್ಳು ಕೇಸನ್ನು ಹಾಕಿದಾಗ ಸಂವಿಧಾನದ ಪ್ರಕಾರ ಎಲ್ಲರೂ ಸಮಾಧಾನರಾಗಿದ್ದರೂ 'ಈ ಮಕ್ಕಿಗೆ ನಮ್ಮ ಲಾ ಎಪ್ಲೈ ಆಗುವುದಿಲ್ಲ. ಫ್ಯಾಮಿಲಿ ಪ್ಲಾನಿಂಗ್ ಕಂಪಲ್ಸರಿ ಅಲ್ಲ. ಅವ್ರ ಫೆಸ್ಟಿವಲ್ಸ್‌ಗೆ ನಮ್ಗೆ ಲೀವ್ ಯಾವ ಖರ್ಮಕ್ಕೆ' ಎಂದು ಜನ ಪ್ರತಿಕ್ರಿಯಿಸುವಲ್ಲಿ ಮುಸ್ಲಿಮರು ಎರಡನೇ ದರ್ಜೆಯ ಪ್ರಜೆಗಳಾಗಿರುವುದನ್ನು ಕಾಣಬಹುದು. ಇಂತಹುದೇ ಸಂಶಯ ಮುಸ್ಲಿಮರ ಬಗ್ಗೆ 'ಪ್ರವಾದಿಯ ಮುಖಚಿತ್ರ' ಕಥೆಯಲ್ಲಿದ್ದರೂ ಅದರ ಉದ್ದೇಶ ಮತೀಯ ಶ್ರದ್ಧೆಯನ್ನು ದುರುಪಯೋಗಪಡಿಸಿಕೊಳ್ಳುವ ಡಾಂಬಿಕತೆಯನ್ನು ಚಿತ್ರಿಸುವುದೇ ಆಗಿದೆ. ಮತೀಯ ಶ್ರದ್ಧೆಯನ್ನು ದುರುಪಯೋಗ ಪಡಿಸಿಕೊಳ್ಳುವಂತೆಯೆ ಧರ್ಮದ ರಕ್ಷಣೆಯೊಳಗಿದ್ದೇ ಲಫಂಗತನ ಮಾಡುವ ಧಾರ್ಮಿಕ ಗುರುಗಳ ಕಥೆಯನ್ನು 'ಗಂಟೆಯೊಂದು ಹೇಳಿದರೆ' ಕಥೆ ಹೇಳುತ್ತದೆ. ಈ ಗುಟ್ಟು ಈ ಕಥೆಯಲ್ಲಿ ಬಯಲಾಗುವುದು ಸ್ವಾರಸ್ಯಕರ ಸನ್ನಿವೇಶದಲ್ಲಿ. ಯಾವುದೇ ಧರ್ಮವಾದರೂ ಆ ಧರ್ಮದ ಶ್ರೀಮಂತರು ಆ ಧರ್ಮದ ಬಡವರನ್ನು ತಮ್ಮ ಏಳ್ಗೆಯ ಮೆಟ್ಟಿಲಾಗಿ ಬಳಸಿಕೊಳ್ಳುತ್ತಾರೆ. ಬಡವರು ಶ್ರೀಮಂತರ ಕೈಯಿನ ದಾಳಗಳು ಮಾತ್ರ ಎಂಬ ನಿಷ್ಠುರ ಸತ್ಯವನ್ನು ನಿಷ್ಠುರ ವ್ಯಂಗ್ಯದಲ್ಲಿ 'ದೇವರುಗಳ ರಾಜ್ಯದಲ್ಲಿ' ಕಥೆಯಲ್ಲಿ ಕಥೆಗಾರರು ನಿರೂಪಿಸಿದ್ದಾರೆ. 'ಸೈತಾನ' ಮತ್ತು 'ಮುತ್ತುಚ್ಚೇರ' ಮುಸ್ಲಿಂ ಜನಾಂಗದ ಮತ್ತೆರಡು ಮುಖಗಳನ್ನು ತೆರೆದು ತೋರುವ ಕಥೆಗಳು. ಅಹಮದ ತನಗೆ ಮದುವೆಯಾಗಿ ಆರು ವರ್ಷಗಳಾದರೂ ಮಕ್ಕಳಾಗಿಲ್ಲವೆಂಬ ಅರಿವನ್ನು ದಲ್ಲಾಳಿ ಹಸನ್ ಮಾಕ್ರಿಯಿಂದ ಪಡೆದು ಎರಡನೆ ಮದುವೆಗೆಂದು ಹೆಣ್ಣು ನೋಡಲು ಹೋಗಿ ದುರಂತವನ್ನು ತಂದುಕೊಂಡ ಕಥೆ 'ಸೈತಾನ'. ಹೆಣ್ಣಿನ ಮನೆಯಲ್ಲಿ ಬಾಗಿಲ ದಾರಂದ ಅಹಮದನ ಹಣೆಗೆ ಬಡಿದು ಮುಂದಾಗುವ ದುರಂತದ ಸೂಚನೆಯನ್ನು ನೀಡುತ್ತದೆ. ಅಹಮದನ ಹೆಂಡತಿ

ಆಮಿನ ಗಂಡನನ್ನು ವಿರೋಧಿಸಲು ಧೈರ್ಯ ಸಾಲದೆ ಒಳಗೊಳಗೇ ನೊಂದು ಅಹಮದ ಹೆಣ್ಣು ನೋಡಲು ಮಂಜೇಶ್ವರಕ್ಕೆ ಹೋದಂದೇ ಮಾಸಿಕ ಅಸ್ವಾಸ್ಥ್ಯಗೀಡಾಗುತ್ತಾಳೆ. ಇದರ ಕಾರಣವನ್ನು ಪತ್ತೆಮಾಡಿ ಇವರ ಸಂಸಾರವನ್ನು ನೇರಗೊಳಿಸುವುದರಷ್ಟರೊಳಗೇ ಘಟನೆಗಳು ಮಿಂಚಿನವೇಗದಲ್ಲಿ ಜರುಗಿ ಆಮಿನ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. 'ಜೀವವಿಲ್ಲದ ಸೈತಾನನನ್ನು ಓಡಿಸುವ ದಾರಿಗೊತ್ತಿದ್ದ ಮಾಸ್ಟರಿಗೆ ಈಗ ಜೀವಂತ ಸೈತಾನ ದೊಡ್ಡ ಸವಾಲಿನಂತೆ ಎದುರು ಬಂದಿತ್ತು' ಎಂಬ ಕಥೆಗಾರರ ಮಾತಿನಲ್ಲಿ ವಿಚಾರವಾದಿ ವಾರಿಯರ್ ಮಾಸ್ಟ್ರಿಗೆ, ತಮ್ಮ ಧರ್ಮದಲ್ಲಿ ನಾಲ್ಕು ಮದುವೆಗೆ ಅವಕಾಶವಿದೆಯೆಂಬ ಒಂದೇ ಕಾರಣದಿಂದ ಮತ್ತೊಂದು ಮದುವೆಗೆ ಹೊರಟಿದ್ದ ಅಹಮದನಿಗೆ ತಿಳಿಯ ಹೇಳುವುದು ಸಾಧ್ಯವಿತ್ತು. ಆದರೆ ಅದನ್ನೊಂದು ಮತೀಯ ಪ್ರಶ್ನೆಯನ್ನಾಗಿ ತೆಗೆದುಕೊಂಡ ಜಮಾತ್ ಪ್ರೆಸಿಡೆಂಟ್ ರಹೀಂ ಮತ್ತು ದಲ್ಲಾಳಿ ಹಸನ್ ಮುಕ್ರಿಯನ್ನು ತಿದ್ದುವುದು ಅಸಾಧ್ಯವಾಗಿತ್ತು. ಈ ಕಥೆಯಲ್ಲಿ ಮುಸ್ಲಿಂ ಜನಾಂಗದ ಅಜ್ಞಾನವನ್ನೂ ಧಾರ್ಮಿಕ ಕಟ್ಟುಪಾಡುಗಳ ಮೂಲಕ ಅವರನ್ನು ಶೋಷಿಸುತ್ತಿರುವ ಧರ್ಮಾಧಿಕಾರಿಗಳ ಕ್ರೂರ ಹಿಡಿತವನ್ನೂ ವಿವರವಾಗಿ, ಪರಿಣಾಮಕಾರಿಯಾಗಿ ಕಥೆಗಾರರು ಕೊಟ್ಟಿದ್ದಾರೆ. 'ಮುತ್ತುಚ್ಚೇರ' ಕಥೆಯ ರುಖಿಯಾಬಿ ಮತ್ತು ಬಿರಾನ್ ಕೋಯ ಇಬ್ಬರೂ ಧಾರ್ಮಿಕ ಛದ್ಮವೇಶದ ಬಂಡವಾಳಶಾಹಿಯ ಶೋಷಣೆಗೆ ತುತ್ತಾದವರು. ರುಖಿಯಾಬಿಯ ಮಗಳು ಉನ್ನೀಸಳ'ಅರಬಿ'ಮದುವೆಯನ್ನು ತಪ್ಪಿಸಲು ಯತ್ನಿಸುವ ಯೂತ್‌ಲೀಗಿನ ಸದಸ್ಯರ ಪೊಳ್ಳುತನ ಬಯಲಾಗುವುದರೊಂದಿಗೆ ಪರಿಸ್ಥಿತಿಯು ಒತ್ತಡಕ್ಕೆಸಿಕ್ಕಿ ಇನ್ನೇನು ಇನ್ನೇನು 'ನಿಖಾ' ಆಗಿಹೋಯಿತು ಎನ್ನುವಾಗ ನೀಲಾಕಾಶದಿಂದ ಬರಸಿಡಿಲೆರಗಿದಂತೆ ರುಖಿಯಾಬಿಯ ಪ್ರತಿಭಟನೆ ಬರುತ್ತದೆ. 'ಧರ್ಮಸಮ್ಮತವಾದ ಮಂಗಳ ಕಾರ್ಯವನ್ನು ಧಿಕ್ಕರಿಸಿ ಬೊಬ್ಬಿರಿಯುತ್ತಾ ಮೆಟ್ಟಿಲಿಳಿದು ಹೋಗುತ್ತಿರುವ ಕೂಲಿ ಕೆಲಸದ ಹೆಂಗಸೊಬ್ಬಳನ್ನು ತಡೆದು ನಿಲ್ಲಿಸುವ ಎದೆಗಾರಿಕೆ ಚಾವಡಿಯೊಳಗಿದ್ದ ಯಾವ ಗಂಡಸಿನಲ್ಲೂ ಇರಲಿಲ್ಲ.' 'ಮುತ್ತುಚೇರದ ಇತಿಹಾಸದಲ್ಲೇ ಪ್ರಪ್ರಥಮ ಬಾರಿಗೆ ಒಬ್ಬಳು ಹೆಣ್ಣು ಪ್ರತಿಭಟಿಸಿದಳು! ಪ್ರತಿಭಟಿಸ ಬಯಸುವ ನೂರಾರು ಹೆಣ್ಣುಗಳ ಮೊದಲ ಧ್ವನಿಯಂತೆ...'ಎಂದು ಮುಕ್ತಾಯವಾಗಿರುವ ಕಥೆಗೆ ಬೇರೆ ವ್ಯಾಖ್ಯಾನ ಬೇಕಿಲ್ಲ. 'ಮುತ್ತುಚ್ಚೇರ' ಯಾವುದೇ ದೃಷ್ಟಿಯಿಂದ ನೋಡಿದರೂ ಈ ಸಂಕಲನದ ಅತ್ಯುತ್ತಮ ಕಥೆ. ಇದುವರೆಗೂ ಅಷ್ಟಾಗಿ ಪರಿಚಿತವಲ್ಲದ ಮುಸ್ಲಿಂ ಜನಾಂಗದ ಬಡತನ, ಅಜ್ಞಾನ, ಧಾರ್ಮಿಕ ಕುರುಡು ನಂಬಿಕೆ ಇತ್ಯಾದಿಗಳನ್ನು ವೈಚಾರಿಕ ಹಿನ್ನೆಲೆಯಲ್ಲಿ ನೋಡುತ್ತಾ ಬಂಡಾಯದ ಧ್ವನಿ ಎತ್ತುತ್ತಿರುವ ಬೊಳುವಾರು ಮಹಮದ ಕುಂಞ ಅವರಿಂದ ಇನ್ನೂ ಹೆಚ್ಚಿನದನ್ನು ಓದುಗರು ನಿರೀಕ್ಷಿಸುತ್ತಾರೆ.

## ಬೇನ್ಯಾ

'ಬೇನ್ಯಾ' ಯಶವಂತ ಚಿತ್ತಾಲರ ಆರು ಕಥೆಗಳ ಸಂಕಲನ. ಈ ಸಂಕಲ ಮತ್ತು ಮುಂದೆ ವಿಮರ್ಶಿಸುವ 'ಚಿತ್ತಾಲರ ಕಥೆಗಳು' ಸಂಗ್ರಹದ ವಿಮರ್ಶೆಯಲ್ಲಿ 'ಬೇನ್ಯಾ'ದ ಮುನ್ನುಡಿ ಮತ್ತು ಚಿತ್ತಾಲರ ಕತೆಗಳಲ್ಲಿನ 'ಹೃದಯವುಳ್ಳ ಹಾದಿಯಲ್ಲಿ' (ನಾನು ಲೇಖಕನಾಗಿ ಬೆಳೆದು ಬಂದ ರೀತಿ)ನ ಚಿತ್ತಾಲರ ಮಾತುಗಳನ್ನೇ ಶೇಕಡ ಎಪ್ಪತ್ತೈದಕ್ಕೂ ಹೆಚ್ಚಾಗಿ ಆವರಣ ಚಿಹ್ನೆಗಳನ್ನು ಉಪಯೋಗಿಸದೆ ಬಳಸಿಕೊಂಡಿದ್ದೇನೆ. 'ಬೇನ್ಯಾ'ದಲ್ಲಿನ 'ಸಾವಿತ್ರಿ' ಹಾಗೂ 'ನನ್ನ ತಮ್ಮನ ಕಥೆ' ಚಿತ್ತಾಲರ ಕಥೆಗಳಲ್ಲಿನ ಹೊಸ ತಿರುವೊಂದನ್ನು ಸೂಚಿಸುವಂಥವು. 'ನೀವೇ ಬರೆಯಬೇಕಾಗಿದ್ದ ಕತೆ' ಇಂಥ ತಿರುವನ್ನು ಕಥೆಗಾರರೇ ತಂದುಕೊಳ್ಳುವುದಕ್ಕಾಗಿಯೆ ಬರೆದಂತಿದೆ. ಕಥೆಯೊಂದನ್ನು ಹೇಳುತ್ತಾ ಕಥಾಪ್ರಕಾರದ ಬಗೆಗೂ ಹೇಳತೊಡಗುವ ಈ ಕಥೆ ಮೇಲೆ ಉಲ್ಲೇಖಿಸಿದ ಕಥೆಗಳಿಗೆ ಬರೆದ ಮುನ್ನುಡಿಯಂತಿದೆ. ಈ ಸಂಗ್ರಹದ 'ಬೇನ್ಯಾ' ಹೊರತು ಉಳಿದೆಲ್ಲ ಕಥೆಗಳೂ ಒಂದಲ್ಲ ಒಂದು ರೀತಿಯಿಂದ ಸಾವಿನ ಬಗ್ಗೆ ಸಾವು-ಬದುಕಿನ ಬಗ್ಗೆ, ಸಾವಿನಾಚೆಯ ಬದುಕಿನ ಬಗ್ಗೆ ಚಿಂತಿಸುತ್ತವೆ. 'ನೀವೇ ಬರೆಯಬೇಕಾಗಿದ್ದ ಕತೆ'ಯಲ್ಲಿ ಹೆಂಡತಿ ನೀನಾಳ ಕೊಲೆಯ ಆರೋಪದಿಂದ ಬಿಡುಗಡೆಯಾದ ಜಿತೂ ಆತ್ಮಹತ್ಯೆ ಮಾಡಿಕೊಳ್ಳುತ್ತಾನೆ. ಏಕೆಂದರೆ 'ಅವಳ ಪ್ರೀತಿ ಬೆಳಗಿಸಿದ ಅವನ ಕಣ್ಣ ಒಳಗಿನ ಬೆಳಕೇ ನಂದಿಹೋಗಿತ್ತು!' ಆದರೆ 'ನೀನಾಳ ಸಾವೇ ಈ ಆತ್ಮಹತ್ಯೆಗೆ ಕಾರಣವಾಗಿದ್ದರೆ ತನಿಖೆಯನಂತರವೇ ಏಕೆ ಸಾಯಬೇಕಿತ್ತು? ಅದೂ ಕೂಡ ನಿರಪರಾಧಿಯೆಂದು ನಿರ್ಣಯವಾದ ದಿನವೆ? ಎಂಬ ಕಥೆಗಾರರ ಪ್ರಶ್ನೆ ನಮ್ಮನ್ನು ಇನ್ನಷ್ಟು ಗಾಢ ಆಲೋಚನೆಗೆ ಒಳಗುಮಾಡುವಂತೆಯೆ 'ಪ್ರಬಂಧ', 'ಸಂಪಾದಕೀಯ' ಮೊದಲಾದ ಇತರ ಪ್ರಕಾರಗಳಿಂದ ಭಿನ್ನವಾಗುವ, ಮುಂದಿನ ಚಿತ್ತಾಲರ ಕಥೆಗಳಲ್ಲಿ ಕಥೆಗಾರ ಮತ್ತು ಪಾತ್ರಗಳು ಮುಖಾಮುಖಿಯಾಗುವ ಮತ್ತು ಓದುಗನನ್ನೂ ಸೆಳೆದುಕೊಳ್ಳುವ ಸೂಚನೆಗಳು ಇಲ್ಲಿಯೆ ಕಂಡು ಬರುತ್ತದೆ. 'ಪುರುಷೋತ್ತಮನ ಮಗ ದತ್ತಾತ್ರೇಯ ಅವನ ಮಗಳು ಸಾವಿತ್ರಿ' ಕಥೆಯಲ್ಲಿ ಪುರುಷೋತ್ತಮನ ತಾರೀಖು ಇಲ್ಲದ ಮೂರು ವರ್ಷಗಳಷ್ಟು ಹಿಂದಿನ ಪತ್ರದಿಂದ ಕಥಾನಾಯಕನ ನೆನಪಿನ ಸುರುಳಿಗಳು ಬಿಚ್ಚಿಕೊಳ್ಳುತ್ತಾ ಹೋಗುತ್ತವೆ. ಹನೇಹಳ್ಳಿಯ ಅನೇಕರಿಗೆ ಕಂಡು ಕೂಡ ಗೊತ್ತಿರದ ಒಂದು ನೆಲದ ತುಂಡು ದಾಯಾದಿಗಳ ನಡುವಿನ ತಲೆಮಾರುಗಳ ಹಗೆತನಕ್ಕೆ ಕಾರಣವಾಗುವುದನ್ನು ವಿವರಿಸುತ್ತಲೆ ತನ್ನ ದಾಯಾದಿ ಪುರುಷೋತ್ತಮನೊಡನೆ ತಾನು ಕಳೆದ ಬಾಲ್ಯದ ಸವಿನೆನಪಿನಿಂದ ಅವನ 'ಸಾವನ್ನು ನಂಬುವುದಾಗಲಿ ಗ್ರಹಿಸುವುದಾಗಲಿ ತನಗೆ ಸಾಧ್ಯವಾಗಲಿಲ್ಲ' ಎಂಬ ಅರಿವಿನಿಂದ ಖುಷಿಯಾಗಿ, ಗಿಡಗಳು: ಇದ್ದ ಸಣ್ಣ ಜಾಗದಲ್ಲೂ ಜೀವತುಂಬಿ ಸೂಸುವ ಪ್ರಸನ್ನತೆಯ ಸಂಕೇತಗಳೆಂದು ಗ್ರಹಿಸಿ, ತಲೆಮಾರುಗಳ ಹಗೆತನದ ಕಾರಣದಿಂದ ಸರಣಿಯಂತೆ ನಡೆಯುವ ಆತ್ಮಹತ್ಯೆಗಳನ್ನು ತಪ್ಪಿಸಲು,

ಪುರುಷೋತ್ತಮನ ಮಗ ಆತ್ಮಹತ್ಯೆ ಮಾಡಿಕೊಂಡ ದತ್ತಾತ್ರೇಯನ ಹೆಂಡತಿ ಮತ್ತು ದತ್ತಾತ್ರೇಯನ ಮರಣಾನಂತರ ಹುಟ್ಟಿದ್ದ ಸಾವಿತ್ರಿಯನ್ನು ಕರೆತಂದು ಅವರಿಗೆ ಅಗತ್ಯವಾದ ರಕ್ಷಣೆ ಕೊಡಲು ಕಥಾನಾಯಕ ಮುಂದಾಗುತ್ತಾನೆ. 'ಸಾವಿತ್ರಿ' ಹೆಸರು ಅರ್ಥಪೂರ್ಣವಾದುದು. ಯಮನೊಡನೆ ಹೋರಾಡಿ ಪತಿಯನ್ನುಳಿಸಿಕೊಂಡಂತೆ ಬಹುಶಃ ಮುಂದೆ ಇವಳಿಂದಾಗಿ ಎರಡು ಮನೆತನಗಳ ನಡುವಣ ಹಗೆತನ ಮತ್ತು ಆತ್ಮಹತ್ಯೆ ನಿಲ್ಲಲಿ ಎಂಬ ಆಶಯವಿದೆ. 'ನನ್ನ ತಮ್ಮನ ಕತೆಗೆ ಹೊಸ ಜೀವ ಬಂದಾಗ' ಕಥೆಯಲ್ಲಿ ಕಥಾನಾಯಕನ ತಮ್ಮ ಸದಾ ಸಾವಿನಂಚಿನಲ್ಲಿದ್ದೂ ಬದುಕಿನ ಬಗ್ಗೆ ಮಾತನಾಡುವ '......ಸಾವು ಎಂದರೆ ನಾವು ತಿಳಿದುಕೊಂಡಂತೆ ಬಾಳಿನ ಕೊನೆಯಲ್ಲ-ಆದರಾಚೆಯ ಗಡಿಯಾಗಿದೆ...' ಎಂಬ ಮಾತನ್ನು ಸಮರ್ಥಿಸಲೆಂಬಂತೆ ಕಥಾನಾಯಕನ ನೆರೆಯವನಾದ 'ಶಾಪೂರಜೀ ಪಾಲ್ಲಂಜೀ ಕೊನೆಗೂ, ಹೆಂಡತಿಯ ಪ್ರೀತಿಗಾಗಿ, ಸಂಪೂರ್ಣವಾಗಿ ಗುಣಹೊಂದಿ ಆರೋಗ್ಯವನ್ನು ತಿರುಗಿ ಪಡೆದ. ಆಮೇಲೆ ಸತ್ತ'. 'ಒಂದು ಹೆಸರಿನ ಕತೆ' ಸಾವಿನ ಬಗೆಗಿನ ಒಂದು ವ್ಯಾಖ್ಯಾನವಿದೆ. ಒಬ್ಬ ವ್ಯಕ್ತಿಯ ಭೌತಿಕವಾದ ಸಾವು ಸಾವೇ ಅಥವಾ ಅವನ ನೆನಪನ್ನು ನಮ್ಮ ನೆನಪಿನ ಕೋಶದಿಂದ ಕಿತ್ತೆಸೆಯುವುದು ಆ ವ್ಯಕ್ತಿಯ ಸಾವೇ ಎಂಬ ವಿಚಾರವನ್ನು ಕಥೆಗಾರರು ಓದುಗರ ಮುಂದಿಡುತ್ತಾರೆ. ತನಗೆ ಹುಟ್ಟುವ ಮಗು ಗಂಡಾದರೆ ಅದಕ್ಕೆ ಪುರುಷೋತ್ತಮನೆಂದು ಹೆಸರಿಡಬೇಕೆಂದಿದ್ದವನು, ಹುಟ್ಟುವ ಮಗು ಗಂಡಾದರೆ 'ಆನಂದ' ಎಂಬ ಹೆಸರಿಡೋಣವೆಂಬ ಹೆಂಡತಿಯ ಮಾತಿಗೆ ಹೂಂಗುಟ್ಟಿ 'ಆಗ ಮೊದಲಬಾರಿಗೆ ಪುರುಷೋತ್ತಮ ಸತ್ತ ಎಂದೆನಿಸಿ' ಕಥಾನಾಯಕ ಅಸ್ವಸ್ಥ ನಾಗುತ್ತಾನೆ. 'ಕತೆಯಾದಳು ಹುಡುಗಿ' ಕಥೆಯ ಮುನ್ಸೂಚನೆ ಈ ಕಥೆಯಲ್ಲಿಯೆ ಇರುವುದನ್ನು ಗಮನಿಸಬಹುದು. ಸಾವಿನ ಬಗೆಗಿನ ಮತ್ತೊಂದು ವಿಚಾರ ಅಥವಾ ಮುಖವನ್ನು 'ಅಪಘಾತ'ದಲ್ಲಿ ಕಾಣಬಹುದು. ಪರಸ್ಪರರ ಸಂಬಂಧಗಳೂ ಸಾವಿನ ಅನುಭವದ ತೀವ್ರತೆಯಲ್ಲಿ ಗಣನೀಯ ಪಾತ್ರವಹಿಸುತ್ತವೆಂಬ ಮಾತನ್ನು ಸೊಗಸಾಗಿ ಈ ಕಥೆಯಲ್ಲಿ ಕಥೆಗಾರರು ಚಿತ್ರಿಸಿದ್ದಾರೆ. ಒಟ್ಟಿನಲ್ಲಿ ಈ ಕಥೆಗಳಲ್ಲಿ ಕಥೆಗಾರರು ಸಾವಿನ ಬಗೆಗೆ ಜಿಜ್ಞಾಸೆಯನ್ನು ನಡೆಸಿದ್ದಾರೆ. ಈ ಸಂಗ್ರಹದ 'ಬೇನ್ಯಾ' ಉಳಿದ ಕಥೆಗಳಿಂದ ಭಿನ್ನವಾದುದು. ಈ ಕಥೆಗೆ 'ಸಂಜಯ ಗಾಂಧಿ ಸ್ವಚ್ಛ ದಿಲ್ಲಿ'ಯ ಬಗ್ಗೆ ಕಂಡ ಕನಸಿನಲ್ಲಿ ಸಿಕ್ಕಿಬಿದ್ದ ಬಡಪಾಯಿ ಮನೆಗಳು, ಝೋಪಡ ಪಟ್ಟಿಗಳು, ಬುಲ್ಡೋಜರುಗಳ ನಿರ್ದಯ ಬಲದ ಕೆಳಗೆ ಉಧ್ವಸ್ತಗೊಂಡ ಭೀಕರ ರೀತಿ... ಪ್ರಚೋದನೆಯಾಗಿದೆ'. ಸ್ವಚ್ಛ ದಿಲ್ಲಿಯಂಥ ಕಾರ್ಯಕ್ರಮದಿಂದಾಗಿ ಭಿಕ್ಷುಕ ಹನ್ನೆರಡು ವರ್ಷದ ಬಾಲಕ ಟ್ರಕ್ಕಿನಲ್ಲಿ ಸಾಗಿಸಲ್ಪಡುವಾಗ 'ಇಷ್ಟು ದಿನ ಹೆದರಿಕೊಂಡು ದೂರವೆ ಉಳಿದ ಇನ್ನು ಯಾರದೋ ಕನಸಿನಲ್ಲಿ ನನಗೇ ಗೊತ್ತಾಗದ ಹಾಗೆ ಬಂದು ಸೇರಿಬಿಟ್ಟಿದ್ದೇನೆಯೆ ?' ಎನಿಸುತ್ತದೆ. ದೊಡ್ಡವರ ದೊಡ್ಡ ಕನಸುಗಳಿಗೆ ಉಧ್ವಸ್ತ ವಾಗುವ ಇಂತಹ ಬಲಹೀನ ನಿರ್ಗತಿಕರ ಕಥೆಯನ್ನು ಪರಿಣಾಮಕಾರಿಯಾಗಿ

ನಿರೂಪಿಸಿದ್ದಾರೆ. ಒಟ್ಟಾರೆ ಈ ಸಂಗ್ರಹದಲ್ಲಿನ ಕಥೆಗಳು ತಮ್ಮ ಜಿಜ್ಞಾಸೆಯಿಂದ ನಿರೂಪಣಾ ವಿಧಾನದಿಂದ ಓದುಗರನ್ನೂ ವಿಚಾರಕ್ಕೆ ಹಚ್ಚುತ್ತವೆ.

ಚಿತ್ತಾಲರ ಕತೆಗಳು

'ಸಂದರ್ಶನ', 'ಅಬೋಲೀನ', 'ಆಟ', 'ಕತೆಯಾದಳು ಹುಡುಗಿ' ಮತ್ತು ಬೇನ್ಯಾ ಕಥಾಸಂಗ್ರಹಗಳಿಂದ ಒಟ್ಟು ಮೂವತ್ತುಮೂರು ಕಥೆಗಳಿಂದ ಕೂಡಿದೆ ಯಶವಂತ 'ಚಿತ್ತಾಲರ ಕತೆಗಳು'. 'ಬೇನ್ಯಾ' ಸಂಗ್ರಹದ 'ಪುರುಷೋತ್ತಮನ ಮಗ ದತಾತ್ರೇಯ ಆವನ ಮಗಳು ಸಾವಿತ್ರಿ' ಮತ್ತು 'ನನ್ನ ತಮ್ಮನ ಕತೆಗೆ ಹೊಸ ಜೀವ ಬಂದಾಗ' ಈ ಎರಡು ಕಥೆಗಳನ್ನು 'ಬೇನ್ಯಾ' ಕಥಾಸಂಗ್ರಹದ ವಿಮರ್ಶೆ ಯಲ್ಲೇ ನೋಡಿರುವುದರಿಂದ ಅವುಗಳನ್ನು ಬಿಟ್ಟು ಉಳಿದವುಗಳನ್ನು ಇಲ್ಲಿ ನೋಡಲಾಗುತ್ತದೆ.

ಚಿತ್ತಾಲರು ಕಥೆಗಾರರಾದ 'ಬೊಮ್ಮಿಯ ಹಲ್ಲು ಹೊರೆ' ಯಿಂದ ಇತ್ತೀಚಿನ ಅವರ ಕಥೆಗಳ ಹರಹಿನಲ್ಲಿ ಅವರ ಬೆಳವಣಿಗೆಯ ಹಂತಗಳನ್ನು ಗುರುತಿಸುತ್ತಾ ಹೋಗಬಹುದಾದರೂ ಅವುಗಳನ್ನು ಕುರಿತ ಗಾಢ ಚಿಂತನೆ, ತೀವ್ರ ವಿಮರ್ಶೆ ಆವ ಶ್ಯಕವಾದರೂ 'ಸಾಹಿತ್ಯ ವಾರ್ಷಿಕ' ದಂಥ ಕೃತಿಯಲ್ಲಿ ಸ್ಥಳಾಭಾವದಿಂದ ಅದು ಸಾಧ್ಯವಾಗಲಾರದು.

೧೯೪೪ ರಲ್ಲಿ 'ಬೊಮ್ಮಿಯ ಹುಲ್ಲು ಹೊರೆ' ಕಥೆಯನ್ನು ಬರೆದು ಕಥೆಗಾರರಾದ ಚಿತ್ತಾಲರು ಮಾಸ್ತಿಯವರ ಸಂಪ್ರದಾಯದಲ್ಲೇ ಕಥೆಗಳನ್ನು ಬರೆಯತೊಡಗಿದರು. ಸಾಮಾಜಿಕವಾಗಿ ನಿಕೃಷ್ಟರು ಅಥವಾ ಕೆಳಹಂತದವರು ಎಂಬುವರಲ್ಲಿಯೂ ಇವರು ಮಾನವೀಯ ಗುಣಗಳನ್ನು ಒಳ್ಳೆಯ ಅಂಶಗಳನ್ನು ಎತ್ತಿ ತೋರುವುದೇ ಆ ಕಥೆಗಳ ಪ್ರಧಾನ ಗುರಿಯಾಗಿದೆ. ಬಡ ವೇಶ್ಯೆಯಲ್ಲೂ ಒಬ್ಬ ತಾಯಿ ಹೃದಯವನ್ನು ಕಾಣುವ 'ಉತ್ತಮಿ', ಅಂತಃಕರಣಪೂರ್ವಕವಾಗಿ ಮೃದುವಾಗಿ ಹೇಳಿದ ಹಿತವಚನದಿಂದ ತನ್ನ ತಪ್ಪನ್ನು ತಿದ್ದಿಕೊಳ್ಳುವ 'ಕಳ್ಳ ಗಿರಿಯಣ್ಣ' ಅಂಥ ಕಥೆಗಳು.

'ಒಂದು ತತ್ವದ ಸಲುವಾಗಿ' ಕಥೆ ತತ್ವದ ಮಾತನ್ನು ಮಾತಿಗಷ್ಟೇ ಉದಹ ರಿಸುತ್ತ ವ್ಯಾವಹಾರಿಕವಾಗಿ ಅದನ್ನು ಅವಜ್ಞೆಗೈಯುವ ಮೇಲುವರ್ಗದ ಮತ್ತು ಕೆಳವರ್ಗದ ವ್ಯಕ್ತಿಗಳಿಬ್ಬರ ಸ್ವಭಾವವನ್ನು ಚಿತ್ರಿಸುವ ಕಥೆ. ಇದೇ ಗುಂಪಿಗೆ ಸೇರಿ ಸಬಹುದಾದ ಕಥೆಗಳು 'ಮಲ್ಲಿನಾಥ' ಮತ್ತು 'ಗಾನಪ್ರಿಯ ಶಂಭುಶಾಸ್ತ್ರಿ'. 'ಮಲ್ಲಿನಾಥ'ದ ಉಗ್ಗಾಭಟ್ಟ ಸಾಹಿತ್ಯದ ಬಗ್ಗೆ ಏನೂ ತಿಳಿಯದಿದ್ದರೂ, ತಾನು ಪ್ರಸ್ತಾಪಿಸುತ್ತಿರುವ ಕೃತಿಯ ಬಗ್ಗೆ ಮಾಡುವ ವಿಮರ್ಶೆ,'ಗಾನಪ್ರಿಯ ಶಂಭುಶಾಸ್ತ್ರಿ' ತಾನು ಕಾಣದ ಸುಗುಣಾಬಾಯಿಯ ಗಾನಕಲೆಯ ಬಗ್ಗೆ ಮಾಡುವ ಭಾಷಣ ಇವು ಕಥಾಂತ್ಯದಲ್ಲಿ ವ್ಯಕ್ತವಾಗಿ ಅವರ ಪೊಳ್ಳುತನ ಹೋರಬೀಳುತ್ತದೆ. ಅವರ ಅಪಾಢ

ಭೂತಿತನದ ಬಗೆಗೆ ನವುರಾದ ವ್ಯಂಗ ಈ ಕಥೆಗಳಲ್ಲಿದೆ. ಈ ಗುಂಪಿಗೇ ಸೇರಿಸಬಹುದಾದ ಮತ್ತೆರಡು ಕಥೆಗಳೆಂದರೆ 'ಗುಂಡಾಭಟ್ಟರ ಮಡಿ' ಮತ್ತು 'ಮುಕುಂದನ ದಾಕ್ಷಿಣ್ಯ'. ಅತಿಯಾಗಿ ಮಡಿಯ ಆಚರಣೆಯಿಂದಾಗಿ ನಮ್ಮ ಕನಿಕರಕ್ಕೂ ಪಾತ್ರರಾಗುವ ಗುಂಡಾಭಟ್ಟ ಅವರ ಆರು ವರ್ಷದ ಮಗನಿಂದಾಗಿ ಊರೆಲ್ಲರ ಹಾಸ್ಯದ ವ್ಯಕ್ತಿಯಾಗುತ್ತಾರೆ. 'ಮುಕುಂದನ ದಾಕ್ಷಿಣ್ಯ' ಮಾಸ್ತಿಯವರ ರಂಗಪ್ಪನ ಕಥೆಗಳನ್ನು ನೆನಪಿಗೆ ತರುತ್ತದೆ. ತನ್ನ ಅತಿಯಾದ ನಾಚಿಕೆಯ ಸ್ವಭಾವದಿಂದಾಗಿ ಆತ ಒಳಗಾಗುವ ತೊಂದರೆಗಳು ಓದುಗರನ್ನು ಹೃದಯತುಂಬಿ ನಗುವಂತೆ ಮಾಡುತ್ತವೆ.

'ಬೊಮ್ಮಿಯ ಹುಲ್ಲು ಹೊರೆ' ಶೋಷಣೆಯನ್ನು ವಸ್ತುವಾಗುಳ್ಳ ಕಥೆ. ಬೊಮ್ಮಿಯ ಜೊತೆಯಲ್ಲಿ ಆತ್ಮೀಯವಾಗಿ ಮಾತನಾಡುತ್ತಲೇ ಹುಲ್ಲುಹೊರೆಯನ್ನು ಕಡಿಮೆ ಕ್ರಯಕ್ಕೆ ಕೊಳ್ಳುವುದಲ್ಲದೆ, ಬೇರೆ ಕೆಲಸವನ್ನೂ ಮಾಡಿಸಿಕೊಂಡು, ನಾಯಿ ಬಾಯಿ ಹಾಕಿದ ಅನ್ನವನ್ನು ಔದಾರ್ಯದಿಂದ ಕೊಡುವಂತೆ ಕೊಡುವ ಶಂಕರರಾಯರ ಪತ್ನಿಯ ಬಗ್ಗೆ ಅಸಹ್ಯ ಉಂಟಾಗುತ್ತದೆ. ಬೊಮ್ಮಿಗೆ ತಾನು ಶೋಷಣೆಗೊಳಗಾಗುತ್ತಿರುವುದರ ಅರಿವಿಲ್ಲದಿರುವುದು ಈ ಕಥೆಯ ವೈಶಿಷ್ಟ್ಯ.

'ತಪ್ಪಿದಗುರಿ' ಮತ್ತು 'ರಾಧಕ್ಕನ ಮನೋರಥ' ಕಥೆಗಳಲ್ಲಿ ತಮ್ಮ ಹೆಣ್ಣು ಮಕ್ಕಳಿಗೆ ಹೇಗಾದರೂ ಮಾಡಿ ಮದುವೆ ಮಾಡಬೇಕೆಂಬ ತಾಯಂದಿರ ಕಳಕಳಿಯನ್ನು ನೋಡುತ್ತೇವೆ. ಆ ಕಳಕಳಿಯಿಂದಾಗಿ 'ಹೆರವರಿಂದ ನಮ್ಮ ಕೆಲಸ ಆಗಬೇಕಾದರೆ ಅವರನ್ನೂ ಸ್ವಲ್ಪ ಹೊಗಳಬೇಕು. ಇದ್ದುದರೊಡನೆ ಇಲ್ಲದ್ದನ್ನೂ ತುಸು ಹೇಳಬೇಕಾಗುತ್ತದೆ' ಎಂದು 'ತಪ್ಪಿದ ಗುರಿಯ' ಮುಕ್ತಳ ತಾಯಿ ವಿವಾಹಿತ ದೇವೇಂದ್ರನನ್ನೇ ಆವನ ತಮ್ಮ ಅವಿವಾಹಿತ ಮೋಹನನೆಂದು ಅವನೆದುರು ತನ್ನ ಮಗಳ ಗುಣಗಾನ ಮಾಡುವುದು, 'ರಾಧಕ್ಕನ ಮನೋರಥ'ದಲ್ಲಿ ತನ್ನ ದೂರದ ಬಂಧು ವಿವಾಹ ಯೋಗ್ಯ ಗೋಪಾಲ ಹನೇಹಳ್ಳಿಗೆ ಬಂದಾಗ ಏದಾದರೂ ಮಾಡಿ ಅವನನ್ನು ಭೇಟಿಮಾಡಬೇಕೆಂದು ರಾಧಕ್ಕ ಪಡುವ ಪ್ರಯತ್ನ ಯಾರಿಗಾದರೂ ಅಯ್ಯೋ ಎನಿಸದಿರದು.

ಸುಮಾರು ಈ ಕಥೆಗಳನ್ನು ಮಾಸ್ತಿ ಸಂಪ್ರದಾಯದಲ್ಲಿ ಬರೆದ ಚಿತ್ತಾಲರು 'ಪೀಜೀ' ಮತ್ತು 'ಸಂದರ್ಶನ' ಕಥೆಗಳಿಂದ ನವ್ಯದ ಕಡೆಗೆ ಹೊರಳಿದಂತೆ, ಅವರ ಕಥೆಗಳು ಹೆಚ್ಚು ಪ್ರೌಢವಾಗುತ್ತ ಹೋಗುವುದನ್ನು ಕಾಣಬಹುದು. ನಿರೂಪಕನಿಂದಾಗಿ ಕಥೆಗಳಲ್ಲಿನ ಪಾತ್ರಗಳ ಮನಸ್ಸಿನ ಒಳತೋಟಿಯ ಚಿತ್ರಣಕ್ಕೆ ಹೆಚ್ಚು ಒತ್ತು ಬಿದ್ದುದನ್ನು ಕಾಣಬಹುದು. 'ಪೀಜೀ' (Paying Guest)ಯಲ್ಲಿ ಅಂಜುಬುರುಕ, ಅಳುಬುರುಕ, ದುಃಖಪ್ರಿಯ ಜೀವಿ ಅನಂತ ಕುಲಕರ್ಣಿಯ ಅನಾಥ ಪ್ರಜ್ಞೆಯ ಚಿತ್ರಣವಿದ್ದಂತೆ, 'ಸಂದರ್ಶನ'ದಲ್ಲಿ ತಾನೊಪ್ಪದ ಸೇಲ್ಸ್‌ಮನ್ ಕೆಲಸಕ್ಕೆ ಸಂದರ್ಶನಕ್ಕೆ ಹಾಜರಾಗುವ ವೇಳೆಯಲ್ಲಿ ಸಂದರ್ಶನಕ್ಕೆಂದೇ ಹಾಕಿಕೊಂಡು ಬಂದಿದ್ದ ಕೋಟು,

ಟೈಗಳನ್ನು ತೆಗೆದಿಟ್ಟು ಹೋಗುವ ಮಾಧವನಲ್ಲಿ ಬಂಡಾಯ ಕಂಡುಬರುತ್ತದೆ. 'ನಾವು ಯಾವ ಒಂದು ಮನಸ್ಥಿತಿಯಲ್ಲಿರುತ್ತೇವೋ ಆ ಮನಸ್ಥಿತಿಯನ್ನು ಸಮರ್ಥಿಸುವಂತಹ ಸಂಗತಿಗಳನ್ನೇ ನೆನೆಯುತ್ತೇವೆ, ಅನುಭವಿಸುತ್ತೇವೆ.' ಸಂದರ್ಶನಕ್ಕೆಂದೇ ಮನೆಯಿಂದ ಹೊರಟ ಮಾಧವ ದಾರಿಯುದ್ದಕ್ಕೂ ಅವನ ಮನಸ್ಥಿತಿಯನ್ನು ಪ್ರತಿಬಿಂಬಿಸತಕ್ಕಂತಹ ಮಾತುಗಳನ್ನೇ ಕೇಳುತ್ತಾ, ನೋಟಗಳನ್ನೇ ಕಾಣುತ್ತಾ ಕೊನೆಗೆ ಕೋಟು, ಟೈ ತೆಗೆದು ಸಂದರ್ಶನಕ್ಕೆ ಹೋದರೂ 'ಮಾರುವ ವಸ್ತು ಚಂದ ವಿದ್ದಷ್ಟೂ ಒಳ್ಳೆಯದಲ್ಲವೇ? ಎಂಬ ಮಾತಿನಂತೆ ತನ್ನ ಒಳ್ಳೆಯ ಪರ್ಸನಾಲಿಟಿ ಯಿಂದಾಗಿ ಆಯ್ಕೆಯಾಗುತ್ತಾನೆ.

'ಖಾಲಿಕೋಣೆ' ಷೋಡಶಿಯೊಬ್ಬಳ ವಯೋ ಸಹಜವಾದ ಹಗಲುಗನಸಿನ ಸುಂದರಚಿತ್ರಣ. ಬಚ್ಚಲ ಮನೆಯ ಕೊಳೆಯಲ್ಲಿಯೂ ಮಲ್ಲಿಗೆ ಬಳ್ಳಿ ಬೇರು ಬಿಟ್ಟು ತನ್ನ ಸಂಧಿ ಸಂಧಿಗಳಲ್ಲಿ ಗಮಗಮಿಸುವ ಹೂವು ತಳೆಯುವಂತೆ ಅಕ್ಕನ ಬಾಣಂತನ ಕ್ಕೆಂದು ಬಂದ ನಿರ್ಮಲೆ ತನ್ನ ಮನೆಯ ಪಕ್ಕದ ಖಾಲಿಕೋಣೆಗೆ ಬಾಡಿಗೆಗೆ ಬರಲಿ ರುವ ಯುವಕನ ಬಗ್ಗೆ ಹಗಲುಗನಸುಗಳನ್ನು ಕಾಣುತ್ತಾ ಹೋಗುತ್ತಾಳೆ. ಅವನು ಕೋಣೆಗೆ ಬರುವ ಮುಂಚೆಯೆ ತೀರಿಕೊಂಡಾಗ ತನ್ನ ಪ್ರಿಯಕರನನ್ನೇ ಕಳೆದು ಕೊಂಡವಳಂತೆ ಬಿಕ್ಕಿಬಿಕ್ಕಿ ಅಳುತ್ತಾಳೆ. ಭೌತಿಕವಾಗಿ ಅನಂತನು ಸತ್ತಿದ್ದರೂ 'ತನ್ನ ಮನಸ್ಸಿನ ಗರ್ಭದಲ್ಲೇ ಹುಟ್ಟಿ, ತನ್ನ ಅಂಗಾಂಗಗಳನ್ನೂ ವ್ಯಾಪಿಸಿ ಈಗ ತನ್ನನ್ನೇ ಮೀರಿನಿಂತ ಈ ಅನಂಗ ಅನಂತ ಸಾಯುವುದು ಶಕ್ಯವೇ?' ಎಂಬ ಪ್ರಶ್ನೆ ಅವಳೆದುರು ನಿಲ್ಲುತ್ತದೆ. ಪ್ರಿಯಕರನಿಗಾಗಿ ಹಾತೊರೆಯುವ ಅವಳ ಹೃದಯದ ಕೋಣೆ ಖಾಲಿಯಾಗಿಯೇ ಉಳಿಯುತ್ತದೆ.

'ಅಡ್ಡಬಿದ್ದಮರ' ಕಥೆಯಲ್ಲಿ ರಸ್ತೆಗೆ ಅಡ್ಡಲಾಗಿ ಬಿದ್ದ ಮರ ಸುರೇಶನ ಮತ್ತು ನಿರ್ಮಲೆಯರ ಅಂತರ್ಜಾತೀಯ ಪ್ರೇಮ ವಿವಾಹದ ದಾರಿಗೆ ಅಡ್ಡ ಲಾಗಿದ್ದ ನಿರ್ಮಲೆಯ ಅಜ್ಜಿಗೆ ಸಂಕೇತವಾಗುತ್ತದೆ. ರಸ್ತೆಗೆ ಅಡ್ಡಲಾಗಿದ್ದ ಮರವನ್ನು ಕುರಿತು '...ಮರ ಹೊತ್ತುಕೊಂಡು ಹೋದರು ರಸ್ತೆ ಸಾಫ್ ಆಯಿತು' ಎಂಬ ಪಕ್ಕದ ಮನೆಯ ಮೂರು ವರ್ಷದ ಮುಕ್ತಳ ಮಾತುಗಳು ನಿರ್ಮಲೆಯ ಅಜ್ಜಿ ತೀರಿಹೋಗಿ ಸುರೇಶ ಮತ್ತು ನಿರ್ಮಲೆಯರ ವಿವಾಹಕ್ಕಿದ್ದ ಅಡಚಣೆ ನಿವಾರಣೆಯಾದುದನ್ನು ಹೇಳುತ್ತದೆ. ಈ ಕಥೆಯಲ್ಲಿ ಪ್ರಕಟವಾಗಿ ಸಂಕೇತ ವೊಂದನ್ನು ಬಳಸಿದ್ದಾರೆ. ಆದರೆ ವಾಸ್ತವವಾಗಿ 'ಉತ್ತುಮಿ' ಕಥೆಯಲ್ಲಿ ಉತ್ತುಮಿಯು ಮಂಗಳು ಕಲ್ಯಾಣಿಯನ್ನು ನೋಡಲು ಹೋಗಲು 'ಕೆಂಪು ಮಶಿಯ ದೌತಿ ಎತ್ತಲೇ' ಎಂಬ ಮಾತುಗಳಲ್ಲಿ ಅಡಗಿರುವ ಕಾಮದ ವಾಸನೆಯ ಸಂಕೇತದ ಕಂಪು ಕಂಡೂ ಕಾಣದಂತೆ ಇದೆ.

'ಅಪರಿಚಿತರು' ಕಥೆಯ ರಾಮಕೃಷ್ಣ ಮತ್ತು ಜಾನಕಿ ಮನೆಗೆ ಬಂದ ಅತಿಥಿ ಗಳಿಗೆ, ಮಂತ್ರ ಮುಗ್ಧ ವ್ಯಕ್ತಿಗಳಂತೆ ವಶರಾಗಿ ಆಜ್ಞಾನುವರ್ತಿಗಳಾಗಿ, ಅವರು

ಹೋದ ಮೇಲೆ 'ಆ ನಮ್ಮ ಸ್ವಾತಂತ್ರ್ಯವನ್ನು ನಾವಾಗಿಯೇ ಬಿಟ್ಟುಕೊಟ್ಟೆವಲ್ಲ—ಮುಖ್ಯವಾಗಿ ನಾವು ನೀರಿಲ್ಲದವರು—ಸತ್ವಹೀನರು!' ಎಂದುಕೊಳ್ಳುತ್ತಾರೆ. ಕಥೆಯ ಪ್ರಾರಂಭದಲ್ಲಿ ಹೇಳದೇ ಕೇಳದೇ ತಮ್ಮ ಬಾಗಿಲಿನಲ್ಲಿ ಹಾಜರಾದ ಈ ಅಪರಿಚಿತರು ಈ ಲೋಕದ ವ್ಯಕ್ತಿಗಳಲ್ಲ ಎಂಬ ಭಾವನೆ ರಾಮಕೃಷ್ಣನ ಮನಸ್ಸಿನಲ್ಲಿ ಮೂಡಿ ಮೈ ನವಿರಿಗೊಳಗಾಗುತ್ತದೆ. ಅರ್ಧಭ್ರಮೆ (ಫ್ಯಾಂಟಸಿ) ಅರ್ಧ ವಾಸ್ತವದಲ್ಲೆಂಬತೆ ನಡೆಯುವ ಈ ಕಥೆಯ ಅಪರಿಚಿತನ ಚಿತ್ರವೇ ಮುಂದಿನ 'ಪಯಣ', 'ಆಟ' ಕಥೆಗಳಲ್ಲಿ ಸ್ಪಷ್ಟವಾಗಿ ಸಾವಿನ ಸಂಕೇತವಾಗಿ ಬರುತ್ತದೆ. 'ಅದೃಷ್ಟವೂ' ಸಾವನ್ನು ಕುರಿತ ಕಥೆಯೆ. ಮೈಲಿ ಬೇನೆಗೆ ತುತ್ತಾಗಿ ಸಾವಿನ ಹತ್ತಿರ ಹೋಗಿದ್ದ ಹನ್ನೆರಡು ವರ್ಷದ ಬಾಲಕ ನೀಲಕಂಠ ಉಳಿದುಕೊಳ್ಳುವುದೂ, ಜೀವಾವಧಿ ಶಿಕ್ಷೆ ಅನುಭವಿಸಿ ಗೋವೆಯಿಂದ ತಂದೆ ತಾಯಿಯರನ್ನು ಕಾಣಲು ಬಂದ ಪೊಕ್ಕನ ಅಣ್ಣ ಮೈಲಿಬೇನೆಗೇ ತುತ್ತಾಗಿ ಸಾಯುವುದೂ ಸಾವಿನ ವಿಸ್ಮಯ ನಿಗೂಢತೆಯ ಕಡೆಗೆ ಬೆರಳುಮಾಡಿ ತೋರುತ್ತವೆ. ಅವ್ಯಕ್ತವೂ ನಿಗೂಡವೂ ಆದ ಸಾವಿನ ಕರೆ, ಸಾವನ್ನು ಕುರಿತ ವಿಚಾರ ಇವು 'ಪಯಣ' ಮತ್ತು 'ಆಟ' ಕಥೆಗಳಲ್ಲಿ ಮುಂದುವರೆದಿದೆ. ಪ್ರತಿಭಟನೆಗೆ ಅರ್ಥವೇ ಇಲ್ಲವೆಂದು ಬಾಲ್ಯದಿಂದಲೂ ತಂದೆಗೆ ವಿಧೇಯನಾಗಿ, ಮಿತ್ರರಿಗೆ ಹೊಂದಿಕೊಂಡು ಹೋಗುವ 'ಪಯಣ' ಕಥೆಯ ಸೇಲ್ಸ್‌ಮನ್ '......ಕೆದರಿದ ಕೂದಲು; ಹದವಾದ ಭುಜಗಳು; ಹದವಾದ ಎದೆ; ಮಾಂಸಲ ಕೈ ರಟ್ಟೆಗಳು; ಕಪ್ಪು ಮೈಬಣ್ಣ; ಮೋರೆಗೆ ಇಷ್ಟುದ್ದ ಕಪ್ಪು ಪೊತ್ತೆ-ಮೀಸೆಗಳು; ಕಪ್ಪು ಎದೆಯ ಮೇಲೆ ಕಪ್ಪು ರೋಣೆ; ಎಡಗೈ ರಟ್ಟೆಗೆ ಕಪ್ಪು ಬಣ್ಣದ ಇಷ್ಟ ವಪ್ಪದ ದಾರ...'ದ ವ್ಯಕ್ತಿ 'ನಾಳೆ ನುಸುಕಿನಲ್ಲಿ ಕೋಳಿ ಕೂಗುವ ಮೊದಲೇ ಹೊರಡಬೇಕು ಸಿದ್ಧನಾಗಿರು' ಎಂದು ಹೇಳಿದಾಗ ಎಂದೂ ಪ್ರಯಾಣಕ್ಕೆ ಗೊಂದಲಿಸದ ಅವನು ಗೊಂದಲಿಸುತ್ತಾನೆ. 'ಸರಿಯಾಗಿ ಐದು ಗಂಟೆಗೆ ತಾನು ಹೊರಡಬೇಕು. ನಾಲ್ಕು ಗಂಟೆಗೆ ಎಬ್ಬಿಸು' ಎಂದು ರೂಮ್‌ಬಾಯ್‌ಗೆ ಹೇಳಿ ಸರ್ವಸಿದ್ಧನಾಗಿ ಸೂಟುಬೂಟುಗಳನ್ನು ಧರಿಸಿಯೇ ಹಾಸಿಗೆಯ ಮೇಲೆ ಅಂಗಾತ ಮಲಗಿ 'ಪಯಣ'ಕ್ಕೆ ಸಿದ್ಧನಾಗುತ್ತಾನೆ. 'ಆಟ' ಕಥೆಗೆ ಪ್ರೇರಣೆ ಭೌತ ವಿಜ್ಞಾನದ ಕ್ವಾಂಟಮ್ ಹಾಗೂ ರಿಲೇಟಿವಿಟಿ. ಕಥೆಯಾಗಿ ಪೂರ್ಣಗೊಂಡದ್ದು ಸಾವಿನ ನಿಗೂಡತೆಯ ಸುತ್ತ ಹುಟ್ಟಿಕೊಂಡ ಪುರಾಣ! ‹ಆಟ' ಕಥೆ ಲೇಖಕರೇ ಮೆಚ್ಚಿಕೊಂಡ ಪ್ರಿಯವಾದ ಕಥೆ. ‹ಪಯಣ'ದ ಕಥೆಯಲ್ಲಿಯಂತೆಯೆ ಇಲ್ಲಿಯೂ ಇಸ್ಪೀಟು ಆಡಲು ನರಸಿಂಹನ ಮನೆಗೆ ಬಂದ ನಾಲ್ವರು ಗೆಳೆಯರೂ ‹ಕಪ್ಪಗಿನ ಮನುಷ್ಯ......ತಲೆಯ ಮೇಲೆ ಕಂಬಳಿ ಕೊಪ್ಪೆ... ಇಷ್ಟು ಮೀಸೆ ಬಿಟ್ಟಿದ್ದಾ...ಕೈಯಲ್ಲಿ ಸುರುಳಿ ಸುತ್ತಿದ ಹಗ್ಗಾ' ಹಿಡಿದಿದ್ದ ವ್ಯಕ್ತಿಯನ್ನು ನೋಡುತ್ತಾರೆ. ನರಸಿಂಹನ ತಾಯಿಗೆ 'ಕೊಟ್ಟಿಗೆಯ ಹತ್ತಿರ ಬಂದವನು ಇಲ್ಲಿಯೂ ಬರಲಾರನಷ್ಟೆ' ಎಂಬ ಸಂದೇಹ ಮೂಡುತ್ತದೆ. ಕನಸು ಕಂಡು ಎದ್ದು ಬರುತ್ತಿದ್ದ ಬುಡಣ ಸಾಬರಿಗೆ ನರಸಿಂಹನ ಸಾವನ್ನು ಕಂಡು 'ಸಾವಿನ ಮಯಿಂಗಾಳಿ ಹತ್ತಿದ ಜೀವ ಆಳದಲ್ಲೆಲ್ಲೋ ಹೆದರಿಯೇ ಗೆಳೆಯರನ್ನು ಆಟಕ್ಕೆ ಕರೆಸಿರಬೇಕು'

ಎಂದು ಅನ್ನಿಸುತ್ತದೆ. ಈ ಸಾವನ್ನು ಕುರಿತ ಕಥೆಗಳಲ್ಲಿ ಗುಡುಗು, ಮಿಂಚು, ಮಳೆ ಸಿಡಿಲುಗಳು ಹಿನ್ನೆಲೆಯಾಗಿ ಬರುತ್ತವೆ. ಇವೇ ಗುಡುಗು, ಮಿಂಚು, ಮಳೆ, ಸಿಡಿಲುಗಳು ಹಿನ್ನೆಲೆಯಲ್ಲಿದ್ದರೂ 'ಉದ್ಧಾರ' ಕಥೆಯಲ್ಲಿ ಪೊತ್ತೆ ಮೀಸೆಯ ಕಪ್ಪಗಿನ ವ್ಯಕ್ತಿಯ ಬದಲು ಕಪ್ಪು ನಾಯಿಯೊಂದು ಕಣ್ಣುಗಳಲ್ಲೇ ಸಿಟ್ಟಿನಿಂದ ನೋಡುತ್ತಾ ಗುರುಗುಟ್ಟುವ ಚಿತ್ರ ಬರುತ್ತದೆ. ಅಂಥ ಕಪ್ಪು ನಾಯಿ ಎರಡು ಬಾರಿ ಕನಸಿನಲ್ಲಿ ಕಂಡಾಗಲೂ ಅಶುಭವಾದದ್ದನ್ನೇ ನೆನೆದು ಮೂರನೆಯ ಬಾರಿ ಅಹಲ್ಯೆ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ಇಲ್ಲಿ ಕಪ್ಪು ನಾಯಿ ಅಶುಭದ ಸಂಕೇತವಾಗಿ ಬರುತ್ತದೆ.

ಪುರಾಣದ ಅಶ್ವತ್ಥಾಮ ಭ್ರೂಣ ಹತ್ಯೆಯ ಶಾಪವನ್ನು ತಲೆಯಮೇಲೆ ಹೊತ್ತು ತಿರುಗುತ್ತಿರುವಂತೆ 'ಅಶ್ವತ್ಥಾಮ' ಕಥೆಯ ರಾಮಚಂದ್ರ ತನ್ನ ಶೂದ್ರ ಪ್ರೇಯಸಿಯನ್ನು ತಂದೆ ತಾಯಿಗಳ ಭಯದಿಂದ ಮದುವೆಯಾಗಲಾರದೆ ಅವಳ ಆತ್ಮಹತ್ಯೆಗೆ ಕಾರಣನಾಗಿ 'ಬೆನ್ನ ಹುರಿಯಲ್ಲೇ ಬೇರುಬಿಟ್ಟ ಪಾಪ ಪ್ರಜ್ಞೆಯಿಂದಾಗಿ ನವೆಯುತ್ತಾ ಸದಾ ಆ ಪಾಪ ಪ್ರಜ್ಞೆಯ ಕೆಂಡವನ್ನು ತಲೆಯ ಮೇಲೆ ಹೊತ್ತು' ಒದ್ದಾಡುತ್ತಾನೆ. ಕಾಮವನ್ನು ವಸ್ತುವಾಗುಳ್ಳ 'ಚಕ್ರವ್ಯೂಹ', 'ಬೀಗ ಮತ್ತು ಬೀಗದ ಕೈ', 'ಸೆರೆ', 'ಹಾವು'ಗಳು ಇನ್ನಷ್ಟು ಸುಂದರವಾಗಿ ಸಂಕೇತ, ಪ್ರತಿಮೆಗಳೊಂದಿಗೆ ಮೂಡಿಬಂದಿವೆ. 'ಚಕ್ರವ್ಯೂಹ' ಹೆಸರೇ ಅರ್ಥಗರ್ಭಿತವಾದುದು, ಎರಡು ರೀತಿಯಲ್ಲಿ. ಚಕ್ರವೂಹವನ್ನು ಭೇದಿಸಿದ ಅಭಿಮನ್ಯು ಮರಳಿಬಾರದೇ ಹೋದಂತೆ 'ಯಾವ ಜನ್ಮದ ಋಣಾನುಬಂಧವೊ; ನಾನವಳಿಗೆ ಎರಡು ಬಗೆಯದಂತೆ ನನ್ನನ್ನು ಕಾಪಾಡಿದ್ದಳು' ಎಂದು ಹೆಂಡತಿಯನ್ನು ಹೊಗಳುವ ನಲವತ್ತೈದು ವರ್ಷಗಳ ನಡುಹರೆಯದ ಕಥಾನಾಯಕ ವಿದೇಶದಲ್ಲಿ ಇಪ್ಪತ್ನಾಲ್ಕರ ವಿವಾಹಿತ ತರುಣಿ ಲೂಯಿಸಾಳಿಗೆ ಒಲಿದು, ಅವಳಿಂದ ದೂರವಾಗಲು ಪ್ರಯತ್ನಿಸಿ ಸಾಧ್ಯವಾಗದೆ 'ಹೊಟ್ಟೆನೋವಿನಿಂದ ನರಳುತ್ತಿದ್ದ ನಾಯಿ ಹಿತ್ತಲಲ್ಲಿ ಹುಡಕಾಡುತ್ತ ಸಿಕ್ಕ ಹುಲ್ಲಿಗೆಲ್ಲ ಬಾಯಿಹಾಕುವಂತೆ' ಲೂಯಿಸಳಿಗೆ 'ನೀನೆ ಕದ ತೆರೆ...ಇದೋ ಕೀಲಿ ಕೈ...ಮೆಲ್ಲಗೆ ಸದ್ದಾಗದಿರಲೀ...' ಎಂದು ಶರಣಾಗುವ ಕಥೆ ಕಲಾತ್ಮಕವಾಗಿ ಮೂಡಿ ಬಂದಿದೆ. ಆದರೆ ಇದೇ ಮಾತನ್ನು 'ಬೀಗ ಮತ್ತು ಬೀಗದ ಕೈ' ಕಥೆಯ ಬಗ್ಗೆ ಹೇಳಲಾಗುವುದಿಲ್ಲ. ಇಲ್ಲಿ ಬರುವ ಬೀಗ ಮತ್ತು ಬೀಗದ ಕೈಗಳ ಸಂಕೇತ ತೀರ ವಾಚ್ಯವಾಗುವಷ್ಟು ಬಾರಿ ಪುನರಾವರ್ತನೆಯಾಗಿದೆ. "ಓಪನ್ ಸಿಸೇಮ್" ಎನ್ನುವುದೇ ತಡ ಗುಹೆಯ ಬಾಗಿಲು ಝಗ್ಗನೆ ತೆರೆದು ಒಗಳಗಿನ ರತ್ನಭಂಡಾರ ಕಣ್ಣು ಕುಕ್ಕಿಸಲಿತ್ತು. ಆದರೆ ಗುಹೆಯ ಹೊರಗೆ ನಿಂತವನಿಗೂ ಪಾಪ "ತೆರೆ" ಎನ್ನುವ ಮಂತ್ರವೇ ಮರೆತು ಹೋದಂತಿತ್ತು!' ಎನ್ನುವ ಸಾಂದರ್ಭಿಕ ವರ್ಣನೆಯಲ್ಲಿ ವರ್ಣನೆ ಔಚಿತ್ಯಪೂರ್ಣವಾಗಿದ್ದರೂ ತೀರ ವಾಚ್ಯವಾಯಿತೇನೊ ಎನ್ನಿಸುತ್ತದೆ. '.....ಬೀಗದ ಕೈ ಕಳೆದು ಹೋಗಿ ಮನೆಗೆ ಹಾಕಿದ ಬೀಗ ತೆರೆಯಲಾಗದ್ದಕ್ಕೆ ಮುಚ್ಚಿದ ಕದದ ಇದಿರಿಗೇ ಜೀವ

ಕಳಕೊಂಡನಂತೆ !, ಎನ್ನುವ ಅಂತ್ಯ ಮಾತ್ರ ಕೇಶವನಿಗೆ ಪುರುಷತ್ವವಿಲ್ಲದುದನ್ನೂ ಅವನ ಮಾನ ಹೋದ ಮೇಲೆ ಅವನು ಬದುಕಿಯೂ ಸತ್ತ ಸ್ಥಿತಿಯನ್ನು ಧ್ವನಿ ಪೂರ್ಣವಾಗಿ ತಿಳಿಸುತ್ತದೆ. 'ಹೋದವಾರ ನಮ್ಮ ಹಳೇ ಮನೆಯ ಹಿತ್ತಲ ಮೂಲೆಯಲ್ಲಿರುವ ಬಿದಿರ ಹಿಂಡಿನಲ್ಲಿ ಹಾವು ಹೊಕ್ಕಿದ್ದು ಕಂಡಿತಂತೇ ಭಟ್ಟರೇ' ಎಂಬ ಬರ್ಮಚಾರಿ (ಬ್ರಹ್ಮಚಾರಿ)ಯ ಅಮ್ಮನ ಮಾತುಗಳಲ್ಲಿ 'ಸೆರೆ' ಕಥೆಯಲ್ಲಿ ಹಾವು ಕಾಮಕ್ಕೆ ಸಂಕೇತವಾಗಿರುವುದನ್ನು ನೋಡಬಹುದು. ಅಮ್ಮನ ಮದುವೆಯ ಪ್ರಸ್ತಾಪದ ಮಾತುಗಳಿಂದ ಅಲ್ಲಿಂದ ದೂರ ಹೋಗಬೇಕೆಂದು ಹಳೆಮನೆಗೆ ಹೊರಟ ಬರ್ಮಚಾರಿ ಹಳೆಮನೆಯ ಬಾಗಿಲನ್ನು ರಿಪೇರಿ ಮಾಡಲು ಹೊರಟು ಪೊನ್ನಪ್ಪಾ ಚಾರಿಯ ಮನೆಯಿಂದ ಗರಗಸವನ್ನು ತರಲು ಹೋಗಿ, ಅವನ ಹೆಂಡತಿಯ ಆಂಗಿಕ ಚೇಷ್ಟೆಗಳಿಂದ ಮುಜುಗರ ಪಟ್ಟು, ಮನೆಯ ಬಾಗಿಲನ್ನು ರಿಪೇರಿ ಮಾಡುತ್ತಾ, ತಾನೇ ಮನೆಯೊಳಗೆ ಬಂದಿಯಾಗಿ, ಮನೆಯೊಳಗೆ ಕಂಡ ಮುಂಗನಿಂದ ಗಾಬರಿಗೊಂಡು ರಿಪೇರಿ ಮಾಡಿದ ಬಾಗಿಲನ್ನೇ ಮತ್ತೆ ಕಿತ್ತು ಹೊರಬರಬೇಕೆನ್ನುವಷ್ಟರಲ್ಲಿಯೇ, ಅಷ್ಟರವರೆಗೂ ಇವನ ಕಾರ್ಯಗಳನ್ನೇ ಮನೆಯ ಹೊರಗಿನಿಂದ ನೋಡುತ್ತಿದ್ದ ದೇವಿ ತೆರೆದ ಬಾಗಿಲಿನಿಂದ ಒಳಬಂದು 'ಆಗ ನೀವು ಕಿಡಕಿಯೊಳಗಿನಿಂದ ಕರೆದಾಗಲೇ ನನಗೆ ತಿಳಿದಿತ್ತು ಒಡೆಯಾ' ಎಂದು ತಬ್ಬಿಕೊಂಡಾಗ, ಯಾವುದರಿಂದ ದೂರವಿರ ಬೇಕೆಂದು ಅವನು ಬಯಸುತ್ತಿದ್ದನೊ ಆ ಕಾಮಕ್ಕೇ ಸಿಕ್ಕು ಸೆರೆಯಾಗುತ್ತಾನೆ ಒಂದೊಂದು ಕ್ರಿಯೆಯೂ ಮತ್ತೊಂದಕ್ಕೆ ಪೋಷಕವಾಗುತ್ತ ಕೊನೆಯ ಹಂತಕ್ಕೆ, ಕ್ರಮ ಕ್ರಮವಾಗಿ ತಂದು ಮುಟ್ಟಿಸುತ್ತವೆ. 'ಹಾವು' ಕಥೆಯಲ್ಲಿ ಚಿಕ್ಕಪ್ಪ, ಚಿಕ್ಕಮ್ಮ, ದೇವಿ ಮತ್ತು ನಿರೂಪಕರ ಮೂಲಕ ಕಥೆ ತೆರೆದು ಕೊಳ್ಳುತ್ತದೆ. ಮನೆಯಲ್ಲೆಲ್ಲಾ ಹರಿದಾಡುತ್ತಾ ಆಗಿಂದಾಗ್ಗೆ ಒಬ್ಬರಲ್ಲ ಒಬ್ಬರಿಗೆ ಕಾಣಿಸಿಕೊಳ್ಳುವ ಹಾವು ಕಥೆಯ ಉದ್ದಕ್ಕೂ ಹರಡಿರುವ ಕಾಮದ ವಾಸನೆಯನ್ನು ಅಥವಾ ಚಿಂತನೆ ಯನ್ನು ಸಂಕೇತಿಸುತ್ತದೆ. ಮನೆಯಲ್ಲಿಯೇ ಸುತ್ತಾಡುವ '......ಹಾವನ್ನು ಕೊಲ್ಲುವುದು ಬ್ರಹ್ಮ ಹತ್ಯೆಯಷ್ಟು ಪಾಪ' ಎಂಬ ಚಿಕ್ಕಪ್ಪನ ಮಾತುಗಳು ಧ್ವನಿಪೂರ್ಣ.

'ಛಲ' ಕಥೆಯು ಪದ್ದಕ್ಕನ ಛಲ ಬೆರಗು ಹುಟ್ಟಿಸುವಂಥದ್ದು. ಚಿತ್ತಾಲರ ಕಥೆಗಳಲ್ಲಿ ಹಾಸುಹೊಕ್ಕಾಗಿರುವ ತುಂಡು ನೆಲದ ಕಾರಣಕ್ಕಾಗಿ ತಲೆಮಾರುಗಳಿಂದ ನಡೆಯುವ ದ್ವೇಷ ಈ ಕಥೆಯಲ್ಲಿಯೂ ಇದೆ. 'ಮದಿಹುಚ್ಚು' ಕಥೆಯ ಮಂಜಯ್ಯ ಶೆಟ್ಟಿ ತಾನೇ ಪ್ರೀತಿಯಿಂದ ಸುಶೀಲಳ ಮಗನಿಗೆ ಬಂಗಾರದ ನೇವಾಳವನ್ನು ಕೊಟ್ಟೂ ಕಳ್ಳನೆಂಬ ಅಪವಾದವನ್ನು ಹೊತ್ತು ಸಾಯಬೇಕಾಯಿತು. ಮಂಜಯ್ಯಶೆಟ್ಟಿ ಬಂಗಾರದ ನೇವಾಳವನ್ನು ಕೊಟ್ಟಿರುವುದು ಹಗಲಿನ ಸೂರ್ಯನಷ್ಟೇ ಸ್ಪಷ್ಟವಿದ್ದರೂ ಅದನ್ನು ಮುಚ್ಚಿಹಾಕಿ ಕಳ್ಳತನದ ಆರೋಪವನ್ನು ಹೊರಿಸಿದ ಸುಶೀಲಳ

ಡಾಂಭಿಕತನ 'ಛಲ' ಕಥೆಯ ಪದ್ದಕ್ಕನ ಹಠಕ್ಕೆ ಸರಿಸಾಟಿಯಾದುದು. ಮಂಜಯ್ಯ ಶೆಟ್ಟಿ ನಿರಪರಾಧಿ ಎಂದು ಸಾಬೀತಾದುದು ಅವರು ಸತ್ತಮೇಲೆ. ಮಂಜಯ್ಯ ಶೆಟ್ಟಿಯ ನಿರಪರಾಧಿತ್ವದ ಮೇಲೆ ಬೆಳಕು ಚೆಲ್ಲಬಹುದಾಗಿದ್ದ ನಿರೂಪಕ ಬಾಲಕ ಹೆದರಿಕೆಯಿಂದಲೋ ಮತ್ತಾವುದೊ ಕಾರಣದಿಂದಲೋ ಮೌನವಾಗಿರುತ್ತಾನೆ. ಇದೊಂದು ಸೊಗಸಾದ ಕಥೆ. 'ಮುಖಾಮುಖಿ' ಕಥೆಯಲ್ಲಿ ಕಥೆಗಾರನ ಮತ್ತು ತನ್ನ ಕಥೆಯೊಂದರಲ್ಲಿ ಪಾತ್ರವಾಗಿದ್ದ ಇಂದಿರಕ್ಕನ ಮುಖಾಮುಖಿ ಎರಡು ವ್ಯಕ್ತಿಗಳ ಮುಖಾಮುಖಿಯಾಗಿರದೆ ಎರಡು ಇತಿಹಾಸಗಳ, ಎರಡು ಪಾಪ ಪ್ರಜ್ಞೆಗಳ ಮುಖಾಮುಖಿಯಾಗಿತ್ತೇನೊ. ತಾನು ಪೊತ್ತೆ ಮೊಸೆಯಂವನ ಪತ್ರವನ್ನು ಇಂದಿರಕ್ಕನಿಗೆ ಕೊಡದೆ ಅವಳನ್ನು ಘೋರ ಪಾಪದಿಂದ ಉಳಿಸಿದೆ ಎಂದು ತನಗೆ ತಾನೆ ಸಾವಿರ ಸಲ ಸಮಾಧಾನ ಮಾಡಿಕೊಂಡ ಕಥೆಗಾರನಿಗೆ ಇಂದಿರಕ್ಕ ಕಾಶಿಗೆ ಹೊಗುವ ಮೊದಲು ಮತ್ತು ಕಾಶಿಯಿಂದ ಬಂದಮೇಲೆ ಸಾಯುವ ಮೊದಲು ಎರಡು ವಿಭಿನ್ನ ನಿಲವುಗಳನ್ನು ಹೊಂದಿ ಆಶ್ಚರ್ಯಗೊಳಿಸುತ್ತಾಳೆ. ಈ ಕಥೆ ಯಲ್ಲಿನ ತಂತ್ರ ವಿಶಿಷ್ಟವಾದುದು. ಅದೇ ಇನ್ನೂ ಹೆಚ್ಚು ಪಕ್ವವಾಗಿ 'ಕತೆಯಲ್ಲಿ ಬಂದಾತ ಮನೆಗೂ ಬಂದು ಕದ ತಟ್ಟಿದ' 'ಕತೆಯಾದಳು ಹುಡುಗಿ' ಕಥೆಗಳಲ್ಲಿ ಪ್ರಯೋಗವಾಗಿರುವುದನ್ನು ಕಾಣಬಹುದು.

'ಅಬ್ಬಲಿಗೆ ವಾಸನೆಯಿಲ್ಲದ ಹೂ-ಅಲ್ಲ ವಾಸನೆ ಚೆಲ್ಲದ ಹೂ'. 'ಅಬೋಲಿನ' ಕಥೆಯ ಅಬೋಲಿನಳೂ ಅಂತೆಯೆ ಒಳಮನಸ್ಸಿನ ಹುಡುಗಿ. ತಾಯಿಯಿಲ್ಲ ಹುಡುಗಿಯಾದರೂ ತಂದೆಗೆ ಮತ್ತು ತಮ್ಮನಿಗೆ ತಾಯಿಯಾಗಿಯೂ ಹೆಣ್ತನದ ಅನೇಕ ರಹಸ್ಯಗಳನ್ನರಿಯದ ಮುಗ್ಧೆ. 'ಮನವೇಲ ಸಿದ್ಧಗೊಳಿಸಿಟ್ಟ ಯುವ ಪುಶಕ್ಕೆ ತಾನಾಗಿ ಕೊರಳು ಸೇರಿಸುತ್ತಿದ್ದೇನೆ' ಎಂದರಿಯದೆ ಬಲಿಪಶುವಾದವಳು. ನಿಷ್ಪಾಪಿಯಾದರೂ ದುರಂತಕ್ಕೀಡಾದ ಅಬೋಲೀನಳ ಕಥೆ ಮನಮಿಡಿಯುವಂಥದು. 'ಕಥೆಯಾದಳು ಹುಡುಗಿ' ಒಂದೇ ಕಾಲಕ್ಕೆ ಮಗಳನ್ನು ಕಳಕೊಂಡ ತಂದೆಯೊಬ್ಬನ ವ್ಯಥೆಯನ್ನು ಕುರಿತು ಹೇಗೋ ಹಾಗೆಯೇ ಈ ವ್ಯಥೆಯನ್ನು ಮಾನವ ಸಹಜ ವ್ಯಾಕುಲತೆಯಿಂದ ಇನ್ನೊಬ್ಬನಿಗೆ ಮುಟ್ಟಿಸಲು ಹೋದಾಗ ನೇರವಾಗಿ ಮುಟ್ಟಿಸ ವುದೇ ಅಸಾಧ್ಯವಾಗಿ ಹಲವು ರೀತಿಯಲ್ಲಿ ರೂಪಾಂತರಗೊಳ್ಳಲು ಕಾರಣವಾಗುವ ನಮ್ಮ ಸಮಾಜ ವ್ಯವಸ್ಥೆಯ ಬಗೆಗೂ ಇದೆ." 'ನನ್ನ ಕಥೆಯ ಬಗ್ಗೆ ನನಗೇ ಹೇಸಿಕೆ ಅನ್ನಿಸಿತು......ಮಗು ಇವರೆಲ್ಲರಿಗೂ ಬೇಕಾದವಳಾಗಿದ್ದಳು......ಯಾರೂ ಅವಳ ಬಗ್ಗೆ ವಿಚಾರಿಸಲೇ ಇಲ್ಲ. ಅವಳು ಸತ್ತದ್ದು ಯಾರಿಗೂ ಗೊತ್ತಾಗಲೇ ಇಲ್ಲ... ಏಕೋ ನನ್ನ ಮಗು ಈಗ ಮೊದಲಬಾರಿಗೆ ಸಾಯುತ್ತಿದ್ದಾಳೆ ಅನ್ನಿಸಿತು......' 'ನಿಮ್ಮ ಗೆಳೆಯರಲ್ಲಿ ಒಬ್ಬನಿಗೂ ಮಗೂನ ನೆನಪೇ ಆಗಬಾರದ ಹಾಗೆ ಅದೆಂಥ ಕತೆ ಬರೆದಿರೊ,...ಬೆಂಕಿ ಬಿತ್ತು ನಿಮ್ಮ ಸಾಹಿತ್ಯಕ್ಕೆ...' ಎಂಬ ಜಾನಕಿಯ ತಂದೆ ತಾಯಿಯರ ಮಾತುಗಳೇ ಈ ಕಥೆಯ ವಿಮರ್ಶೆಯ ಮಾತುಗಳು ಆಗುತ್ತವೆ. ಈ

ಕಥೆ ತನ್ನ ಕಥಾತಂತ್ರದ ಕೌಶಲದಿಂದ ಮತ್ತು ತೋರುವ ಜೀವನಾಸಕ್ತಿಯಿಂದ ಮುಖ್ಯವಾದದ್ದಾಗುತ್ತದೆ.

'ಕತೆಯಲ್ಲಿ ಬಂದಾತ ಮನೆಗೂ ಬಂದು ಕದ ತಟ್ಟಿದ' ಕಥೆಯಲ್ಲಿ 'ನಾನು ನಿಮ್ಮ ಪ್ರೇಮು ಸರ್ ನಿಮ್ಮ ಇತ್ತೀಚಿನ ಕತೆಯಲ್ಲಿ ಬಂದ ಹರಿಜನ ಹುಡುಗ' ಎಂದು ಕಥೆಯಲ್ಲಿನ ಪಾತ್ರವೊಂದು ಕಥೆಗಾರನಿಗೇ ಹೇಳಿದಾಗ ಓದುಗ ಕಥಾತಂತ್ರಕ್ಕೆ ಬೆರಗಾಗದೆ ಇರಲಾರ.

'ತ್ರಯೋದಶ ಪುರಾಣ' ದಲ್ಲಿ ಹದಿಮೂರನೆ ಸಂಖ್ಯೆ ಅಶುಭಕ್ಕೆ ಸಂಕೇತವಾಗಿ ಬರುತ್ತದೆ. ಹದಿಮೂರನೆ ಸಂಖ್ಯೆ ಈ ಕಥೆಯಲ್ಲಿ ಮಾತ್ರವಲ್ಲ ಇನ್ನೂ ನಾಲ್ಕಾರು ಕಥೆಗಳಲ್ಲಿ ಅಶುಭದ ಸಂಕೇತವಾಗಿ ಬರುತ್ತದೆ. ಉದಾಹರಣೆಗೆ 'ಕತೆಯಾದಳು ಹುಡುಗಿ,' 'ಮುಖಾಮುಖಿ' 'ಉದ್ಧಾರ' 'ಚಕ್ರವ್ಯೂಹ,' ಮೊದಲಾದ ಕಥೆಗಳನ್ನು ಹೆಸರಿಸಬಹುದು. 'ತ್ರಯೋದಶ ಪುರಾಣದಲ್ಲಿ ಈ ಸಂಖ್ಯೆ ಕಣ್ಣಿಗೆ ಹೊಡೆಯುವಷ್ಟು ನಿಚ್ಚಳವಾಗಿ ಬರುತ್ತದೆ. ಈ ವಿಚಾರವನ್ನು ಬದಿಗಿಟ್ಟರೂ ಪ್ರಸ್ತುತ ಸಮಾಜದ ನಿರಪರಾಧಿಯ ಯಾತನೆ ಯೋಚಿಸುವಂತೆ ಮಾಡುತ್ತದೆ. 'ಪಾರ್ಸೆಲ್ ಬಿಚ್ಚುವುದು ಬೇಡ. ಅದರಲ್ಲಿ ಏನಿದೆ ಎನ್ನುವುದನ್ನು ಬಲ್ಲೆ. ಆದರೆ ಅದಕ್ಕೂ ನನಗೂ ಸಂಬಂಧವಿಲ್ಲ. ಕೊಂದವನು ಯಾರೆಂಬುದು ಗೊತ್ತಿಲ್ಲ...' ಎಂಬ ಹದಿಮೂರು ವರ್ಷ ವಯಸ್ಸಿನ ಗಣೇಶನ ಉದ್ಗಾರಗಳು ಇತಿಹಾಸದ ಬಗೆಗಿನ ದ್ವನಿಯಾಗಿದೆ. 'ಅವನೀಗ ಅವನಲ್ಲವೇ ಅಲ್ಲ...ಬರಿಯ ಎರಡು ಕಾಲುಗಳಿದ್ದ ತಪ್ಪಿಗಾಗಿಯೇ ಇತಿಹಾಸದ ಉದ್ದಕ್ಕೂ ಓಟಕಿತ್ತವನು. ಅಟ್ಟಲ್ಪಟ್ಟವನು–ಭಯದಿಂದ ಭಯಕ್ಕೆ ಎಂಬ ಕಥೆಗಾರರ ಮಾತು ಎಲ್ಲ ನಿರಪರಾಧಿಗಳ ಯಾತನೆಯ ಧ್ವನಿಯಾಗಿದೆ.

'ದಶಕಗಳ ಹಿಂದೆ ಮಾಸ್ತಿಯವರ ಸಾಂಪ್ರದಾಯದಲ್ಲೇ ಕತೆ ಬರೆಯತೊಡಗಿದ ...ಚಿತ್ತಾಲರ ಪ್ರತಿಭೆ ಬೆರಗುಗೊಳಿಸುವಷ್ಟು ವೈವಿಧ್ಯಮಯವಾಗಿ ಕುಡಿಯೊಡೆದಿದೆ ...ಚಿತ್ತಾಲರ ಓದು. ಅನುಭವ ಕೇವಲ ವಿಶ್ವವಿದ್ಯಾನಿಲಯದ ಚೌಕಟ್ಟಿಗಷ್ಟೇ ಸೀಮಿತಗೊಂಡಿರದೆ ಬದುಕಿನ, ವಿಚಾರಗಳ ಹಲವು ಹತ್ತು ಕ್ಷೇತ್ರಗಳನ್ನು ಅಪ್ಪಿಕೊಂಡಿರುವುದರಿಂದ, ಅವರ ಬರವಣಿಗೆಯ ಹಿಂದೆ ಸಮಗ್ರ ಜೀವನ ದೃಷ್ಟಿಯಿದೆ, ಅಂತಃಕರಣವನ್ನು ತಟ್ಟಿ ಎಬ್ಬಿಸುವ ಮಾನವೀಯತೆ ಇದೆ......'ನಮ್ಮೊಳಗಿನ ಮನುಷ್ಯನನ್ನು ಹುಡುಕುವ ಆಶಯವೇ ಅವರ ಮೂಲಭೂತವಾದ, 'ಅಚಲ ಕಾಳಜಿಯಾಗಿರುವುದನ್ನು ಕಾಣಬಹುದಾಗಿದೆ.'

'ನಮ್ಮೊಳಗಿನ ಮನುಷ್ಯನನ್ನು ಹುಡುಕುವ ಆಶಯ'ದಂತೆಯೆ 'ಹನೇಹಳ್ಳಿ,' 'ನನ್ನ–ಅಪ್ಪನ ಸಂಬಂಧ' ಹಾಗೂ 'ಮೃತ್ಯುಪ್ರಜ್ಞೆ'ಗಳು ಚಿತ್ತಾಲರ ಬಹುತೇಕ ಕಥೆಗಳಲ್ಲಿ ಪ್ರಧಾನವಾಗಿ ಕಂಡು ಬರುತ್ತವೆ. ಚಿತ್ತಾಲರ ಬಹುತೇಕ ಕಥೆಗಳಲ್ಲಿ ಹನೇಹಳ್ಳಿಯ ದಟ್ಟವಾದ ವರ್ಣನೆ, ಎಲ್ಲ ಕಥೆಗಳಲ್ಲೂ ಮತ್ತೆ ಮತ್ತೆ

ಕಾಣಿಸಿ ಕೊಳ್ಳುವ ಪಾತ್ರಗಳು, ಸರಪಣಿಯ ಕೊಂಡಿಯಂತೆ ಒಂದಕ್ಕೊಂದು ಸೇರಿಸಬಹುದಾದ ಘಟನಾವಳಿಗಳು–ಇವುಗಳನ್ನೆಲ್ಲಾ ನೋಡಿದಾಗ, ಹನೇಹಳ್ಳಿಗೆ ಸಂಬಂಧಿಸಿದಂತೆ 'ಕಾನೂರು ಸುಬ್ಬಮ್ಮ ಹೆಗ್ಗಡತಿ' ಯಂಥದೊ, 'ಗ್ರಾಮಾಯಣ' ದಂಥದೋ ಮಹಾನ್ ಪ್ರಾದೇಶಿಕ ಕಾದಂಬರಿಯಾಗಬಹುದಾಗಿದ್ದುದು ಕಾದಂಬರಿ ಕಾರರ ಅಖಂಡ ದರ್ಶನಕ್ಕೆ ಒಳಗಾಗದೆ ಸಣ್ಣ ಸಣ್ಣ ಕಥೆಗಳಾದುವೊ ಎನಿಸುತ್ತದೆ.

ಸಂಪ್ರದಾಯದಿಂದ ನವ್ಯ, ನವ್ಯದಿಂದ ಇನ್ನೂ ಮುಂದೆ ಹೋಗಿ ಪ್ರಬುದ್ಧ ಕಥೆಗಳನ್ನು ಕೊಟ್ಟಿರುವ, ತಮ್ಮ ಬರವಣಿಗೆಯ ಬಗ್ಗೆ ಪ್ರಚಂಡ ವಿಶ್ವಾಸವನ್ನು ಹೊಂದಿರುವ, 'ಶಿಕಾರಿ'ಯಂಥ ಕಾದಂಬರಿಯನ್ನು ಕೊಟ್ಟಿರುವ ಚಿತ್ತಾಲರ ಮುಂದಿನ ಕೊಡುಗೆ ಕಥೆಯೊ ಕಾದಂಬರಿಯೊ ಯಾವುದೇ ಆಗಲಿ ಕುತೂಹಲಕಾರಿ.

* * * *

ವಿಮರ್ಶೆಗೆ ಒಳಗಾಗಿರುವ ಕಥಾ ಸಂಕಲನಗಳು ಹದಿನಾರು. ಅವುಗಳನ್ನು ಯಾವುದೇ ರೀತಿಯಲ್ಲಿ ವರ್ಗೀಕರಿಸಿಲ್ಲ. ಅಂದರೆ ಲೇಖಕರು, ಲೇಖಕಿಯರು, ಪತ್ತೇದಾರಿ ಇತ್ಯಾದಿ...ಇದರಿಂದ ತೊಂದರೆ ಏನೂ ಇಲ್ಲ. ಒಟ್ಟು ಕಥಾ ಸಂಕಲನ ಗಳಲ್ಲಿ ಇಬ್ಬರು ಮಹಿಳೆಯರ ಪ್ರಥಮ ಸಂಕಲನಗಳಿವೆ. ವಿವಿಧ ಕಥೆಗಾರರ ಕಥೆಗಳ ಸಂಪಾದಿತ ಸಂಕಲನವೊಂದಿದೆ. ಮರಣೊತ್ತರ, ಲೇಖಕರ ಎರಡು ಸಂಗ್ರಹಗಳೂ ಪ್ರಕಟವಾಗಿವೆ. ಇವೆಲ್ಲವೂ ಪ್ರಥಮ ಸಂಕಲನಗಳೇ. ಪ್ರಥಮ ಸಂಕಲನ ತಂದಿರುವ ಲೇಕಖರಲ್ಲಿ ಆರ್. ಜಿ. ಹಳ್ಳಿ ನಾಗರಾಜ್, ಕರೀಗೌಡ ಬೀಚನಹಳ್ಳಿ ಮತ್ತು ಮಳಲಿ ವಸಂತಕುಮಾರ್ ಗಮನಾರ್ಹರು. ಬೊಳುವಾರು ಮಹಮದ ಕುಂಞಿ ಸಮರ್ಥ ಕಥೆಗಾರರಾಗಿದ್ದೂ, ಮುಸ್ಲಿಂ ಜನಾಂಗದ ವಿಚಾರವಂತ ಲೇಖಕರಾಗಿ ಪ್ರಾಧಾನ್ಯತೆ ಪಡೆಯುತ್ತಾರೆ. ಈ ವರ್ಷದ ಕಥಾ ಸಾಹಿತ್ಯದ ಕೊಡುಗೆ ಎಂದರೆ 'ಚಿತ್ತಾಲರ ಕತೆಗಳು.' ಯಶವಂತ ಚಿತ್ತಾಲರ ಬೆಳವಣಿಗೆಯೊಂದಿಗೇ ನವ್ಯ ಮತ್ತು ನವ್ಯೋತ್ತರ ಕಥಾ ಸಾಹಿತ್ಯದ ಗುರಿ, ದಿಕ್ಕು, ಆಶಯಗಳನ್ನು ಈ ಕಥಾಸಂಗ್ರಹದಿಂದ ಗುರುತಿಸ ಬಹುದು.



# ಕಾದಂಬರಿ

**ಕೆ. ವಿ. ನಾರಾಯಣ, ಎಂ. ಹೆಚ್. ಪದ್ಮಾ,**
**ಎಸ್. ವಿ. ವಿಮಲ**

ಈ ವರ್ಷ ನಮ್ಮ ಸಮೀಕ್ಷೆಗೆ ಬಂದಿರುವ ಕಾದಂಬರಿಗಳು ಸುಮಾರು ಅರವತ್ತು. ಈ ವಿಭಾಗದ ಸಮೀಕ್ಷೆ ಹಿಂದಿನ ವರ್ಷಗಳಂತೆ ಮುಂದುವರಿದಿದೆ.

ಈ ವರ್ಷ ಇಲ್ಲಿ ಸಮೀಕ್ಷೆಗೆ ಒಳಗಾಗಿರುವ ಕಾದಂಬರಿಗಳಲ್ಲಿ ಸಾಮಾಜಿಕ, ಚಾರಿತ್ರಿಕ, ಪತ್ತೆದಾರಿ, ಕಾದಂಬರಿಗಳು ಸುಮಾರು ಮುಪ್ಪತ್ತೈದು; ಮಹಿಳೆಯರ ಕಾದಂಬರಿಗಳು ಹತ್ತು; ಮತ್ತು ಅನುವಾದಿತ ಕಾದಂಬರಿಗಳು ಅಯ್ದು, 'ನೆಲೆ', 'ಬೀಜ', 'ಹಂತ', 'ಪ್ರಜ್ಞಾಬಲಿ' ಮೊದಲಾದ ಕಾದಂಬರಿಗಳು ಈ ವರ್ಷದ ಗಮನಾರ್ಹ ಬರವಣಿಗೆಗಳಾಗಿವೆ. 'ಊರಿಗೆ ಮರಳಿದಾಗ', 'ನಾಲ್ವರ ಸಂಕೇತ' ಮೊದಲಾದವು ಇಂಗ್ಲಿಷಿನಿಂದ ಕನ್ನಡಕ್ಕೆ ಬಂದ ಉತ್ತಮ ಕಾದಂಬರಿಗಳೆನ್ನಬಹುದು.*

**ನೆಲೆ** : (ಎಸ್. ಎಲ್. ಭೈರಪ್ಪ) ಪರ್ವ ಕಾದಂಬರಿಯನ್ನು ಬರೆದ ಅನಂತರ ಭೈರಪ್ಪನವರು ಬರೆಯಬಹುದಾದ ಕಾದಂಬರಿಯ ಬಗ್ಗೆ ಕುತೂಹಲಗಳಿದ್ದುದು ಸಹಜವೇ ಸರಿ. ನೆಲೆ ಹಾಗೆ ನೋಡಿದರೆ ಪರ್ವದ ಗಾಢ ನೆರಳಿನ ಅಂಚಿನಲ್ಲೇ ಸುತ್ತುವ ಕಾದಂಬರಿ. ಆ ಯತ್ನದ ಮುಖ್ಯ ಸಮಸ್ಯೆಗಳು ಇಲ್ಲೂ ಬೇರೆ ಬೇರೆ ರೂಪದಲ್ಲಿ ಕಾಣಿಸಿಕೊಳ್ಳುತ್ತವೆ. ಕಾಮ ಹಾಗೂ ಸಾವು ಇವುಗಳು ವ್ಯಕ್ತಿಯ ಬದುಕಿನಲ್ಲಿ ವಹಿಸುವ ಪಾತ್ರವನ್ನು ಕುರಿತು ತಮ್ಮ ಪಲವು ಕಾದಂಬರಿಗಳಲ್ಲಿ ಭೈರಪ್ಪನವರು ಚಿಂತಿಸಿರುವುದು ವಿದಿತ. ನೆಲೆ ಮುಖ್ಯವಾಗಿ ಅದನ್ನೇ ಅದರ ಆಕಾರ ವೈವಿಧ್ಯಗಳನ್ನೇ ಚಿಂತಿಸುವ ಉದ್ದೇಶವನ್ನು ಹೊಂದಿದೆ. ಕಾದಂಬರಿಯ ಮುಖ್ಯ ಸಂದರ್ಭಗಳಲ್ಲಿ ಇದು ಢಾಳಾಗಿ ಕಾಣಸಿಗುತ್ತದೆ. ಕಾಣಪ್ಪ (ಸಾಣಗೆರೆ) ಯಾವುದೋ ನಡುಗಡ್ಡೆಯೊಂದರಲ್ಲಿ ಪಡೆಯುವ ಬೃಹದಾಕಾರದ ಶಿಲೆಯ ಆವಿಷ್ಕಾರದ ಅನುಭವ ಹಾಗೂ ತಂದೆಯನ್ನು ಚಿತೆಯ ಮೇಲಿರಿಸಿದಾಗ ಕುಮಾರನಿಗೆ ಆಗುವ ಅನುಭವ ಇವೆರಡನ್ನು ಇಲ್ಲಿ ನಿದರ್ಶನಗಳನ್ನಾಗಿ ನೋಡಬಹುದು.

---

* ಸಂಪಾದಕರು

ಜವರಾಯಿ (ಹೆಸರೇ ಸಾವನ್ನು ಸೂಚಿಸುತ್ತಿದೆ) ಮತ್ತು ಕಾಳಪ್ಪ (ಈ ಹೆಸರೂ ಹಾಗೇ) ಇಬ್ಬರೂ ಜೀವನವನ್ನು ಕಾಣುವ ಕ್ರಮವನ್ನು ಕಾದಂಬರಿ ಕಾಲದ ಅಂತರದಲ್ಲಿರಿಸಿ ನೋಡುತ್ತದೆ. ಮದುವೆಯಾಗಿ ಸಂಸಾರ ಸಾಗಿಸುತ್ತಿದ್ದ ಜವರಾಯಿ ಮನೆ ಬಿಟ್ಟು ತನ್ನ ಹೆಂಗಸೊಬ್ಬಳೊಡನೆ ಜೀವಿಸಲು ತೊಡಗುತ್ತಾನೆ. ಹೀಗೆ ಕುಟುಂಬವನ್ನು ತೊರೆದು ತಮ್ಮದೇ ಆದ ಕಾರಣಗಳಿಂದ ಹೊರಗಾಗುವ ಭೈರಪ್ಪನವರ ಗಂಡು ಪಾತ್ರಗಳ ಮಾದರಿ ಇಲ್ಲಿ ಆವರ್ತಗೊಳ್ಳುತ್ತದೆ. ಮದುವೆಯೇ ಆಗದೇ ಜೀವನವನ್ನು ತಮ್ಮ ಹಾಗೂ ಇತರರ ಅನುಭವಗಳೊಡನೆ ಗ್ರಹಿಸಲು ಯತ್ನಿಸುವ ಕಾಳಪ್ಪನವರು ಜವರಾಯಿಯ ಜೀವನದ ಹಳೆಯ ಅಧ್ಯಾಯಗಳನ್ನು ತೆರೆಯುತ್ತಾ ಹೋಗುತ್ತಾರೆ. ಜವರಾಯಿ ಜೀವನದ ಗಾಢ ರಹಸ್ಯದ ಶೋಧನೆಯಲ್ಲಿ ಇದ್ದನೋ ಅಥವಾ ಅವನ ಬದುಕೇ ಜೀವನದ ಒಂದು ರಹಸ್ಯವನ್ನು ಸ್ಫೋಟಿಸುತ್ತದೋ ಎಂಬುದೇ ಕಾದಂಬರಿಯ ಒಂದು ತುಣ್ಣಾಟವಾಗಿದೆ. ನಾಯಿ ನಾಗರಾಜಪ್ಪನ ಮೂಲಕ ಜವರಾಯಿ ಕಂಡುಕೊಳ್ಳುವ ಸಾವಿನ ಅನುಭವದ ಗಾಢತೆಯನ್ನು ಹಾಗೂ ಆ ಅನುಭವ ಒದಗುವ ಕ್ರಮವನ್ನು ಗಮನಿಸಿದರೆ ಕಾದಂಬರಿ ಕಾಮ ಹಾಗೂ ಸಾವು ಇವುಗಳನ್ನು ಪರ್ಯಾಯಗಳೆಂದು ಸ್ವೀಕರಿಸುವ ನೆಲೆಗೆ ಸಾಗಿದಂತೆ ತೋರುತ್ತದೆ. ಇದಕ್ಕೆ ಕಾದಂಬರಿಯಲ್ಲಿ ಹಲವು ಕಡೆಗಳಲ್ಲಿ ಪುರಾವೆಗಳು ಒದಗುತ್ತವೆ. ಮದುವೆಯಾದರೂ ಮದುವೆ ಎನ್ನುವ ಸಂಸ್ಥೆಯನ್ನು ತಮಗೆ ಬೇಕಾದಂತೆ ತಿರುಚುತ್ತಿರುವ ಕುಮಾರ ಹಾಗೂ ಮಾಲತಿಯರ ಕುಟುಂಬದ ಆಖ್ಯಾನದಿಂದ ಮೊದಲಾಗಿ ಅವರ ಕುಟುಂಬದಲ್ಲಿ ಆಗುವ ಪರಿವರ್ತನೆಯಲ್ಲಿ ಕೊನೆಯಾಗುವ ಕಾದಂಬರಿ ಆ ಮೂಲಕ ಒಂದು ಮೌಲ್ಯಾತ್ಮಕ ನಿಲುವನ್ನೂ ದಾಖಲಿಸುತ್ತದೆ. ನರ್ಸ್ ಪಾರ್ವತಮ್ಮ ಒಂದು ವಿಚಿತ್ರ ಪಾತ್ರ. ಈ ಪಾತ್ರದ ಮೂಲ ಆಕಾರಗಳೂ ಕೂಡ ಭೈರಪ್ಪನವರ ಇತರ ಕಾದಂಬರಿಗಳಲ್ಲಿ ಕಾಣ ಸಿಗುತ್ತದೆ. ಆಕೆ ಜವರಾಯಿಯೊಡನೆ ಜೀವಿಸುತ್ತಲೇ ಆ ಜೀವನದ ವ್ಯಾಖ್ಯಾನವನ್ನೂ ಮಾಡುತ್ತಾ, ಅದನ್ನು ತನ್ನ ದಿನಚರಿಯಲ್ಲಿ ದಾಖಲು ಮಾಡುವ ಹೆಣ್ಣು. ಹೀಗೆ ಹುರಿಗೊಂಡ ಪಾರ್ವತಮ್ಮ ನಿಜವಾಗುವುದೇ ಇಲ್ಲ. ವಿಚಾರಗಳಷ್ಟೇ ಹೆಣ್ಣಾಗಿ ಮಾತಾಡಿದಂತೆ ಭಾಸವಾಗುತ್ತದೆ. ಅವಳ ದಿನಚರಿಯ ತಂತ್ರ ಈಗ ಕಾಳಪ್ಪನವರನ್ನು, ಜವರಾಯಿ ಸತ್ತ ಮೇಲೆ ಎದುರಿಸಲು ಅವಳಿಗೆ ಸ್ಥೈರ್ಯವನ್ನು ಒದಗಿಸಿದೆ. ಕಾದಂಬರಿ ಕೇವಲ ಚಿತ್ತವೃತ್ತಿಗಳ ನೆಲೆಯಲ್ಲಿ ವರ್ತಿಸುವ ಸುಬ್ಬಲಕ್ಷ್ಮಿಯನ್ನು ಪಾರ್ವತಮ್ಮ ಎದುರು ಇರಿಸಿ ಹೋಲಿಸಲು ಯತ್ನಿಸಿದೆ. ಹಾಗೆ ನೋಡಿದರೆ ಸುಬ್ಬಲಕ್ಷ್ಮಿಯೇ ನಿಜ. ಸರಿ ಎಂದು ನಾನು ಹೇಳುತ್ತಿಲ್ಲ. ನಿಜ ಎಂದಷ್ಟೇ ಹೇಳುತ್ತಿದ್ದೇನೆ.

ಈ ಕಾದಂಬರಿಯ ಶೈಲಿ ಕೂಡ ಗಮನಾರ್ಹವಾಗಿದೆ. ನೇರ ಕಥನದ ಮಾರ್ಗವನ್ನು ಬಿಟ್ಟು ಪಾತ್ರಗಳ ಒಳಗನ್ನು ಪಾರದರ್ಶಕಗೊಳಿಸಿ, ಆಂಗಿಕ

ಚಲನಗಳಿಂದ ವ್ಯಾಖ್ಯಾನಿಸುತ್ತಾ ನಿರೂಪಿಸುವ ವಿಧಾನವನ್ನು ಪರ್ವದಲ್ಲಿ ಹುಡುಕಿ ಕೊಂಡ ಭೈರಪ್ಪನವರು ಅದನ್ನು ಇಲ್ಲೂ ಮುಂದುವರೆಸಿದ್ದಾರೆ. ಇದು ಕನ್ನಡ ಕಾದಂಬರಿಗಳ ಶೈಲಿಯ ದೃಷ್ಟಿಯಿಂದ ಕುತೂಹಲಕಾರಿಯಾಗಿದ್ದರೂ ಅವರು ವಸ್ತು ವಿನ್ಯಾಸ ಹಾಗೂ ದೃಷ್ಟಿಕೋನದ ನೆಲೆಯಲ್ಲಿ ತಮ್ಮ ಮೂಲ ಆಕೃತಿಯ ಸಾಧ್ಯತೆ ಗಳನ್ನು ಮುಗಿಸಿಕೊಂಡಂತೆ ತೋರುತ್ತದೆ. ಹೀಗಾಗಿ ಅವರು ಏನು ಬರೆಯು ತ್ತಾರೋ ಅದು ಹೆಚ್ಚಿನ ಕುತೂಹಲಕ್ಕೆ ಕಾರಣವಾಗಿದೆ.

ಬೀಜ : (ಶಾಂತಿನಾಥ ದೇಸಾಯಿ) ಮುಕ್ತಿ ಕಾದಂಬರಿಯ ನಾಯಕ ಗೌರೀಶನೇ ಬೀಜ ಕಾದಂಬರಿಯ ಶ್ರೇಯಾಂಸ. ಹರೆಯದಲ್ಲಿ ವಾಸ್ತವದಿಂದ ಹೊರಗೆ ದಾಟಿದ ನಾಯಕ ಮಧ್ಯ ವಯಸ್ಸಿನಲ್ಲಿ ಮರಳಿ ತನ್ನ ಮಣ್ಣಿಗೆ ಬರುವ ಚಿತ್ರ ಈ ಕಾದಂಬರಿಯಲ್ಲಿದೆ. ಬೀಜ ಎಂಬುದು ಮುಂದೆ ಆಗಲಿರುವ ಪರಿವರ್ತನೆಯ ಸಾಧ್ಯತೆಗಳನ್ನು ಹುದುಗಿಸಿಟ್ಟುಕೊಂಡಿದೆ ಎಂಬ ಸೂಚನೆಯನ್ನು ಕೊಡುವಂತೆ, ಶ್ರೇಯಾಂಶ ಆಚರಣೆಯಲ್ಲಿ ತನ್ನ ತಂದೆಯ ವರ್ತನೆಗಳನ್ನು ಮುಂದುವರೆಸುವ ಆ ಹೊಣೆ ಹೊರುವ ಸೂಚನೆಗಳು ಇರುವುದರಿಂದ, ಭೂತಕಾಲದ ಮುಂದುವರಿಕೆ ಎಂಬ ಅರ್ಥವನ್ನೂ ಕೊಡುತ್ತದೆ. ಬೀಜ ಭವಿಷ್ಯವನ್ನು ಸ್ಫೋಟಿಸುವ ಭೂತ ಕಾಲದ ಸಂಗ್ರಹರೂಪ ತಾನೇ.

ಶ್ರೇಯಾಂಸ ತಂದೆಯೊಡನೆ ಹೋದುವ ವೈರುಧ್ಯ ಹ್ಯಾಮ್ಲೆಟ್ ಮಾದರಿ ಯದು. ಇದಕ್ಕೆ ಕೊಂಚ ವಿವರಣೆ ಅವಶ್ಯ. ತಂದೆಯೊಡನೆ ಅವನಿಗೆ ಶತ್ರುತ್ವ ಇರುವಂತೆ ತಾಯಿಯ ಕಾರಣವಾಗಿ ಸಂಬಂಧವೂ ಇರುತ್ತದೆ. ಈ ವಿರುದ್ಧ ಭಾವಗಳು ಶ್ರೇಯಾಂಸನಲ್ಲಿ ಒಂದು ಹಂತದಲ್ಲಿ ನಿರ್ಧಾರಕ್ಕೆ ಒಳಗಾಗುವುದು ಅವನ ಪಲಾಯನದಲ್ಲಿ. ಓದಿದ ಶ್ರೇಯಾಂಸ ಬೌದ್ಧಿಕ ಜೀವನವನ್ನು, ಕೌಟುಂಬಿಕ ಜೀವನವನ್ನು ರೂಪಿಸಿಕೊಂಡು ತನ್ನ ಪಾಡಿಗೆ ತಾನು ಇರುವಾಗ ತಂದೆಯ ಮರಣ ಅವನನ್ನು ಊರಿಗೆ ಮರಳಿ ಎಳೆತರುತ್ತದೆ. ಈಗ ಪ್ರಾರಂಭ ಭೂತದೊಡನೆ, ಅದರ ವಾಸ್ತವ ವಿನ್ಯಾಸದೊಡನೆ ಮುಖಾಬಿಲೆ. ಅವನ ಹಿಂದಿನ ಪ್ರೇಯಸಿ ರೇವತಿ, ವಿಧವೆಯಾಗಿ ಅಣ್ಣನ ಮನೆಯಲ್ಲಿ ಉಳಿದವಳು ಈಗ ಶ್ರೇಯಾಂಸನಿಗೆ ಭೇಟಿ ಯಾಗುತ್ತಾಳೆ. ಆಸ್ತಿಯ ಪ್ರಶ್ನೆ ಹೊಣೆಗಾರಿಕೆಯ ಪ್ರಶ್ನೆ ಮುಂತಾದವುಗಳೊಡನೆ ತಂದೆಯ ಮರಣದಿಂದ ಈವರವಿಗೆ ಸ್ಥಗಿತಗೊಂಡಿದ್ದ ಚಲಚಿತ್ರ ಅಲ್ಲಿಂದಲೇ ಚಲಿಸಲು ಮೊದಲಾದ ಅನುಭವ ಶ್ರೇಯಾಂಸನಿಗೆ ಆಗುವುದು. ಇದಿಷ್ಟೇ ಆಗಿದ್ದರೆ ಅದು ಕಾದಂಬರಿಗೆ ಒಂದು ಚೌಕಟ್ಟನ್ನು ಹಾಕುವ ಸಾಧ್ಯತೆ ಇತ್ತು. ಆದರೆ ಈ ಘಟ್ಟದಲ್ಲಿ ವ್ಯಕ್ತಿಯೊಬ್ಬನ ಸಮಸ್ಯೆಗಳು ಹೇಗೆ ಸಾಮಾಜಿಕ ಆಯಾಮವನ್ನು ಬಿಟ್ಟುಕೊಟ್ಟು ರೂಪು ತಳೆದುಕೊಳ್ಳಲಾರವು ಎಂಬುದು ಸ್ಪಷ್ಟಗೊಂಡ ಸಂಗತಿ ಯಾಗಿದೆ. ನಗರದಿಂದ ಈತ ಊರಿಗೆ ಬರುವ ನಿರ್ಣಯ ಮಾಡುತ್ತಿರುವಾಗಲೇ,

ಅವನ ಊರು ಕೃಷ್ಣಾಪುರ ನಗರದ ಎಲ್ಲ ಸಂಕೀರ್ಣತೆಗಳನ್ನು, ತೋರಿಕೆಯ ಲಕ್ಷಣ ಗಳನ್ನು ಪಡೆದುಕೊಳ್ಳುತ್ತಿರುತ್ತದೆ ಈ ಸಂಕರ ಸ್ಥಿತಿ ಕಾದಂಬರಿಯನ್ನು ಕೇವಲ ಶ್ರೇಯಾಂಸನ ಮಟ್ಟದಲ್ಲಿ ಮಾತ್ರ ಇರಿಸಿ ಬಿಡದೆ ಸಾಂಸ್ಕೃತಿಕವಾದ ನೆಲೆಗೂ ಒಯ್ಯು ತ್ತದೆ.

ಶ್ರೇಯಾಂಸನ ಮಗಳು ಹಳ್ಳಿಯ ವಾತಾವರಣಕ್ಕೆ ಪ್ರತಿಕ್ರಿಯಿಸುವ ರೀತಿ ಯನ್ನು ಕೃತಿ ಹಿಡಿದಿಡುವ ಬಗೆ ಗಮನಾರ್ಹವಾಗಿದೆ. ಅದು ಕೇವಲ ಪೌಗಂಡ ವಯಸ್ಸಿನ ಹಳಹಳಿಕೆಯಾಗದೇ ಯುವ ಜನಾಂಗ ಅತ್ಯಂತ ಪ್ರಬುದ್ಧ ಮನಸ್ಸೊಂದು ಪ್ರತಿಕ್ರಿಯಿಸಿದಂತೆ ತೋರುತ್ತದೆ. ಹೀಗಾಗಿ ಕಾದಂಬರಿಯ ನಾಯಕ ಎದುರಿಸುವ ಸಮಸ್ಯೆ ಮತ್ತೆ ಮತ್ತೆ ತಲೆಮಾರುಗಳನ್ನು ದಾಟಿ ಆವರ್ತಗೊಳ್ಳಬೇಕಾದ ಅನಿವಾರ್ಯತೆ ಏನೂ ಇಲ್ಲ.

ಸಾಕಷ್ಟು ದೀರ್ಘವಾದ ಚರ್ಚೆಯನ್ನು ಬಯಸುವ ಕೃತಿ ಇದು. ಹಾಗೂ ಅಂತಹ ಚರ್ಚೆಯು ಈಗಾಗಲೇ ಬೆಳೆಯುತ್ತಿದೆ ಕೂಡ. ಈ ಕಾದಂಬರಿಯ ಮೂಲಕ ದೇಸಾಯಿರು ತಮ್ಮ ಕಥಾಸಾಹಿತ್ಯ ರಚನೆಯ ಒಂದು ಪ್ರಮುಖ ಹಂತ ವನ್ನು ತಲುಪಿದಂತಾಗಿದೆ. ಇನ್ನು ಅವರು ಬರೆಯುವ ಕೃತಿಗಳು ಯಾವ ನೆಲೆ ಯನ್ನು, ಯಾವ ಧಾಟಿಯನ್ನು ಹೊಂದುತ್ತವೆ ಎಂಬುದು ಗಮನಿಸಬೇಕಾದ ಸಂಗತಿಯಾಗಿದೆ.

**ಓಡು! ಗೂಢಚಾರ ಓಡು!** (ಬಿ. ವಿ. ಅನಂತರಾಮ್) ದೇಶಗಳ ನಡುವೆ ನಡೆಯುವ ಗೂಢಚಾರಿಕೆಯ ವ್ಯೂಹವನ್ನು ಕುರಿತ ಕಾದಂಬರಿ. ಕಲ್ಪಿತ ವಸ್ತು ತಕ್ಕ ವಿವರಗಳೊಡನೆ ಸವೇಗವಾಗಿ, ಮಾತುಗಳಿಗೆ ಕಣದಷ್ಟು ಬೆಲೆ ಕೊಡದೆ ಓಡುವ ಕಾದಂಬರಿ ಇದು. 'ಕಥೆ'ಯನ್ನು ರೋಚಕಗೊಳಿಸುವ ಯತ್ನವಷ್ಟೇ ಇಲ್ಲಿದೆ.

**ನಿಷ್ಠೆ** (ಆರ್. ಬಿ. ಮಾಧವರಾವ್) ಜೀವನ ಹಾಗೂ ಕಾದಂಬರಿ ಇವೆರಡರ ಸಂಬಂಧದ ಬಗ್ಗೆ ಇರುವ ತಪ್ಪು ಕಲ್ಪನೆಯಿಂದ ಕನ್ನಡದಲ್ಲಿ ಇದುವರೆಗೆ ರಚನೆ ಯಾಗಿರುವ ನೂರಾರು ಕಾದಂಬರಿಗಳ ಸಾಲಿಗೆ ಇದು ಸೇರುತ್ತದೆ. ವಿವರಗಳು, ಅನುಭವಗಳು, ಸಮಸ್ಯೆಗಳು ಇವೆಲ್ಲ ಇದ್ದೂ ಕಾದಂಬರಿಗೆ ಬೇಕಾದದ್ದು ಕಟ್ಟೋಣ ವೆಂಬ ಸಂಗತಿಯನ್ನು ಈ ಕಾದಂಬರಿ ಮರೆಯುತ್ತದೆ. ಬರೆಯುವ ಕ್ರಿಯೆಯನ್ನು ಗೌರವದಿಂದ, ಜೀವನದ ಒಂದು ಮೌಲ್ಯವೆಂಬಂತೆ ಕಾಣುವ ಈ ಲೇಖಕರು ಹಾಗೂ ಈ ಬಗೆಯವರು ನಮ್ಮ ಕಾದಂಬರಿ ಪರಂಪರೆಯ ಹಿನ್ನೆಲೆಗೆ ಸರಿಯುತ್ತಾರೆ. ಎಲ್ಲಕ್ಕಿಂತ ಮುಖ್ಯವಾಗಿ ಕತೆ ಹೇಳುವುದು ಹಾಗೂ ಕಥೆ ಕಾಣಿಸುವುದು ಇವುಗಳ ವ್ಯತ್ಯಾಸ ತಿಳಿಯದಿರುವುದೆ ಇಲ್ಲಿನ ಸಮಸ್ಯೆ. ಹೀಗಾಗಿ ಕಾದಂಬರಿಕಾರರು ಮಾತ್ರ ಉಳಿಯುತ್ತಾರೆ; ಕಾದಂಬರಿ ಹುಟ್ಟುವುದೇ ಇಲ್ಲ.

**ಟ್ರಿಗರ್** (ಸಿ. ಎನ್. ಚನ್ನವೀರಯ್ಯ) ರೂಪಾ ಎಂಬ ಪತ್ತೆದಾರಿಣಿಯ ಸಾಹಸದ ಕಥೆ ಇದು. ಪತ್ತೇದಾರಿಣಿಯರು ಕನ್ನಡಕ್ಕೆ ಈಚೆಗೆ ಆಮದಾದವರು. ಆದರೆ ಕಾದಂಬರಿಕಾರರು ಹೇಳುವಂತೆ ಇಲ್ಲಿ ತಾಂತ್ರಿಕ ಜ್ಞಾನ ಮಾತ್ರ ಆಮದು; ಉತ್ಪಾದನೆ ಸ್ಥಳೀಯ. ಏಕೆಂದರೆ ರೂಪಾ 'ಭಾರತೀಯ ಪವಿತ್ರ ನಾರಿತ್ವದ ಸಂಕೇತ'. ಇಲ್ಲಿ ಬ್ಯಾಂಕ್ ದರೋಡೆಯ ಪ್ರಕರಣವನ್ನು ಎದುರಿಸಿ ಅದರ ಗೋಜಲನ್ನು ಬಿಡಿಸುವ ಹೊಣೆ ಅವಳಿಗಿದೆ. ಊರೂರುಗಳನ್ನು ದಾಟಿ ಕೊನೆಗೆ ದಾರದ ಇನ್ನೊಂದು ತುದಿಯನ್ನು ಹಿಡಿಯುತ್ತಾಳೆ; ಕಾದಂಬರಿಕಾರರು ರೂಪಾಳಂತೆ ಓದುಗರನ್ನೂ ಕೈ ಹಿಡಿದು ನಡೆಸಿ ಪಾರುಗಾಣಿಸುತ್ತಾರೆ.

**ಜಾಣರ ದೇವ** (ಶಾಂತಲಾ ಯೋಗೀಶ, ಯಡ್ರಾಮಿ) ನಿಜಗುಣ ಶಿವಯೋಗಿಗಳ ಜೀವನವನ್ನು ಆಧರಿಸಿದ ಕಾದಂಬರಿ. ವ್ಯುತ್ಪತ್ತಿಯನ್ನು ಬಂಡವಾಳವಾಗಿಸಿಕೊಂಡ ಈ ಕೃತಿಯನ್ನು ಬರೆಯಲು ವಹಿಸಿರುವ ಶ್ರಮಕ್ಕಾಗಿ ಲೇಖಕಿಯವರನ್ನು ಅಭಿನಂದಿಸೋಣ. ಏಕೆಂದರೆ ಇದೇ ವಸ್ತುವನ್ನು ಹೊಂದಿದ ಇನ್ನೊಂದು ಕಾದಂಬರಿಯನ್ನು ಓದಿ ಅಲ್ಲಿ ತಮಗೆ ಒಪ್ಪಿತವಾಗದ ಸಂಗತಿಗಳ ಮೂಲ ಜೂಲಗಳನ್ನು ಶೋಧಿಸಿ, ಆಕರ ಗ್ರಂಥಗಳನ್ನು ಓದಿ, ಬಲ್ಲವರೊಡನೆ ಚರ್ಚಿಸಿ ದಾಖಲೆಯನ್ನು ಸರಿಪಡಿಸಲು ಹೊರಟಿದ್ದಾರೆ. ಇದಕ್ಕಿಂತ ಸುಲಭವಾದ ದಾರಿಗಳಿದ್ದಾಗಲೂ ಈ ಕಗ್ಗಾಡಿಗೆ ಬಂದದ್ದು ಅವರ ನಂಬುಗೆಗೆ ಸಂಬಂಧಿಸಿದ ಸಂಗತಿಯಾಗಿರುವಂತೆ, ಈ ಸಾಹಿತ್ಯ ಪ್ರಕಾರದ ಸಾಧ್ಯತೆಗಳ ಬಗ್ಗೆ ಅವರಿಗಿರುವ ಗೌರವವನ್ನು ಸೂಚಿಸುತ್ತದೆ.

ಹೀಗಿದ್ದರೂ ಇಲ್ಲಿನ ಸಮಸ್ಯೆ ಈ ಪ್ರಕಾರದ ನಾಡಿಮಿಡಿತದ ಪರಿಚಯ ಸಾಲದಿರುವುದು. ಉತ್ಸುಕತೆ ಹಾಗೂ ಸಾಮಗ್ರಿಗಳನ್ನೂ ಭಾವುಕವಾದ ಮಾತುಗಳಲ್ಲಿ ಹೇಳುವ ಈ ಕೃತಿ ಸಾಧಾರಣವೆಂಬ ನೆಲೆಗೆ ಅಂಟಿ ನಿಲ್ಲುತ್ತದೆ.

**ಮನೆ-ಮನಸ್ಸು** (ಸಿ. ಆರ್. ಚಂದ್ರಶೇಖರ್) ಮನೋವೈಕಲ್ಯವುಳ್ಳ ಪಾತ್ರಗಳನ್ನು ಘಟನೆಗಳನ್ನು ಆಧರಿಸಿ ಕಾದಂಬರಿಗಳ ಸಾಲಿಗೆ ಬರುವ ಕೃತಿಯಿದು. ಮನೋವಿಜ್ಞಾನವನ್ನು ಕಾದಂಬರಿಯ ಜಗತ್ತನ್ನು. ಅಲ್ಲಿನ ಪಾತ್ರಗಳನ್ನು ಅವುಗಳ ವರ್ತನೆಯನ್ನು ಅರಿಯಲು ಬಳಸುವುದುಂಟು. ಹಾಗೆಯೇ ತಿರುವು ಮುರುವಾಗಿ ಆ ಜ್ಞಾನಶಾಖೆಯ ನೆರವಿನಿಂದ ಕೃತಿಯನ್ನು ರೂಪಿಸಲೂ ಯತ್ನಿಸುವುದುಂಟು. ಇಂಥ ಯತ್ನಗಳು ರೋಚಕವೂ, ಕುತೂಹಲಕಾರಿಯೂ ಆಗಿರುವುದು ಸಹಜ.

ಕಾದಂಬರಿಯಲ್ಲಿ ಒಂದು ಪಾತ್ರ ಏಕೆ ಹೀಗೆ ವರ್ತಿಸುತ್ತದೆ ಎಂಬುದಕ್ಕಿಂತ ಹೀಗೆ ವರ್ತಿಸಿದ್ದರಿಂದ ಏನಾಯಿತು ಎಂಬುದು ಮುಖ್ಯ ಪ್ರಶ್ನೆಯಾಗುತ್ತದೆ. ಇರಲಿ, ಈ ಕೃತಿ ವಿಘಟಿತ ಕುಟುಂಬದಲ್ಲಿ ಬೆಳೆದ ಪೌಗಂಡ ವಯಸ್ಸಿನ ಹುಡುಗಿಯೊಬ್ಬಳ ಮನೋಜಗತ್ತನ್ನು ಅದರ ವೈಕಲ್ಯವನ್ನು ವಿಶ್ಲೇಷಿಸಲು, ಆಕೆಯ ತಾಯಿ ತಂದೆಗಳ

ಬಾಲ್ಯರೂಪಗೊಂಡ ಬಗೆಯನ್ನು ಕೃತಿ ಮಂಡಿಸುತ್ತದೆ. ಇಡೀ ಜೀವನ ಹೀಗೆ ಸರಳ ವಿವರಣೆಗೆ ಒಗ್ಗಬಾರದೆ ಎಂದು ಆಶಿಸುವಂತಾಗುತ್ತದೆ. ಆದರೆ ಹಾಗಲ್ಲವಲ್ಲ. ಪ್ರಶ್ನೆಗಳು ಮಾತ್ರ ಇವೆ. ಉತ್ತರಗಳು ಮಾತ್ರ ಇಲ್ಲ. ಒಂದು ಮುಖವನ್ನು ನಿರ್ಗಳವಾಗಿ ಕೃತಿ ಮಂಡಿಸುತ್ತದೆ. ಈ ಬಗೆಯ ವಿಶ್ಲೇಷಣೆ-ಪರಿಹಾರದ ಧಾಟಿ ಮೂಲಭೂತವಾಗಿ ಜ್ಞಾನಶಾಖೆಯ ಸಾಮರ್ಥ್ಯದ ಬಗೆಗಿನ ಅಭಿಮಾನದಿಂದ ಬಂದುದು. ಆದರೆ ವಾಸ್ತವ ಅವಲೋಕಿಣೀ ವಿದ್ಯೆಯಂತೆ. ಇಗೋ ಇಲ್ಲಿ ಎಂದರೆ ಅಗೋ ನಾನಲ್ಲಿ ಎನ್ನುತ್ತದೆ...

ಇಂಥ ಬರವಣಿಗೆಗಳು ಸಾಹಿತ್ಯೇತರ ನೆಲೆಗಳಲ್ಲಿ ಕುತೂಹಲಕರವಾಗಲೂ ಬಹುದು. ಚಡಪಡಿಕೆಯ ಮಧ್ಯಮ ವರ್ಗದ ಜ್ಯೋತಿಷದ ಹಂಬಲಗಳಂತೆ ಎಲ್ಲವನ್ನೂ ನಕ್ಷೆ ಬಿಡಿಸುವ ಇಂಥ ಚಪಲಗಳ ಸಾಮಾಜಿಕ ಆಕಾರಗಳನ್ನೂ ಶೋಧಿಸ ಬಯಸುವವರಿಗೆ ಇಲ್ಲಿ ಸಾಮಗ್ರಿ ದೊರಕಲೂಬಹುದು.

**ಹಂತ** (ಕುಂದರನಾಡ ಪಾಟೀಲ) ಒಂದು ಉತ್ತಮ ಪ್ರಯತ್ನ. ದಶಕದ ತಿರುವಿನಲ್ಲಿ ಮೊದಲಾದ ರೈತ ಚಳುವಳಿಯ ಹಿನ್ನೆಲೆಯಲ್ಲಿ ಬರೆದ ಕೃತಿ ಇದು. ನಿರ್ದಿಷ್ಟ ಘಟನೆ, ವ್ಯಕ್ತಿಗಳನ್ನು ಆದರಿಸುವ ಗೋಜಿಗೇ ಹೋಗುವುದಿಲ್ಲ. ಸುಭದ್ರವಾದ ಕಥನ ಹಾಗೂ ದೃಢವಾದ ಪಾತ್ರ ಚಿತ್ರಣಗಳ ನೆಲಗಟ್ಟಿನಲ್ಲಿ ಕೃತಿ ಮೈತಳೆಯುತ್ತದೆ.

ನಾವು ರೂಪಿಸಿದ ಪ್ರಜಾಪ್ರಭುತ್ವದ ನಿಜವಾದ ತಗ್ಗು ದಿಣ್ಣೆಗಳ, ಒರಟು ಒಡಕುಗಳ ಮೈಯ ಪರಿಚಯವಾಗುತ್ತ ಹೋದಂತೆ ಭಗ್ನತೆಯ ಜೊತೆಗೆ ಹೊಸ ದಿಕ್ಕುಗಳ ಹುಡುಕಾಟ ಕೂಡ ಪ್ರಾರಂಭವಾಗುತ್ತದೆ. ಇದು ಆಶಾಚಿಂತನೆಯಂತೆ ತೋರಲುಬಹುದು. ಈ ವಿಘಟಿತ ಒಡಲಿನೊಳಗೆ ಸಂಯೋಗದ ಮೊಳಕೆಗಳನ್ನು ಇರಿಸಿಕೊಳ್ಳಲು ಯತ್ನಿಸಿದೆ. ರೈತರ ಚಳುವಳಿಯ ಆವಿಷ್ಕಾರವನ್ನು ಕಾರಣವಾದ ನೆಲೆಗಳ ಮೂಲಕ ಗ್ರಹಿಸುವುದೇ ಅಲ್ಲದೆ ಹಿತಾಸಕ್ತಿಗಳ ಜಾಲವನ್ನೂ, ತಂತ್ರವನ್ನೂ ಕೂಡ ವಿವರಿಸುತ್ತದೆ. ಇದಕ್ಕಾಗಿ ಸಮಾಜವನ್ನು ಎರಡು ಕಪ್ಪು ಬಿಳಿಗಳ ಲೋಕ ವೆಂಬಂತೆ ಒಡೆಯುವ ಹಟಕ್ಕೆ ಲೇಖಕರು ಜೋತು ಬಿದ್ದಿಲ್ಲ. ಆದರೆ ವ್ಯವಸ್ಥೆಯ ಗಟ್ಟಿಬೊಳ್ಳುಗಳನ್ನು ಖಚಿತಗೊಳಿಸಲು ಯತ್ನಿಸುತ್ತದೆ. ಇಂಥ ಯತ್ನಗಳು ಇನ್ನಷ್ಟು ಗಾಢ ಹಾಗೂ ವಿಸ್ತಾರವಾದ ಪ್ರಯತ್ನಗಳಿಗೆ ಮೊದಲಾಗಬೇಕು.

**ನೆಲ ಮುಗಿಲುಗಳ ಮಧ್ಯೆ** (ನಾ. ಮೊಗಸಾಲೆ) ಆಧುನಿಕ ಮನುಷ್ಯನ ಪ್ರಜ್ಞೆಗೆ ಸಂಬಂಧಿಸಿದ ಸಮಸ್ಯೆಯೊಂದನ್ನು ಈ ಕಾದಂಬರಿ ಕೇಂದ್ರದಲ್ಲಿರಿಸಿ ಕೊಂಡಿದೆ. ತನಗೆ ಬೇಡವೆನಿಸಿದ ತನ್ನ ಪ್ರಾಣವನ್ನು ತಾನೇ ಇಲ್ಲವಾಗಿಸಿಕೊಳ್ಳಲು ಮನುಷ್ಯನಿಗೆ ಹಕ್ಕು ಇದೆಯೇ ಎಂಬಂತೆ, ಇನ್ನು ಆಸೆಯ ಕಿರಣಗಳೇ ಇಲ್ಲವೆಂದು

ವೈದ್ಯರು ಖಚಿತಗೊಳಿಸಿದ ಜೀವವನ್ನು ಕೊನೆಗಾಣಿಸುವ ಹಕ್ಕು ಇದೆಯೋ ಎಂಬುದು ಮುಖ್ಯ ಪ್ರಶ್ನೆಯಾಗಿದೆ. ಕಾದಂಬರಿ ಈ ಪ್ರಶ್ನೆಯ ಜೊತೆಗೆ ಇಂಥ ನಿರ್ಧಾರವನ್ನು ತೆಗೆದುಕೊಂಡ - ಅಥವಾ ತೆಗೆದುಕೊಳ್ಳುವ ವ್ಯಕ್ತಿ ಅನುಭವಿಸುವ ಮಾನಸಿಕ ಯಾತನೆಯ ಕಡೆಗೂ ಗಮನ ಹರಿಸುತ್ತದೆ.

ಈ ಬಗೆಯ ಸಮಸ್ಯೆಗಳು ಇಡೀ ಜೀವನದ ಚೌಕಟ್ಟಿನೊಳಗೆ ಪಡೆಯುವ ಅರ್ಥಕ್ಕೂ, ಕೇವಲ ತಮಗೆ ತಾವೇ ಪಡೆದುಕೊಳ್ಳುವ ಅರ್ಥಕ್ಕೂ ಅಗಾಧ ವ್ಯತ್ಯಾಸವಿದೆ. ಕಾದಂಬರಿ ಸೌಲಭ್ಯ ಹಾಗೂ ತೀವ್ರತೆಗಾಗಿ ಎರಡನೆಯ ಹಾದಿಯನ್ನು ಹಿಡಿಯುತ್ತದೆ. ಇದು ಅದರ ಮಿತಿಯೂ ಆಗಿದೆ.

ಎಲಿಜಾ ಕೊನೆಗೆ ಆತ್ಮಹತ್ಯೆಯನ್ನು ಮಾಡಿಕೊಳ್ಳದಿರಲು ನಿರ್ಧರಿಸುವಳಾದರೂ, ಅದಕ್ಕೆ ಕಾರಣ ಅವಳ ನೆನಪಿನ ಭಾಗವಾಗಿದ್ದು ಈಗ ಎದುರು ಬಂದು ಬೆರೆತು ಧುತ್ತೆಂದು ಸಾವನ್ನಪ್ಪಿದ ಪ್ರಕಾಶನೇ ಕಾರಣನಾಗುತ್ತಾನೆ ಎಂಬುದೊಂದು ವ್ಯಂಗ್ಯ. ಎಲಿಜಾಳ ಜೀವನದ ಪುಟಗಳನ್ನು ಅವಳ ಪ್ರಜ್ಞೆ, ಹಾಗೂ ನಿರೂಪಣೆಯ ಮೂಲಕ ಮಂಡಿಸುವುದರಿಂದ ಕಾದಂಬರಿ ತನಗೆ ಬೇಕಾದ ಹಾಗೂ ಬೇಕಾದಷ್ಟು ವಿವರಗಳನ್ನು ಮಾತ್ರ ಆಯ್ದುಕೊಳ್ಳಲು ಸಾಧ್ಯವಾಗಿದೆ. ಏನಿದ್ದರೂ ಇಂಥದೊಂದು ಸಮಸ್ಯೆ ಈ ಕಾದಂಬರಿಯಲ್ಲಿ ಪಡೆದ ವ್ಯಾಪ್ತಿಗಿಂತ ಹೆಚ್ಚಿನ ಅವಕಾಶವನ್ನು, ಇಲ್ಲಿ ಪಡೆದ ಮಂಡನೆಗಿಂತ ಗಹನವಾದ ಮಂಡನೆಯನ್ನು ಬಯಸುತ್ತದೆ.

**ಕೆಂಪು ಮಣ್ಣು** (ಟಿ. ಕೆ. ರಾಮರಾವ್) ಒಂದು ರೋಚಕ ಕೃತಿ. ಅಪರಾಧವನ್ನು ಆಧರಿಸಿದ ಕಥಾನಕ. ಅಪರಾಧಕ್ಕೆ ಕಾರಣವೆಂದು ಸಾಮಾನ್ಯವಾಗಿ ಜನಜನಿತವಾಗಿರುವ "ಹೆಣ್ಣು, ಹೊನ್ನು, ಮಣ್ಣುಗಳನ್ನು ಆಧರಿಸಿ ಚಾಕಚಕ್ಯತೆಯ ಕಥೆಯನ್ನು ಹೆಣೆದಿದ್ದಾರೆ. ಆಸಕ್ತರಿಗೆ ಮೆಚ್ಚುಗೆಯಾಗಬಹುದು. ಅಪರಾಧಿಯನ್ನು ಹುಡುಕುವಲ್ಲಿ ತಪ್ಪು ಸುಳಿವುಗಳನ್ನು ಕೊಡುತ್ತಾ ಓದುಗರ ಆಸಕ್ತಿಯನ್ನು ಹುರಿಗೊಳಿಸಿ ಕೊನೆಗೆ ಇನ್ನು ಹಗ್ಗ ಹರಿಯುವುದೆಂದಾಗ ಅಲ್ಲಿಯೇ ಓಡಾಡಿಕೊಂಡಿದ್ದ ಪಾತ್ರವನ್ನು ಅಪರಾಧಿಯನ್ನಾಗಿಸುತ್ತಾರೆ. ಕಾದಂಬರಿಕಾರರು ಕಥಾಸಂವಿಧಾನವನ್ನು ಕಿಲಾಡಿತನದಿಂದ ರೂಪಿಸಬಲ್ಲವರು. ಅಲ್ಲದೆ ಓದುಗರ ಚಿಂತನಾಕ್ರಮದ ಟೊಳ್ಳುತನವನ್ನೂ ಬಲ್ಲರು. ಅದರ ಉಪಯೋಗವನ್ನು ಪಡೆಯುತ್ತಾರೆ. ಜೀವನದ ಬಗೆಗಿನ ಸರಳ ತಿಳುವಳಿಕೆಗಳಿಂದ ಹೊರಡುವ ಇಂಥ ಕೃತಿಗಳು ಬಿಡುವಿನ ಭೂತಕ್ಕೆ ಕುರುಕು ತಿಂಡಿಗಳಾಗುತ್ತಿವೆ.

**ದೀಪ ಕಮಲ** (ಬಿ. ಎ. ಮಧು) ಕೃತಿಕಾರರು ಯುವಜನರಲ್ಲಿ ಕಾಣುವ ಉದ್ವಿಗ್ನತೆಯ ಒಂದು ಮುಖವನ್ನು ಬಿಂಬಿಸುತ್ತಾರೆ. ಜೀವನವನ್ನು ಹೀನಾಯವಾಗಿಸುತ್ತಿರುವ ಸಂಗತಿಗಳಿಗೆ ಉತ್ತರ ರೂಪದ ಪರಿಹಾರವನ್ನು ಕೃತಿಗಳಲ್ಲಿ

ಕಲ್ಪಿಸುವುದೊಂದು ಪರಿಪಾಠ. ಅಂತರ ಧರ್ಮೀಯ ವಿವಾಹದಂತಹ ಸಂಗತಿ ಹಾಗೂ ಅದರ ಸಾಮಾಜಿಕ ಪರಿಪ್ರೇಕ್ಷ್ಯವನ್ನು ಕಲ್ಪಿಸಿಕೊಂಡು ಈ ಕಥಾನಕವನ್ನೂ ಹೆಣೆದಿದ್ದಾರೆ. ಭಾವುಕತೆಯೇ ಸ್ಥಾಯಿಯಾದ ಇಲ್ಲಿನ ಪಾತ್ರಗಳು ರಂಗುರಂಗಾದ ಗಾಳಿ ತುಂಬಿದ ಬಲೂನುಗಳಂತಿವೆ ಹೀಗಾಗಿ ಕೃತಿಕಾರರ ಉದ್ದೇಶ ಎಷ್ಟೇ ಗಹನವಾಗಿರಲಿ ಇಲ್ಲಿನ ಆದರ್ಶ ಯುವಜನಾಂಗ ಮಾತ್ರ ನಿಜವಾಗುವುದಿಲ್ಲ. ಇದಕ್ಕೆ ಇನ್ನೊಂದು ಕಾರಣ ಭಾಷೆಯ ಬಳಕೆಯ ಬಗ್ಗೆ ಇರುವ ತಪ್ಪು ತಿಳುವಳಿಕೆ. ಕಾದಂಬರಿಯಂಥ ಪ್ರಕಾರವೆಂದರೆ ಸುಮ್ಮನೆ ತಿಳಿದಂತೆ ಬರೆದರಾಯಿತು ಎಂಬುದು ನಂಬಿಕೆ. ಹೀಗಾಗಿ ಇಲ್ಲಿನದು ಇತ್ತ ಕಟು ವಾಸ್ತವವೂ ಆಗದ ಅತ್ತ ಕಾಲ್ಪನಿಕವೂ ಆಗದ ಅತಂತ್ರಲೋಕವಾಗಿದೆ.

**ಜೀಕೆ ಮಾಸ್ತರರ ಪ್ರಣಯ ಪ್ರಸಂಗ** (ಚಂದ್ರಶೇಖರ ಕಂಬಾರ) ಕಂಬಾರರು ಒಂದು ಹಾಸ್ಯ ಪ್ರಸಂಗವನ್ನು ಆಧರಿಸಿ ಕಥೆ ಹೇಳುತ್ತ ಕೊನೆಗೆ ಇಷ್ಟು ಲಘುವಾಗಿ ಬಿಟ್ಟೆತಲ್ಲ ಎಂಬ ಚಿಂತೆಯಲ್ಲಿ ಅದಕ್ಕೊಂದು ಗಹನತೆಯ ನೆಲೆಯನ್ನು ಒದಗಿಸಿ ಕೃತಿಯನ್ನು ಮುಗಿಸುತ್ತಾರೆ. ಮಧ್ಯವಯಸ್ಕ ಅಧ್ಯಾಪಕನೊಬ್ಬ ಯುವಕರ ಜೊತೆಗೆ ಮಸ್ತಾಗಿ ಭ್ರಮಿಸುತ್ತ ತನ್ನ ಜೀವನವನ್ನು ಅದರ ಅಚ್ಚುಕಟ್ಟನ್ನು ಒಡೆದುಕೊಂಡು ಮರೆಯಾಗುವ ಕಥೆಯಿಲ್ಲಿದೆ. ಜೀಕೆಯವರ ಇದುವರೆಗಿನ ಜೀವನದ ಅಚ್ಚುಕಟ್ಟು ಹೀಗೊಂದು ಸ್ಫೋಟಕ್ಕೆ ಕಾಯುತ್ತಿದ್ದು ಗಿರೆಪ್ಪ, ರೋಜಾರ ಸಂಚು ಅದಕ್ಕೆ ಕಾರಣವಾಯಿತೋ ಅಥವಾ ಜೀಕೆಯವರು ಭ್ರಮೆಯಿಂದ ವಾಸ್ತವಕ್ಕೆ ಬಂದರೋ ಎಂಬುದನ್ನು ನಿರ್ಧರಿಸುವುದು ಕಷ್ಟ. ಆದರೆ ಕೊನೆಗೆ ಜೀಕೆಯವರು ಸತ್ತರೆಂದು ತಿಳಿದಿದ್ದರೆ ಗಿರೆಪ್ಪರೋಜಾರ ಜೀವನಕ್ಕೊಂದು ದಿಕ್ಕು ತೋರಿಸುತ್ತಾರೆ. ಅಲ್ಲಿಂದ 'ಅದೋನೋ ದೊಡ್ಡದೆಂದರಲ್ಲ, ಅದನ್ನು ಹುಡುಕಿಕೊಂಡು ಕತ್ತಲಲ್ಲಿ ಮರೆಯಾದರು'. ಜೀಕೆಯವರ ಪಾತ್ರಕ್ಕೆ ಹಲವು ಬಿಡಿ ಎಳೆಗಳಿದ್ದು ಅವೆಲ್ಲವೂ ಕೂಡಿಕೊಂಡಿದ್ದರೆ ಒಂದು ಸಮೃದ್ಧ ಪಾತ್ರವಾಗಬಹುದಿತ್ತು. ಕೃತಿಯ ಹರವನ್ನು ಚಿಕ್ಕದು ಹಾಗೂ ಧಾಟಿಯನ್ನೂ ಲಘುವಾಗಿಸಿಕೊಂಡದ್ದರಿಂದ ಇಲ್ಲಿ ಅದು ಅಸಾಧ್ಯವಾಗಿದೆ.

**ಆಸ್ತಿ** (ಕುಂ. ವೀರಭದ್ರಪ್ಪ) ನಿರೂಪಣೆಯ ವಿಧಾನದಲ್ಲಿ ಹೊಸತನ ಬೇಕೆಂದು ಯತ್ನಿಸಿರುವ ಕೃತಿ ಇದು. ಮುಖ್ಯವಾಗಿ ಶೆಟ್ರು ಗುರುಶಾಂತಪ್ಪನ ಕಥೆ ಇದಾದರೂ ಅವನನ್ನು ಸುತ್ತುವರಿದಿದ್ದ ಜನರ ಮೂಲಕ ಕಥನವನ್ನು ಬೆಳೆಸುತ್ತಾರೆ. ಲೋಭಿಯೊಬ್ಬ ಚಿಕ್ಕ ಸಮಾಜದಲ್ಲಿ ಯಾಕೆ ರೂಪುಗೊಳ್ಳುವನು ಎಂಬುದಕ್ಕೆ ಕಾದಂಬರಿ ಉತ್ತರ ಹುಡುಕುವ ಉದ್ದೇಶ ಹೊಂದಿಲ್ಲ. ಆದರೆ ಅಂಥವನು ತನ್ನ ಪರಿಸರದಲ್ಲಿ ಏನಾಗುತ್ತಾನೆ ಎಂಬೊಂದು ಕುತೂಹಲವಷ್ಟೇ ಇಲ್ಲಿದೆ.

ಕಥೆ ಹೇಳುವಾಗ ಕಾದಂಬರಿಕಾರರು ವಿವರಗಳ ಸಮೃದ್ಧತೆಯ ಕಡೆಗೆ ಮುಖಮಾಡಿ, ಎಷ್ಟೋ ಕಡೆ ಖುಷಿಗಾಗಿ ಅನವಶ್ಯಕವಾದ ವಿವರಗಳನ್ನು ಹೇಳುವುದುಂಟು. ಇದರಿಂದ ನಿರೂಪಣೆಗೆ ಆಗಾಗ ಹಾಸ್ಯದ ಲೇಪ ದೊರೆಯಬಹುದು. ಅಲ್ಲದೆ ಕಥಾಲೋಕದ ದಟ ವಿವರಗಳು ಮಡುಗಟ್ಟಲೂಬಹುದು. ಆದರೆ ಬಂಧಕ್ಕೆ ನೆರವಾಗುವ ಸಂಭವ ಕಡಿಮೆ.

ನಾಯಕನನ್ನು ಹಾಗೂ ಇತರ ಮೂಲಕ ಮಂಡಿತನಾಯಕನನ್ನು ಸಂಯೋಜಿಸಿ ನಮ್ಮ ಜನಜೀವನದ ಒಂದು ಎಳೆಯನ್ನು ಹಿಡಿದು ಮಿಡಿಯುವಲ್ಲಿ ಈ ಕೃತಿ ಯಶಸ್ವಿಯಾಗಿದೆ. ಅಲ್ಲದೆ ಉದ್ದಕ್ಕೂ ಕಾದಂಬರಿಕಾರರು ಬೇಕೆಂತಲೇ ಕಥಾ ಜಗತ್ತಿನೊಡನೆ ಉದ್ವಿಗ್ನರಹಿತರಾಗಿ ಭಾವುಕತೆ ಇಲ್ಲದೆ ವರ್ತಿಸುವುದರಿಂದ ಪರಿವರ್ತನೆಯ ನೆಲೆಗಳನ್ನು ಗುರುತಿಸುವುದು ಸಾಧ್ಯವಾಗಿದೆ. ಇದು ಇತ್ತೀಚಿನ ಕನ್ನಡ ಕಥಾಸಾಹಿತ್ಯ ಹಿಡಿಯುತ್ತಿರುವ ಒಂದು ಹೊಸ ದಿಕ್ಕು ಕೂಡ ಆಗಿರಬಹುದು.

**ಬೇಲಿ ಮತ್ತು ಹೊಲ** (ಕುಂ. ವೀರಭದ್ರಪ್ಪ) ಆದರೆ 'ಅಸ್ತಿ'ಯ ಬಗ್ಗೆ ಹೇಳಿದ ಮಾತುಗಳನ್ನೆ ಈ ಕೃತಿಯ ಬಗ್ಗೆ ಹೇಳುವುದು ಕಷ್ಟ. ಹಾಗೆ ನೋಡಿದರೆ ಇಲ್ಲಿನದು ನೇರ ಕಥಾನಕ. ಹಾಗೂ ಸಾಮಾಜಿಕ ಸಂದರ್ಭವೊಂದರ ರೊಚ್ಚಿಗೆ ಕಾರಣವಾಗುವ ಕೊಳಕನ್ನು ಬಯಲಿಗಿಡುವ ಉದ್ದೇಶ ಕೃತಿಗಿದೆ. ಸಮಾಜದ ಅಪರಾಧಿಗಳನ್ನು ಹತ್ತಿಕ್ಕುವ ರಕ್ಷಕರೇ ಅಪರಾಧಿಗಳಾಗುವ, ಆ ಮೂಲಕ ಸಾಮಾನ್ಯರು ಅರಕ್ಷಿತರಾಗಿಬಿಡುವ ಸಂದರ್ಭವೊಂದನ್ನು ಕಾದಂಬರಿಕಾರರು ಆಯ್ದು ಕೊಂಡಿದ್ದಾರೆ. ತನ್ನದೇ ಆದ ಲಯದಲ್ಲಿ ಚಲಿಸುತ್ತಿದ್ದ ಸಾಂಪ್ರದಾಯಿಕ ಸಮಾಜದೊಳಗೆ ಸ್ವಾತಂತ್ರ್ಯಾನಂತರದಲ್ಲಿ ಪ್ರವೇಶಿಸುವ ಕಾನೂನು ಹಾಗೂ ಅದರ ಪಾಲಕರ ವ್ಯವಸ್ಥೆ ಆ ಲಯವನ್ನು ಭಗ್ನಗೊಳಿಸಿರುವ ವಸ್ತು ಕನ್ನಡ ಕಾದಂಬರಿ ಕ್ಷೇತ್ರಕ್ಕೆ ಪರಿಚಿತ. ಆದರೆ ಈ ಭಗ್ನತೆಯ ತೀವ್ರತೆ ಹೆಚ್ಚುತ್ತಲೇ ಇರುವುದು ಈ ಕಾದಂಬರಿಯ ಕಾಳಜಿಯಾಗಿದೆ.

ಹೀಗೆ 'ಸತ್ಯ'ವನ್ನೇ ಮಂಡಿಸಿದರೂ ಈ ಕೃತಿ ಪೂರ್ಣವೆನ್ನಿಸದು. ಏಕೆಂದರೆ ರೋಗದ ಚಹರೆಗಳನ್ನು ಎದೆಬಡಿತ ಹೆಚ್ಚಿಸುವಂತೆ ವೈದ್ಯ ವಿವರಿಸುವ ಬಗೆ ಇಲ್ಲಿದೆ. ಆದರೆ ಜೀವನವೆಂಬುದು ಈ ನಿಟ್ಟಿನಲ್ಲಿ ಹಾಗೂ ಈ ಬಗೆಯಲ್ಲಿ ವ್ಯಾಖ್ಯೆಗೆ ಸಿಲುಕುವುದಿಲ್ಲ. ಇದು ಅತ್ತಿತ್ತ ಸಂಪರ್ಕ ಕಳೆದ ಕೊಂಡಿಯಂತಾಗಿದೆ. ಇದರಿಂದಲೇ ಸುಲಭವಾದ ಉದ್ವಿಗ್ನತೆಗೆ ಕೃತಿ ಪಕ್ಕಾಗಿದೆ.

**ವೃತ್ತ** (ಕೃಷ್ಣಮೂಸಡಿ) ಹಳ್ಳಿಯ ಕೌಟುಂಬಿಕ ರಕ್ಷೆಯಿಂದ ಓದಲೆಂದು ನಗರಕ್ಕೆ ಬಂದ ಎಳೆಯ ವಯಸ್ಸಿನ ಶ್ರೀನಿವಾಸ ಹಾಗೂ ಇಂಥವರೇ ಕೆಲವರ ಕತೆ

ಇದು. ಯಾವಾಗ ಬೇಕಾದರೂ ಆಸ್ಫೋಟಿಸಲು ಸಿದ್ಧವಿರುವ ಕೌಮಾರ್ಯದ ಲೋಕ ನವುರಾದುದೂ ಹೌದು ಅತ್ಯಂತ ವಿಕ್ಷಿಪ್ತವಾದುದೂ ಹೌದು. ಲೇಖಕರು ಅಂಥ ಲೋಕವನ್ನು ಹಿಡಿದಿಡಲು ಬೇಕಾದ ಪರಿಕರಗಳನ್ನು ರೂಪಿಸಿಕೊಂಡಿದ್ದಾರೆ. ಶ್ರೀನಿವಾಸ ವಯಸ್ಕ ಪ್ರಪಂಚದೊಳಕ್ಕೆ ಕಾಲಿಡುವಾಗ ಅನುಭವಿಸುವ ಪಲ್ಲಟಗಳನ್ನು ನಿರುದ್ವಿಗ್ನರಾಗಿ ಮಂಡಿಸುತ್ತಾರೆ. ಅವನ ವರ್ತನೆಗಳನ್ನು ತಮ್ಮ ನಿರೂಪಣೆಗಳನ್ನು ಸಂಯೋಜಿಸಿ ಕಥೆಗೊಂದು ಆಕಾರವನ್ನು ತಂದುಕೊಡುತ್ತಾರೆ. ಆದರೆ ಕಥೆಗಾರರು ತಮ್ಮ ಮಾತುಗಳಲ್ಲಿ ಕಥನವನ್ನು ಕೈಗೆತ್ತಿಗೊಂಡಾಗ ಮಾತ್ರ ಕೃತಿಯು ಹದ ತಪ್ಪುತ್ತದೆ. ಶಾಂತಳ ಬದುಕಿನ ಕೋಟಲೆಗಳನ್ನು ಹೇಳುವಾಗ ಅದು ನಮಗೆ ಹೇಳುತ್ತಿರುವುದೋ ಶ್ರೀನಿವಾಸನಿಗೋ ಎಂಬುದು ಖಚಿತವಾಗದೆ ಉಳಿಯುತ್ತದೆ. ಇದರಿಂದಾಗಿ ಕಾದಂಬರಿಗೆ ಹಲವು ಕೇಂದ್ರಗಳಿರುವಂತೆ ಭಾಸವಾಗುತ್ತದೆ. ಅಲ್ಲದೆ ಜೀವನದ ಬೆಳವಣಿಗೆ ನಿರಂತರವಾದುದಾಗಿ ಅದರ ಹಂತಗಳ ಪಲ್ಲಟದಲ್ಲಿ ಮೌಲ್ಯಾತ್ಮಕವಾದ ತರತಮಗಳನ್ನು ಮಾಡುವುದು ಕಷ್ಟ, ಹಾಗೆ ಮಾಡುವುದು ಸರಿಯೂ ಅಲ್ಲ. ಕಾದಂಬರಿ ವಯಸ್ಕ ಜಗತ್ತಿನ ಕ್ರೌರ್ಯ ಹಾಗೂ ತರ್ಕರಾಹಿತ್ಯವನ್ನು ಕೌಮಾರ್ಯದ ರಮ್ಯತೆಯೊಡನೆ ಹೋಲಿಸಲು ಅಲ್ಲಲ್ಲಿ ಯತ್ನಿಸಿದೆ. ಇಷ್ಟೆಲ್ಲ ಮಿತಿಗಳಲ್ಲೂ ಇದು ಒಂದು ಯುಕ್ತ ಯತ್ನವೆನ್ನಲಡಿಯಿಲ್ಲ.

ಭೂತನಗರಿ (ಬರಗೂರು ರಾಮಚಂದ್ರಪ್ಪ) ಮೊದಲಲ್ಲೇ ಲೇಖಕರು ಹೇಳುವ ಮಾತಿದು. "ಈ ಕೃತಿಯನ್ನು 'ಕಾದಂಬರಿ' ಎಂದು ಕರೆಯಲಾಗಿದ್ದರೂ ಇದಕ್ಕೆ ಕಾದಂಬರಿಯ ಸಾಂಪ್ರದಾಯಿಕ ಸ್ವರೂಪವಿಲ್ಲ." ತಮ್ಮ ಕೃತಿಯ ಆಕೃತಿಯ ಬಗ್ಗೆ ಕೃತಿಕಾರರು ಎಚ್ಚರ ವಹಿಸಿರುವುದು ಇಲ್ಲಿ ಗಮನಕ್ಕೆ ಬರುವ ಸಂಗತಿ. ಕಾದಂಬರಿ ಸ್ವರೂಪದ ವ್ಯಾಪ್ತಿ ಎಷ್ಟು ವಿಶಾಲವಾಗಿದೆಯೆಂದರೆ ಅದರ ಒಂದು ತುದಿಯಲ್ಲಿ ಶುದ್ಧ ಚರಿತ್ರೆಯೂ ಇನ್ನೊಂದು ತುದಿಯಲ್ಲಿ ಕಾವ್ಯವು ನಿಂತಿವೆ. ಈಗಾಗಿ ಈ ಕೃತಿಯನ್ನು ಕಾದಂಬರಿಯ ಒಂದು ಬಗೆಗೆ ಸೇರಿಸುವುದು ಅಸಾಧ್ಯವೇನೂ ಅಲ್ಲ.

ವಾಸ್ತವ ವಿವರಗಳನ್ನು ಕಾಲ್ಪನಿಕ ಜಗತ್ತಿನ, ವಿವರಗಳ ಅನ್ಯೋಕ್ತಿಯ ಮೂಲಕ ಹೇಳುವ ಕ್ರಮ ಬರಗೂರರದು. ಏನು ಹೇಳಲಾಗುತ್ತಿದೆ ಎಂಬ ಮೂಲಕ ಏನನ್ನು ಗ್ರಹಿಸಬೇಕು ಎಂಬುದರ ಸೂಚನೆಗಳು ಕುರುಹುಗಳು, ಕೃತಿಯ ಹೆಸರಿಂದ ಮೊದಲಾಗಿ ಹಲವು ಕಡೆ ದೊರಕುತ್ತವೆ. ನಿರ್ದಿಷ್ಟ ಚಾರಿತ್ರಿಕ ಸಂದರ್ಭವನ್ನು ಕುರಿತ ವ್ಯಾಖ್ಯೆಯೊಂದು ಮೊದಲು ಸಿದ್ಧವಾಗಿ ಅದಕ್ಕೆ ತಕ್ಕ ತಿರುಚಿದ ವಾಸ್ತವ ಕಥಾನಕದಲ್ಲಿ ಮೈದಳೆಯುವುದು ಇಲ್ಲಿನ ಕ್ರಮ. ವ್ಯಾಖ್ಯೆಯ ಬಗ್ಗೆ ಒಪ್ಪಿಗೆ ಇಲ್ಲದ ಓದುಗ ಕೃತಿಯು ಜಗತ್ತನ್ನು ಸೂಸುವ ಆ ಮೂಲಕ ಗ್ರಹಿಸುವ ಕ್ರಿಯೆಯಿಂದ ವಿಮುಖನೂ ಆಗಿಬಿಡಬಹುದು. ಈ ಬಗೆಯ ಕೃತಿಗಳು ಅಂಥ ಇಕ್ಕಟ್ಟನ್ನು ಅನುಭವಿಸಲೇಬೇಕಾಗುತ್ತದೆ.

ವಿಡಂಬನೆ ಇಲ್ಲಿ ಬರಗೂರರ ಶೈಲಿಯ ಮುಖ್ಯ ಲಕ್ಷಣ. ಅದೂ ಕಟಕಿಯ ನೆಲೆಗೆ ನಡೆಯುವ ವಿಡಂಬನೆ. ಕಥೆಯ ಸಂವಿಧಾನ ಹಾಗೂ ನಿರೂಪಣೆ ಎರಡರಲ್ಲೂ ಈ ಅಂಶ ಢಾಳಾಗಿದೆ. ಸಮಕಾಲೀನವಾದುದನ್ನು, ಅದರ ಗತಿಯನ್ನು ಹಿಡಿದಿಡಲು ಲಾಗಾಯ್ತಿನಿಂದಲೂ ಸಾಹಿತ್ಯದಲ್ಲಿ ಈ ಮಾರ್ಗವನ್ನು ಅನುಸರಿಸಲಾಗಿದೆ. ಹೀಗೆ ಮಂಡಿಸುವ ಕ್ರಮದಲ್ಲಿ ಲೇಖಕನ ಮುಂಗಾಣ್ಕೆಯು ಪ್ರಮಾಣವೆಷ್ಟು ಎಂಬುದು ಮುಖ್ಯವಾಗುತ್ತದೆ. ಅದರಿಂದಲೇ ಕೃತಿಗೆ ಘನತೆಯೊದಗುತ್ತದೆ. ಬರಗೂರರು 'ಸಾರ್ವಕಾಲಿಕ ಮಹತ್ವ'ದ ಕೃತಿಗಳನ್ನು ಕೊಡುವ ಬಗ್ಗೆ ಕಹಿಯಾಗುವ ಕಾರಣವಿಲ್ಲ. ಏಕೆಂದರೆ ಶ್ರೇಷ್ಠಕೃತಿಯೊಂದು ಏಕಕಾಲಕ್ಕೆ ಎರಡೂ ಆಯಾಮಗಳನ್ನು ಪಡೆದಿರುವುದಷ್ಟೆ.

ಕೃತಿಯ ವಿವಕ್ಷೆಯು ಸಾಧಿತವಾಗಿದೆ. ಆದರೆ ವಿವಕ್ಷೆಯೇ ಸೀಮಿತವಾಗಲೇಕೆ ಎಂಬುದು ನನ್ನ ಪ್ರಶ್ನೆ.

**ಹೋರಾಟ** (ಪಿ. ವಿ. ನಾರಾಯಣ) ಸಾರ್ವಜನಿಕ ಉದ್ಯಾನವನಕ್ಕೆ ಮೀಸಲಾದ ಜಾಗವೊಂದನ್ನು ಖಾಸಗೀ ಶಾಲೆಯೊಂದರ ಆಟದ ಮೈದಾನವಾಗಿ ಪರಿವರ್ತಿಸುವುದನ್ನು ವಿರೋಧಿಸಿ 'ಪ್ರಜಾಪ್ರಭುತ್ವ ವ್ಯವಸ್ಥೆ'ಯ ಹೋರಾಟ ವಿಧಾನವನ್ನು ಅನುಸರಿಸುವ ಮುಖ್ಯ ಕಥಾನಕ ಇಲ್ಲಿದೆ. ಪೂರಕವಾಗಿ ಕೆಲವು ಇನ್ನಿತರ ವಿವರಗಳೂ ಸೇರಿಕೊಂಡಿವೆ. ಹೋರಾಟದ ಮುಂಚೂಣಿಯಲ್ಲಿ ನಿಂತ ರವೀಂದ್ರನು ಅಂಗವಿಕಲ. ಈ ವಿವರದಿಂದ ಮತ್ತೇನನ್ನೋ ಸೂಚಿಸಲು ಲೇಖಕರು ಯತ್ನಿಸಿದ್ದಾರೆಂದು ತೋರಿದರೂ ಅದು ಅಸ್ಪಷ್ಟವಾಗಿದೆ. ಏಕೆಂದರೆ ರವೀಂದ್ರ ಹೀಗೆ ಅಂಗವಿಕಲನಾದುದರ ಹಿನ್ನೆಲೆಯನ್ನು ಸಾಕಷ್ಟು ವಿವರವಾಗಿಯೇ ನೀಡಲಾಗಿದೆ.

ಜಮೀನನ್ನು ಒತ್ತುವರಿ ಮಾಡಿಕೊಳ್ಳುವವರ ವಿರುದ್ಧ ಹೋರಾಟ ನಡೆಸುವವರ ಪರವಾಗಿ ಲೇಖಕರ ಸಹಾನುಭೂತಿ ಇದೆ. ಹೋರಾಟದ ವ್ಯೂಹವನ್ನು ಭೇದಿಸಲು ಎದುರಾಳಿಗಳು ನಡೆಸುವ ಹೂಟವನ್ನು ಕುರಿತಂತೆ ಕಾದಂಬರಿ ವ್ಯಗ್ರವಾಗಿದೆ. ಹೀಗಿದ್ದರೂ ಆಟದ ಮೈದಾನ ಹಾಗೂ ಉದ್ಯಾನವನ ಇವುಗಳಲ್ಲಿ ನೈತಿಕ ಆಯ್ಕೆ ಯಾವ ಕಡೆಗೆ? ಮಕ್ಕಳು ಆಡುವಾಗ ಆಗುವ ಗದ್ದಲವನ್ನು ಸಹಿಸದಿರುವುದೂ ಹಾಗೂ ಅದೇ ಕಾರಣವಾಗಿ ಹೋರಾಟಕ್ಕೆ ಮುಂದಾಗುವುದೂ ವಿಚಿತ್ರವಾಗಿದೆ. ಅಥವಾ ಶಾಲೆಯ ಮಾಲೀಕ–ಆತನ ಸಾಮಾಜಿಕ ಸ್ತರವನ್ನು ಅವನ ಭಾಷೆಯ ಮೂಲಕ ಖಚಿತಗೊಳಿಸಲಾಗಿದೆ–ಈ ಭೂಮಿಯನ್ನು ಪಡೆದು ತನ್ನ ಆಸ್ತಿಯನ್ನಾಗಿ ಮಾಡಿಕೊಳ್ಳುವುದರ ವಿರುದ್ಧ ಹೋರಾಟವೋ! ಇದು ಕಾದಂಬರಿಯ ಮುಖ್ಯ ಗೊಂದಲ.

**ಆತ್ಮಾಹುತಿ** (ಆರ್. ಬಸವರಾಜ್) ಮಾಸ್ತಿಯವರ 'ನಿಜಗಲ್ಲಿನ ರಾಣಿ' ಕಥೆಯ ವಸ್ತುವನ್ನೇ ಆಧರಿಸಿ ಬರೆದ ಕಾದಂಬರಿ. ಒಂದೆರಡು ಪಾತ್ರಗಳನ್ನು,

ಕೆಲವು ಘಟನೆಗಳನ್ನು ಹೊಸದಾಗಿ ಕಲ್ಪಿಸಿಕೊಂಡಿದ್ದಾರೆ. ರೋಚಕ ಹಾಗು ರಂಜಕ ವಾಗುವ ಮಾದರಿಯಲ್ಲಿ ಕಥೆ ಹೇಳುವ ಬಗೆಯನ್ನು ಅನುಸರಿಸಿದ್ದಾರೆ. ಈ ಮಿತಿಯಲ್ಲಿ ಅಚ್ಚುಕಟ್ಟಾದ ರಚನೆ.

**ಚಿನ್ನದ ಪದಕ** (ನಚಿಕೇತ) ಪತ್ತೇದಾರಿ ಕತೆ. ಪೋಲೀಸ್ ಅಧಿಕಾರಿ ಪತ್ತೇದಾರನೊಬ್ಬನ ಕೃತಿಗಳ ಚಾಣಾಕ್ಷ ವಿವರಗಳಿಂದ ಸುಳಿವು ಪಡೆದು ಬೇರೆ ಬೇರೆ ಅಪರಾಧಗಳ ತನಿಖೆ ನಡೆಸುತ್ತಾನೆ. ಆ ಪತ್ತೇದಾರನೇ ಒಬ್ಬ ಕೊಲೆಗಾರನಾಗಿರುವ ಘಟನೆಯೊಂದನ್ನು ಅದೇ ಪೋಲೀಸ್ ಅಧಿಕಾರಿ ಕಂಡುಹಿಡಿಯುವ ಕತೆ ಇಲ್ಲಿದೆ. ಎಲ್ಲವೂ ಲೆಕ್ಕಾಚಾರದಂತೆ ಚಕಚಕನೆ ನಡೆಯುತ್ತವೆ.

**ರೊಚ್ಚಿಗೆದ್ದ ರೂಪಾ** (ಸಿ. ಎನ್. ಚನ್ನವೀರಯ್ಯ) ರೂಪಾ ಎಂಬ-ಈಗಾಗಲೇ ಹೇಳಲಾದ ಪತ್ತೇದಾರಿಣಿಯ ಸಾಹಸದ ಕೃತಿ ಇದು. ಇಲ್ಲಿಯೂ ಆಕೆಯನ್ನು ಗೌರವಾನ್ವಿತಳೆಂದು ಸೂಚಿಸಿ ಆಕೆಯನ್ನು ಕಾದಂಬರಿಯಲ್ಲಿ ಎಲ್ಲಿಯೂ 'ಏಕವಚನ ಬಳಸಿ' ಬರೆದಿಲ್ಲ ಎಂದಿದ್ದಾರೆ. ದೇಶವಿದೇಶಗಳಲ್ಲಿ, ಮಾಂತ್ರಿಕರ ಡೆನ್‌ಗಳಲ್ಲಿ ಸುತ್ತಾಡಿ ಹಂತಕರನ್ನು ಚಕಿತಗೊಳಿಸುವಂತೆ ಬಯಲು ಮಾಡುವ ಕತೆಯನ್ನು ಇಲ್ಲಿ ಹೆಣೆಯಲಾಗಿದೆ. ಸುಮ್ಮನೆ ಓದುವ ಪಣ ತೊಟ್ಟರೆ ಆಗಾಗ ಹುಸಿನಗು, ಅಟ್ಟಹಾಸ ಗಳೊಡನೆ ಓದಬಹುದು.

**ಅಂಚೆಯಿಂದ ಬಂದದ್ದು** (ಬಿ. ಶಾಮಸುಂದರ) ಇದೂ ಇನ್ನೊಂದು ಪತ್ತೆದಾರಿ ಕತೆ. ಅಪರಾಧಿ ನಮ್ಮ ಸುತ್ತಮುತ್ತಲೇ ಸುಳಿದಾಡುತ್ತಿದ್ದು ಕೊನೆಗೆ ಪುರಾವೆಗಳೆಲ್ಲ ಆ ಪಾತ್ರವನ್ನೂ ಹೊರಗಿಡುವ ತಂತ್ರ ಇಲ್ಲಿ ಬಳಕೆಯಾಗಿದೆ. ಅಪರಾಧದ ತನಿಖೆ, ಅಪರಾಧಿಯ ಜಾಣ್ಮೆ ಹಾಗೂ ಅಪರಾಧದ ಕಾರಣ ಇವುಗಳಲ್ಲಿ ಯಾವುದಕ್ಕೆ ಒತ್ತುಕೊಡಬೇಕೆಂಬ ಸಮಸ್ಯೆ ಕಾಡಿದಂತಿದೆ. ಈ ಚಿಕ್ಕ ಕೃತಿ ಎಲ್ಲವನ್ನೂ ಅಷ್ಟಿಷ್ಟು ಮಾಡಿ ಮುಗಿಸುತ್ತದೆ.

**ಅಶೋಕಗಾನ** (ಬಿ. ಎ. ಮಧು) ಇದೇ ಲೇಖಕರ ಇನ್ನೊಂದು ಕೃತಿಯ ಬಗ್ಗೆ (ದೀಪಕಮಲ) ಬರೆದ ಮಾತು ಇಲ್ಲಿಯೂ ಅನ್ವಯಿಸುತ್ತದೆ. ಕತೆಯ ಹಂದರ ಮಾತ್ರ ಇಲ್ಲಿ ತೀರಾ ಜಾಳುಜಾಳು. ಎತ್ತೆತ್ತಲೋ ಹರಿದು, ದಿಕ್ಕು ಬದಲಿಸಿ ಕೊನೆಗೆ ದಡ ಮುಟ್ಟುತ್ತದೆ. ಬಿಟ್ಟುಬಿಟ್ಟು ಓದಿದರೆ ಬೇರೆಬೇರೆ ಕಾದಂಬರಿಗಳನ್ನು ಓದಿದಂತೆ ಭಾಸವಾಗುತ್ತದೆ. ಸಂಕಷ್ಟಗಳನ್ನು 'ಗೆದ್ದುನಿಂತ' ನಾಯಕನನ್ನು ಲೇಖಕರು ತಮ್ಮ ಮಾತುಗಳಷ್ಟೇ ಎತ್ತರಿಸುತ್ತಾರೆ. ಸಂದರ್ಭಗಳನ್ನು ಚಿತ್ರಿಸು ವಾಗಲಂತೂ ಸಂಭಾಷಣೆಗಳು ನಿರುದ್ದೇಶವಾಗಿ ಹರಿಯುತ್ತವೆ. ಇದೊಂದು ಹಟದ ಕಾದಂಬರಿ.

**ಪ್ರಜ್ಞಾ ಬಲಿ** (ನಾ. ಡಿಸೋಜ) ಇದನ್ನು ಕ್ರಾಂತಿಕಾರೀ ಸಾಮಾಜಿಕ ಕಾದಂಬರಿ ಎಂದು ಲೇಖಕರು ಕರೆದಿದ್ದಾರೆ. ಒಬ್ಬ ತಾಂತ್ರಿಕ ತನ್ನ ಸಂಚಿನಲ್ಲಿ ಹೆಣ್ಣನ್ನು ಶೋಷಿಸುವ ಪ್ರಸಂಗವನ್ನು ಇಲ್ಲಿ ಕತೆ ಆಧರಿಸಿದೆ. ಪಾತ್ರಗಳ ಹೆಸರುಗಳು, ಕತೆ ನಡೆಯುವ ಕಾಲ ದೇಶಗಳ ಚಹರೆ ಕಳಕೊಂಡ ಸ್ಥಿತಿಯಿಂದ ಇದೊಂದು ರಮ್ಯ ಕಥಾನಕವೆಂದು ತಿಳಿಯಬಹುದು. ಇಂತಹ ಚೌಕಟ್ಟಿನಲ್ಲಿ ಪಲ್ಲಟವನ್ನುಂಟುಮಾಡಲು ಯತ್ನಿಸಿ ಬಲಿಯಾದ ಹೆಣ್ಣೊಬ್ಬಳು ಇಲ್ಲಿದ್ದಾಳೆ. ಕತೆ ತನಗೆ ತಾನೇ ಒಂದು ಅಚ್ಚುಕಟ್ಟನ್ನು ಪಡೆದಿದೆ. ಆದರೆ ಅದರ ಆಚೆಗಿನ 'ಸಾಮಾಜಿಕ' 'ಕ್ರಾಂತಿ' ಮುಂತಾದ ನೆಲೆಗಳು ಮಾತ್ರ ಗಟ್ಟಿಯಾಗಿಲ್ಲ. ಪ್ರಸಂಗಗಳಿಗೆ ತಮ್ಮನ್ನು ಮೀರಿದ ಅರ್ಥವನ್ನು ಬಿಟ್ಟುಕೊಡುವ ತವಕವಾಗಲೀ ಬಯಕೆಯಾಗಲೀ ಇಲ್ಲದೆ ಸ್ವಮೋಹದಿಂದ ಮೆರೆಯುತ್ತವೆ. ಹಾಗೆ ನೋಡಿದರೆ ಪ್ರತಿಭಟನೆಗೆ ಕಾರಣವಾಗುವ ಪ್ರಜ್ಞೆಯ ಉಗಮ ವಿಕಾಸಗಳನ್ನು ನಮ್ಮ ಕಾಲದ ಕೃತಿಗಳು ಮಂಡಿಸಲು ತಕ್ಕ ಅನ್ಯ ಅವಕಾಶಗಳಿರುವಾಗ ಲೇಖಕರು ಇಂಥದೊಂದು ಚೌಕಟ್ಟನ್ನು ಆರಿಸಿಯೇ ತಮಗಿದ್ದ ಅವಕಾಶವನ್ನು ಕಳೆದುಕೊಂಡಿದ್ದಾರೆ.

**ಹೇ ಕಾಪುರುಷ** (ಕೆ. ಟಿ. ಗಟ್ಟಿ) ಈಚೆಗೆ ಕತೆ ಬರೆಯುವವರಲ್ಲಿ ಬಿಡುವಿಲ್ಲದವರೆಂದರೆ ಗಟ್ಟಿಯವರೇ ಸರಿ. ಕಾರಂತರು ತಮ್ಮ ಕೃತಿಗಳಲ್ಲಿ ಕೆಲವೊಮ್ಮೆ (ಉದಾ: ಸವಿಸಾಕ್ಷಿ) ತೆಗೆದುಕೊಳ್ಳುವ ಭ್ರಷ್ಟಸನ್ಯಾಸಿ ಕತೆಯನ್ನು ಇಲ್ಲಿ ಗಟ್ಟಿಯವರು ಹೆಣೆದಿದ್ದಾರೆ. ಎಂದೋ ಊರಿನಿಂದ ಓಡಿಹೋಗಿ ಕೊನೆಗೆ ಅದೇ ಊರಿಗೆ ಭಾರಿ ಮಾಂತ್ರಿಕ ಶಕ್ತಿಯೊಡನೆ ಹಿಂತಿರುಗಿ ವಿದ್ಯಾಸಂಸ್ಥೆಗಳನ್ನು ಕಟ್ಟಿ ಜನರಮೇಲೆ ಮೋಡಿ ಹಾಕುವ ಭಗವಾನನು ಇಲ್ಲಿ ಕೇಂದ್ರದಲ್ಲಿದ್ದಾನೆ. ಅವನ ಹುನ್ನಾರಗಳಿಗೆ ಹೆಂಗಸರು ಬಲಿಯಾಗುತ್ತಾರೆ ; ಅಮಾಯಕರು ಸಿಕ್ಕಿಬೀಳುತ್ತಾರೆ. ಅವನಿಂದ ತನ್ನ ಕುಟುಂಬ ಒಡೆಯುವುದನ್ನು ಸಹಿಸದೆ ಪ್ರತಿಭಟಿಸಿ ಅವನ ಮೂಲಚೂಲಗಳನ್ನು ಶೋಧಿಸಿ ಸವಾಲಾಗುತ್ತಾನೆ ಸುದರ್ಶನ. ಕೊನೆಗೆ ಭಗವಾನನ ಹಿಡಿತದಲ್ಲಿ ಅವನೇ ಸಿಕ್ಕಿ ಬೀಳುವ ಹಂತಕ್ಕೆ ತಲುಪುತ್ತಾನೆ. ಕೊನೆಗೆ ಎಲ್ಲ ಕಾರಾಸ್ಥಾನಗಳನ್ನು ಸ್ಫೋಟಿಸಿ —ನಿಜವಾದ ಅರ್ಥದಲ್ಲಿ ಎಲ್ಲಕ್ಕೂ ತೆರೆ ಎಳೆಯುತ್ತಾನೆ. ಅಂತ್ಯಕ್ಕೆ ಆಯ್ದ ಮಾರ್ಗ ಹತಾಶೆಯದೆಂದು ತೋರಬಹುದು.

ಇಡೀ ಸನ್ನಿವೇಶವನ್ನೂ, ಪಾತ್ರಗಳನ್ನೂ ಅವುಗಳ ವರ್ತನೆಗಳನ್ನೂ ಲೇಖಕರು ಯುಕ್ತವಾಗಿ ಕಟ್ಟಿದ್ದಾರೆ. ಭಗವಾನನ ಅವಾಂತರಗಳನ್ನು ಚಿತ್ರಿಸುವಾಗ ಅವನ ವಿರೋಧಿ ಕೂಟದ ತವಕವನ್ನು ವಿವರಿಸುವಾಗ, ಭಗವಾನನ ಶಕ್ತಿಗಳನ್ನು ನಮಗೆ ತೋರಿಸುವಾಗ, ಸುತ್ತಣ ಪರಿಸರದ ಇಬ್ಬಂದಿತನವನ್ನು ಹೇಳುವಾಗ ಕಾದಂಬರಿ ಒಂದೇ ಬಗೆಯ ಉತ್ಸುಕತೆಯನ್ನು ಕಾಯ್ದುಕೊಳ್ಳುತ್ತದೆ. ಈ ಕಾರಣ

ದಿಂದಾಗಿಯೇ ಎರಡೂ ವಿರೋಧಗಳನ್ನು ತಾರ್ಕಿಕವಾಗಿ ಮುಖಾಮುಖಿಯಾಗಿಸಲು ಸಾಧ್ಯವಾಗದೆ ಅಂತ್ಯದ ಸಂಚನ್ನು ಆಯ್ದುಕೊಳ್ಳಬೇಕಾಗಿ ಬಂದಿದೆ.

**ಯುಗಾಂತರ** (ಕೆ. ಟಿ. ಗಟ್ಟಿ) ಇಲ್ಲಿ ಕಾಲದೇಶ ಪಾತ್ರ ಘಟನೆ ಎಲ್ಲವೂ ಕಾಲ್ಪನಿಕ. 'ಯುಗಾಂತರ' ಎಂಬುದೊಂದು ಪತ್ರಿಕೆ. ಸಮಾಜದಲ್ಲಿ ಹಣ, ಅಧಿಕಾರದ ಕೇಂದ್ರದಲ್ಲಿ ಭ್ರಷ್ಟವ್ಯಕ್ತಿಗಳ ಕೂಟವಿದೆ. ಅವರ ವಿರುದ್ಧ ಜನರನ್ನು ಎಚ್ಚರಿಸಲು ಪತ್ರಿಕೆ ಇದೆ. ಭ್ರಷ್ಟರು ತಮ್ಮ ಕೂಟದ ಬಲದಿಂದ ಏನನ್ನಾದರೂ ಮಾಡಲು ಶಕ್ತರಾಗುತ್ತಾರೆ. ಎದುರಾಗಿ ನಿಂತ ಪತ್ರಿಕೆಗೆ ಅಂದರೆ ಅದರ ಹಿಂದಿನ ಯುವಜನರಿಗೆ–ಇರುವುದು ನೈತಿಕ ಶಕ್ತಿಯೊಂದೆ. ಕೊನೆಗೆ ಕೂಟ ಇನ್ನು ಎದುರಾಳಿ ಗಳು ತಲೆ ಎತ್ತುವಂತಿಲ್ಲ ಎಂಬ ಹಂತಕ್ಕೆ ತಲುಪಿದಾಗ ಕಾಂತಿಮತಿ ಮಾರ್ಜಿನಾಳಂತೆ ಕೂಟದೊಳಗೆ ನುಗ್ಗಿ ಅವರನ್ನು ಗುಂಡಿಕ್ಕಿ ಕೊಲ್ಲುತ್ತಾಳೆ. ಆದರೆ ಈ ಮಾರ್ಜಿನಾ ತನ್ನನ್ನು ಕೊಂದುಕೊಳ್ಳುತಾಳೆ; ಹುತಾತ್ಮಳಾಗುತ್ತಾಳೆ.

ಲೇಖಕರು ಸ್ಫೋಟಕ ವಸ್ತುವನ್ನು ಆಯ್ದುಕೊಂಡಿದ್ದಾರೆ. ಆದರೆ ಆದರ ಮಂಡನೆಗೆ ತಕ್ಕ ವಿವೃತ ಚಿಂತನೆ ಇಲ್ಲಿಲ್ಲ. ಏಕೆಂದರೆ ಅಂತ್ಯದ ಪ್ರಪಾತಕ್ಕೆ ಕಥನವನ್ನು ಒಯ್ಯಲೆಂದು ಎಲ್ಲ ವಿವರಗಳನ್ನು ಒಂದೇ ಕಡೆಗೆ ತಿರುಗಿಸುತ್ತಾರೆ. ಓದುಗರಿಗೆ ಇದು ರೋಚಕವಾಗಬಹುದಾದರೂ ಜೀವನಕ್ಕೆ ಇದು ದೂರದ ದಾರಿ. ಈ ಕಾಂದಬರಿ ಯನ್ನು ಮೆಚ್ಚುವುದು ಎಂದರೇನು ಎಂಬುದೇ ಪ್ರಶ್ನೆ. ಕೊನೆಗೆ ಕೂಟದವರು ಬಲಿಯಾದರು ಎಂಬ ನಿರಾಳವೇ ನಮ್ಮ ಮೆಚ್ಚುಗೆಗೆ ಕಾರಣವೇ? ಅಥವಾ ಎಲ್ಲೋ ಒಂದು ಕಡೆ ಅವರ ಎಲ್ಲ ಸಂಚುಗಳು ನಮ್ಮವೂ ಆಗಿರಬಹುದೇ ? ಈ ಬಗೆಯ ಕೃತಿಗಳು ಕನ್ನಡದಲ್ಲಿ ಈಗೀಗ ಹೆಚ್ಚಾಗುತ್ತಿವೆ. ಇವುಗಳ ರಾಜಕೀಯ ಸಂದಿಗ್ಧತೆ ಯನ್ನು ಅಧ್ಯಯನ ಮಾಡುವ ಮೂಲಕ ಮಾತ್ರ ಕೃತಿಯ ಸ್ವರೂಪ ಸ್ಪಷ್ಟ ಗೊಳ್ಳುತ್ತದೆ. ಅಂತಹ ಅಭ್ಯಾಸಕ್ಕೆ ಇದೊಂದು ತಕ್ಕ ಸಾಮಗ್ರಿಯುಳ್ಳ ಕಾದಂಬರಿ.

**ರಸದಾಳಿ** (ಸಿ. ಎನ್. ಚನ್ನವೀರಯ್ಯ) ಇದು ಈ ಲೇಖಕರ ಈ ವರ್ಷದ ಸಾಮಾಜಿಕ ಕಾದಂಬರಿ. ಶಾರದೆ ಎಂಬುವವಳ ಜೀವನದ ಏರಿಳಿತಗಳ ಕತೆ ಇದು. ಆಕೆ ಎಲ್ಲಿಯೋ ಬೆಳೆದು ವಿವಿಧ ಅನುಭವಗಳನ್ನು ಹಾಯ್ದು ನೃತ್ಯ ಕಲಾವಿದೆಯಾಗುವ ಕ್ರಮವನ್ನು ಕಾದಂಬರಿ ವಿವರಿಸುತ್ತ ಹೋಗುತ್ತದ. ಅವಳ ಜೀವನದಲ್ಲಿ ಭಾಗವಹಿಸುವ ಇತರ ಪಾತ್ರಗಳಲ್ಲಿ ಯಾವುವೂ ಬೆಳೆದು ನಿಲ್ಲುವುದಿಲ್ಲ. ಸುಮ್ಮನೆ ಕತೆ ಬೆಳೆಯುತ್ತ ಹೋಗುತ್ತದೆ. ಲೇಖಕರು ಕತೆ ಹೇಳುತ್ತ ತಮಗೆ ಬೇಕೆನಿಸಿದ ವಿವರಗಳಲ್ಲಿ ಭಾವುಕತೆಯನ್ನು ಬೆರೆಸುತ್ತ ಮುಂದುವರೆಯುತ್ತಾರೆ. ನಿರರ್ಥಕ ಸಂದರ್ಭ, ಸಂಭಾಷಣೆಗಳ ಸಾಲು ಸಾಲು ಇಲ್ಲಿದೆ. ಓದಿ ಮುಗಿಸುವ ಹೊತ್ತಿಗೆ ರಸ ಹಿಂಡಿದಂತಾಗುವವಳು ನಾಯಕಿಯಲ್ಲ ನಾವು ; ಓದುವವರು.

**ಚಕ್ರಧಾರಿಣಿ** (ಷಹಜಾನ್) ವಿಗ್ರಹ ಚೋರರ ಗುಂಪನ್ನು ಭೇದಿಸಲು ರವಿಸೇನಾನಿ ನಡೆಸುವ ಸಾಹಸ. ಕೃತಿ ಓದುಗರ ವಿಕೃತ ನೆಲೆಗಳನ್ನು ಕೂಡ ಬಳಸಿಕೊಳ್ಳಲು ಹಿಂಜರಿಯುವುದಿಲ್ಲ. ಅದಕ್ಕೆ ತಕ್ಕ ಹೆಸ್ಣೊಂದು ಇಲ್ಲಿ ಪಾತ್ರವಾಗಿ ಬಂದಿದೆ.

**ಮಧುರ ಸ್ವಪ್ನ** (ತ್ರಿವಿಕ್ರಮ) ಪ್ರೀತಿಸಿದ್ದವರು ಸಾಮಾಜಿಕ ಅಂತಸ್ತುಗಳಿಂದಾಗಿ ಬೇರೆಯಾಗುತ್ತಾರೆ. ಆದರೆ ಎಂದೋ ಮತ್ತೆ ಭೇಟಿಯಾಗುತ್ತಾರೆ. ಹೆಣ್ಣಿನ ಜೀವನ ನರಕಕೂಪವಾಗಿರುತ್ತದೆ. ಆಕೆಯ ಜೀವನ ಅಂತ್ಯಗೊಂಡ ಮೇಲೆ ಈತ ಬೇರೊಂದು ಮದುವೆಯಾಗುತ್ತಾನೆ. ಬಾಲಿಶವಾದ ಘಟನೆಗಳು, ದಿಕ್ಕು ದೆಸೆಯಿಲ್ಲದ ಮಾತುಕತೆಗಳು ಭಾವುಕತೆ ತುಂಬಿದ ನಿರೂಪಣೆ ಇವೆಲ್ಲ ಸೇರಿ ಇದೊಂದು ಕೃತಿಯಾಗಿದೆ.

**ಸ್ಪರ್ಶ** (ರಾಧಾಕೃಷ್ಣ ಭಟ್, ಪೆರ್ಲ) ಯುವ ವಯಸ್ಸಿನ ಈ ಲೇಖಕರು ಕತೆಯನ್ನು ಹೇಳುತ್ತ ಹೋಗುವುದೆ ಕಾದಂಬರಿ ಎಂದು ತಿಳಿದಂತಿದೆ. ಅದರಲ್ಲೂ ಇಡೀ ಕಾದಂಬರಿಯನ್ನು ಅಭೂತ ಕ್ರಿಯಾಪದಗಳಲ್ಲಿ ನಿರ್ವಹಿಸಿರುವುದಂತೂ ವಿಚಿತ್ರವಾಗಿದೆ. ಯಾವ ಪುಟ ತೆಗೆದರೂ 'ನಗುತ್ತಾನೆ', 'ನುಡಿಯುತ್ತಾನೆ', 'ನೋಡುತ್ತಿರುತ್ತಾರೆ', 'ಗಮನಿಸುತ್ತಾರೆ', ಇಂಥವೇ ಕ್ರಿಯಾಪದಗಳು ಅಲ್ಲದೆ ಪಾತ್ರಗಳಿಗೆ ಯಾವ ಅವಕಾಶವನ್ನು ಕೊಡದೇ ಲೇಖಕರೇ ಅವರ ಪರವಾಗಿ ಮಾತಾಡುವುದಂತೂ ಇಡೀ ನಿರೂಪಣೆಯನ್ನು ನೀರಸವನ್ನಾಗಿಸಿದೆ.

**ರಾಮುಸಿಂಗನ ಶೌರ್ಯ** (ಎಚ್. ವಿಟ್ಟಲಶೆಣೈ) ಇದೊಂದು ರೋಮಾಂಚಕಾರೀ ಕಾದಂಬರಿ. ಅಪರಾಧಿಗಳ ತಂಡವನ್ನು ಭೇದಿಸುವ ಕತೆ ಇಲ್ಲಿದೆ. ಎಲ್ಲವೂ ಊಹೆ, ಕಲ್ಪನೆಗಳನ್ನು ಆಧರಿಸಿದೆ. ಸುಮ್ಮನೆ ಓದಲು ಕುಳಿತರೆ ಅಡ್ಡಿಯಿಲ್ಲ. ಹೆಚ್ಚಿನದೇನೂ ಹೇಳುವ ಉದ್ದೇಶ ಕೃತಿಗೂ ಇಲ್ಲ.

**ನಿರೀಕ್ಷೆ** (ಬೆನಕನಪಳ್ಳಿ. ಜಿ. ನಾಯಕ) ನಗರಗಳಲ್ಲಿ ಅಪರಾಧ ನಡೆದರೂ ಪತ್ತೇದಾರಿ ಕೆಲಸ ನಡೆಯುವುದು ಲಂಬಾಣಿಗಳ ತಾಂಡೆಯಲ್ಲಿ. ಅಲ್ಲಿನ ವಿವರಗಳನ್ನು ಬಳಸಿಕೊಂಡು ಚಾಕಚಕ್ಯತೆಯ ಕಥೆಯೊಂದನ್ನು ಹೆಣೆಯಲಾಗಿದೆ. ನಿರೂಪಣೆಯಲ್ಲಿ ಇನ್ನಷ್ಟು ಎಚ್ಚರ ಬೇಕೆನಿಸುತ್ತದೆ. ಪೂರ್ವಾಪರ ವಿರೋಧದ ಪ್ರಸಂಗಗಳೂ ಇವೆ. ಅಥವಾ ಹಾಗೆ ಭಾಸವಾಗುವಂತೆ ಸಂದರ್ಭಗಳನ್ನು ಜೋಡಿಸಲಾಗಿದೆ.

—**ಕೆ. ವಿ. ನಾರಾಯಣ**

* * * *

**ಮಹಿಳಾ ಕಾದಂಬರಿಗಳು**

ಈ ವರ್ಷ ಪ್ರಕಟವಾದ ಕಾದಂಬರಿಗಳಲ್ಲಿ 'ಮಹಿಳಾ ಕಾದಂಬರಿಗಳು' ಎಂದು ಪ್ರತ್ಯೇಕ ವಿಭಾಗವೊಂದನ್ನು ಮಾಡಿಕೊಂಡು ವಿಮರ್ಶಿಸಹೊರಟಿರುವುದು, ಬಹುಶಃ ವಿಮರ್ಶೆಯ ಅನುಕೂಲಕ್ಕಾಗಿಯೂ ಇರಬಹುದು ; ಅಥವಾ ಇದುವರೆಗೆ ಶೋಷಣೆಗೆ ಒಳಗಾಗಿ ಇದೀಗ ಜಾಗೃತಳಾಗಿ ಅಭಿವ್ಯಕ್ತಿಯನ್ನು ದೊರಕಿಸಿಕೊಳ್ಳುತ್ತಿರುವ ಮಹಿಳೆಯರನ್ನು ಒಂದು ವರ್ಗವಾಗಿ ನೋಡುವ ದೃಷ್ಟಿಯಿಂದಲೂ ಇರಬಹುದು ಅಥವಾ ಇವೆರಡು ಕಾರಣಗಳೂ ನಿಜವಿರಬಹುದು.

ಈ ವರ್ಷ ಸಮೀಕ್ಷೆಗಾಗಿ ಬಂದಿರುವ ಮಹಿಳಾ ಕಾದಂಬರಿಗಳ ಸಂಖ್ಯೆ ಕಳೆದ ವರ್ಷಗಳಿಗೆ ಹೋಲಿಸಿದರೆ ಬಹಳ ಕಡಿಮೆಯೆನ್ನಬಹುದು. ಬಹುಮಂದಿ ಲೇಖಕಿಯರ ಕಾದಂಬರಿಗಳಲ್ಲಿ ಕಾಣುವುದು ಯಥಾಪ್ರಕಾರ ಕೌಟುಂಬಿಕ ಸಮಸ್ಯೆಗಳ ಚಿತ್ರಣ ಮಾತ್ರ. ಅನುಭವದ ಗಟ್ಟಿತನ ಹಾಗೂ ವೈವಿಧ್ಯದ ಕೊರತೆ ಈ ಕಾದಂಬರಿಗಳ ಪ್ರಮುಖ ದೋಷ. ಇದರ ಕಾರಣಗಳು ಹಲವಾರಿರಬಹುದು. ಮೊದಲನೆಯದಾಗಿ, ನಮ್ಮ ಪುರುಷ ಪ್ರಧಾನ ಸಮಾಜದಲ್ಲಿ ಸ್ತ್ರೀ ಇದುವರೆಗೆ ತುಳಿತಕ್ಕೆ ಒಳಗಾಗಿ, ಶಿಕ್ಷಣ ತಂದು ಕೊಡುವ ಸ್ವಾತಂತ್ರ್ಯ ಪ್ರಜ್ಞೆಯಿಂದ ವಂಚಿತಳಾಗಿ ಪರಂಪರಾಗತ ನಂಬಿಕೆಗಳಿಗೆ ತನ್ನನ್ನು ತಾನು ಒಡ್ಡಿಕೊಂಡಿರುವುದು. ಎರಡನೆಯದಾಗಿ, ಸ್ತ್ರೀಯ ಅಭಿವ್ಯಕ್ತಿಯಲ್ಲಿ ಅನುಭವದ ಗಟ್ಟಿತನವಿಲ್ಲದಿರುವುದಕ್ಕೆ ಪುರುಷನಿಗಿರುವ ಅನುಭವ ಸ್ವಾತಂತ್ರ್ಯ ಅವಳಿಗಿಲ್ಲದಿರುವುದು. ಅವಳ ಈ ಅನುಭವದ ಸೀಮಿತತೆಗೆ ದೈಹಿಕ, ಮಾನಸಿಕ, ಸಾಮಾಜಿಕ ಇತಿಮಿತಿಗಳೂ ಕಾರಣ. ಮೂರನೆಯದಾಗಿ, ಇರುವ ಅನುಭವವನ್ನೇ ಅವಳು ಪ್ರಾಮಾಣಿಕವಾಗಿ ಅಭಿವ್ಯಕ್ತಿಸಲಾರಳು. ಸಾಮಾಜಿಕ ಅವಹೇಳನಕ್ಕೆ ತುತ್ತಾಗುವ ಭಯ ಇದಕ್ಕೆ ಕಾರಣವಿರಬಹುದು. ನಾಲ್ಕನೆಯದಾಗಿ, ಅವಳಿಗಿರುವ ಅಧ್ಯಯನದ ಕೊರತೆ ಅವಳ ಬರವಣಿಗೆಗೆ ಮಿತಿ ಹಾಕುತ್ತದೆ. ಇಂದಿನ ದಿನಗಳಲ್ಲಿಯಂತೂ, ಮನೆಯ ಒಳಗೆ-ಹೊರಗೆ ಎರಡೂ ಕಡೆ ದುಡಿಯಬೇಕಾಗಿರುವ ಹೆಣ್ಣು ತನ್ನ ಗೃಹಕೃತ್ಯದ ಹೊರೆಯಲ್ಲಿ ಅಧ್ಯಯನಕ್ಕೆ ಸಮಯವನ್ನಾದರೂ ಎಲ್ಲಿಂದ ತಂದಾಳು ? ಈ ಮಿತಿಗಳನ್ನು ಮೀರಿ, ಅನುಭವದ ಪ್ರಾಮಾಣಿಕತೆಯ ದೃಷ್ಟಿಯಿಂದ, ಕನ್ನಡದಲ್ಲಿ ಒಳ್ಳೆಯ ಕಾದಂಬರಿಗಳನ್ನು ನೀಡಿರುವ ಒಬ್ಬಳೇ ಲೇಖಕಿಯೆಂದರೆ ವೀಣಾಶಾಂತೇಶ್ವರ ಎನ್ನಬಹುದು. ಈ ಎಲ್ಲ ಅಡೆತಡೆಗಳನ್ನು ದಾಟಿ ಇನ್ನುಮುಂದಾದರೂ ಮಹತ್ವಪೂರ್ಣಕೃತಿಗಳು ನಮ್ಮ ಸ್ತ್ರೀಯರಿಂದ ಬರಬಹುದೇ ಎಂಬುದನ್ನು ಕಾದು ನೋಡಬೇಕು.

ಸಮೀಕ್ಷೆಗೆ ಬಂದಿರುವ ಈ ಕಾದಂಬರಿಗಳಲ್ಲಿನ ಮತ್ತೊಂದು ದೋಷವೆಂದರೆ, ಬಹಳಷ್ಟು ಮಂದಿ ಲೇಖಕಿಯರು ಹೆಣ್ಣನ್ನು ತ್ಯಾಗಶೀಲೆಯಾಗಿ, ತಪಸ್ವಿನಿಯಾಗಿ ಚಿತ್ರಿಸಿರುವುದು. ಬದುಕಿನಲ್ಲಿ ಸಮಸ್ಯೆಗಳು ಎದುರಾದಾಗ ತ್ಯಾಗವೊಂದೇ ಅದಕ್ಕೆ ಪರಿಹಾರವೇ ಅಥವಾ ಬದುಕಿನಲ್ಲಿ ತ್ಯಾಗ ಇಷ್ಟು ಸುಲಭವೇ ಎನ್ನುವ ಪ್ರಶ್ನೆಯನ್ನು ಕೇಳಬೇಕಾಗುತ್ತದೆ. ನಮ್ಮ ಲೇಖಕಿಯರ ಸಾಂಪ್ರದಾಯಿಕ ಮನೋಧರ್ಮವನ್ನು ಈ ಚಿತ್ರಣ ಎತ್ತಿ ತೋರುತ್ತದೆ. ಇದಕ್ಕೆ ಹೊರತಾಗಿ ಸ್ವಲ್ಪ ಮಟ್ಟಿನ ವೈಚಾರಿಕತೆಯನ್ನು ತೋರಿರುವ ಲೇಖಕಿಯೆಂದರೆ ಈಚನೂರು ಶಾಂತಾ ಮಾತ್ರ.

**ಆವರಿಸಿದ ಅನುರಾಗ** (ಕೆ. ಶ್ರೀದೇವಿ) ಇದು ಒಂದು ಕಿರು ಕಾದಂಬರಿ. ನೂರು ಪುಟಗಳನ್ನೂ ಮೀರದ, ಮುನ್ನುಡಿಯೂ ಇಲ್ಲದ ಒಂದು ಕೃತಿ. ಹೆಂಡತಿಯನ್ನು ಕಳೆದುಕೊಂಡು, ಮಕ್ಕಳಿಂದಲೂ ದೂರವಿರುವ ಐವತ್ತರ ವಯಸ್ಸಿನ ಏಕಾಂಗಿ ಮೂರ್ತಿ ರಾಯರು ಈ ಕಾದಂಬರಿಯ ಕೇಂದ್ರ ಪಾತ್ರ. ಧರ್ಮಸ್ಥಳದಲ್ಲಿ ಆಕಸ್ಮಿಕವಾಗಿ, ಪ್ರೌಢವಯಸ್ಸಿನ, ವಿರಸದಾಂಪತ್ಯದಲ್ಲಿ ಬೇಸತ್ತ ಬರೆಹಗಾರ್ತಿ ವಿಕಾಸಮಾಲಾಳ ಪರಿಚಯವಾಗುತ್ತದೆ ರಾಯರಿಗೆ. ಈ ಪರಿಚಯ ರಾಯರ ಆಲೋಚನೆಯ ದಿಕ್ಕನ್ನೇ ಬದಲಾಯಿಸುತ್ತದೆ. ವಿಕಾಸಮಾಲಾ ರಾಯರಿಗೆ 'ಅಂತರಂಗ' ಕ್ಲಬ್ಬಿನ ಪರಿಚಯ ಮಾಡಿಸುತ್ತಾಳೆ. ಆ ಕ್ಲಬ್ಬಿನ ಸದಸ್ಯರೆಲ್ಲರೂ, ಒಂಟಿತನದ ಸಮಸ್ಯೆಯನ್ನೆದುರಿಸುತ್ತಿರುವ ವಿವಿಧ ವಯಸ್ಸಿನ ವ್ಯಕ್ತಿಗಳೇ ಪರಸ್ಪರ ಪರಿಚಯವಾದಂತೆಲ್ಲ, ಬೇರೆಯವರ ಸಮಸ್ಯೆಗಳನ್ನು ತಮ್ಮದು ಮಾಡಿಕೊಳ್ಳುತ್ತ, ರಾಯರ ಆಲೋಚನೆಯ ವಲಯ ವಿಸ್ತರಿಸಿದಂತೆಲ್ಲ, ಅವರು ತಮ್ಮ ವೈಯಕ್ತಿಕ ಸಮಸ್ಯೆಗಳನ್ನೇ ಮರೆಯುತ್ತಾರೆ. ಬದುಕಿನ ಬಗೆಗೆ ಆರೋಗ್ಯಕರ ಕುತೂಹಲದ, ನಗುವಿನ ಧೋರಣೆ ತಳೆಯುತ್ತಾರೆ. ಗಂಡನ ದುರಹಂಕಾರ ಮತ್ತು ದೌಷ್ಟ್ಯದಿಂದ ಬೇಸತ್ತ ವಿಕಾಸಮಾಲಾ ಗಂಡನಿಂದ ವಿಚ್ಛೇದನ ಪಡೆಯಲು ಸಿದ್ಧಳಾದಾಗ, ರಾಯರು ಮತ್ತು ಅವಳ ನಡುವೆ ಅನುರಾಗ ಆವರಿಸಬಹುದೇನೋ ಎಂದು ನಾವು ನಿರೀಕ್ಷಿಸುವಾಗ ಹಾಗಾಗದೆ, ಕಾದಂಬರಿ ತಟಕ್ಕನೆ ಮುಗಿಯುತ್ತದೆ. ವಸ್ತುವಿನ ದೃಷ್ಟಿಯಿಂದ ಕಾದಂಬರಿಗೆ ಹೊಸತನವಿದೆ. ಆದರೆ ಈ ವಸ್ತುವಿಗೆ ಬೇಕಾದ ವಿಸ್ತಾರ, ವೈವಿಧ್ಯಗಳು ಕಾದಂಬರಿಯಲ್ಲಿಲ್ಲ. ಯಾವ ಪಾತ್ರವೂ ಖಚಿತವಾಗಿ ರೂಪುತಾಳಿ ನಮ್ಮ ಮುಂದೆ ನಿಲ್ಲುವುದಿಲ್ಲ. ಅಲ್ಲದೆ, ಇಲ್ಲಿ ಬರುವ ಪಾತ್ರಗಳೆಲ್ಲವೂ ದುಡ್ಡಿರುವ ಮೇಲ್ಮಧ್ಯಮ ವರ್ಗದ ಪಾತ್ರಗಳೇ. ಬಹಳ ಸುಲಭವಾಗಿ ಎಲ್ಲರ ಸಮಸ್ಯೆಗಳೂ ಪರಿಹಾರವಾಗುತ್ತವೆ. ತಾನು ಅದುವರೆಗೆ ಬದುಕಿದ ಜೀವನ ಕ್ರಮ, ಹಾಗೂ ಆಲೋಚನೆಯ ಧಾಟಿಯಿಂದ ಹೊರಬರುವುದು ಅಷ್ಟು ಸುಲಭವೇ ಎಂಬುದನ್ನು ಕಾದಂಬರಿಕಾರ್ತಿ ಆಲೋಚಿಸಿದಂತಿಲ್ಲ. ಯಾವುದಾದರೂ ಪಾಶ್ಚಾತ್ಯ ಕಾದಂಬರಿ ಇದಕ್ಕೆ ಪ್ರೇರಣೆಯಿರಬಹುದೇ ಎಂಬ ಅನುಮಾನವೂ ಬರುತ್ತದೆ.

**ನೀ ಬರುವ ದಾರಿಯಲಿ (ಸುನೀತಾ ರಾವ್)** "ಜೀವನದಲ್ಲಿ ಉತ್ತಮ ಅಂಶಗಳನ್ನು ಅಳವಡಿಸಿಕೊಳ್ಳಬೇಕು ಎನ್ನುವ ತನ್ನ ಆಸೆಯ ಮೊದಲ ಪ್ರಯತ್ನವೇ 'ನೀ ಬರುವ ದಾರಿಯಲಿ"' ಎಂದು ಲೇಖಕಿಯೇ ಹೇಳಿಕೊಂಡಂತೆ, ಹೆಣ್ಣೊಬ್ಬಳ ಆದರ್ಶಮಯ ಜೀವನವನ್ನು ಚಿತ್ರಿಸುವ ಕೇವಲ 54 ಪುಟದ ಕಿರು ಕಾದಂಬರಿ ಇದು. ಕುಮಾರನನ್ನು ಪ್ರೀತಿಸಿದ ಅನುಪಮಾ, ತಂದೆ ತಾಯಿಯ ಮನಸ್ಸು ನೋಯಿಸಲಾಗದೆ ಶ್ರೀನಿವಾಸನ ಕೈಹಿಡಿದು ಅವನಿಂದ ಒಂದು ಮಗುವನ್ನೂ ಪಡೆಯುತ್ತಾಳೆ. ಆದರೆ ವಾಹನ ಅಪಘಾತವೊಂದರಲ್ಲಿ ಶ್ರೀನಿವಾಸ ಸಾವನ್ನಪ್ಪುತ್ತಾನೆ. ಅಮೆರಿಕೆಯಿಂದ ಹಿಂದಿರುಗಿ ಬಂದ ಅವಳ ಹಿಂದಿನ ಪ್ರೇಮಿ ಡಾ॥ ಕುಮಾರ್ ಅನುಪಮಳ ಊರಿನಲ್ಲಿಯೇ ನೆಲಸುತ್ತಾನೆ ಹಾಗೂ ಅನುಪಮಳನ್ನು ಮರು ಮದುವೆಯಾಗಲು ಬಯಸುತ್ತಾನೆ. ಆದರೆ ಇದನ್ನು ತಿರಸ್ಕರಿಸಿದ ಅನುಪಮ, ಅನಾಥ ಮಹಿಳೆಯರ ಕಲ್ಯಾಣಧಾಮವೊಂದನ್ನು ಕಟ್ಟಿ, ಸಮಾಜಸೇವೆ, ಮಗುವಿನ ವಾತ್ಸಲ್ಯ, ಅತ್ತೆ ಮಾವರ ಆರೈಕೆ ಇವುಗಳಲ್ಲಿ ತನ್ನ ನೋವನ್ನು ಮರೆತು ಆದರ್ಶ ಜೀವಿಯಾಗಿ ಬದುಕಿ, ಅತ್ಯಾಚಾರಕ್ಕೊಳಗಾಗಿದ್ದ ತನ್ನ ಬಂಧು ಭಾಗ್ಯಳನ್ನು ಕುಮಾರನಿಗೆ ಮದುವೆ ಮಾಡಿಸುತ್ತಾಳೆ. ಇಷ್ಟು ಸರಳವಾದ ಕಥೆಯನ್ನು ಅತ್ಯಂತ ಸರಳವಾಗಿ ಹೇಳಿ ಮುಗಿಸುತ್ತಾರೆ ಲೇಖಕಿ. ವಿಧವೆ ಹೆಣ್ಣಿನ ತ್ಯಾಗ ಮತ್ತು ಅತ್ಯಾಚಾರಕ್ಕೊಳಗಾದ ಹೆಣ್ಣಿನ ಮದುವೆ-ಹೀಗೆ ಎರಡು ಸಮಸ್ಯೆಗಳನ್ನು ಒಂದೆಡೆ ತರುವ ಪ್ರಯತ್ನ ಇಲ್ಲಿದೆ. ಆದರೆ ಪಾತ್ರಗಳ ಮಾನಸಿಕ ಸಂಘರ್ಷ ಮೂಡಿಬರಲು ಈ ಚಿಕ್ಕ ಕೃತಿಯಲ್ಲಿ ಅವಕಾಶವೇ ಇಲ್ಲ. ವಸ್ತು ಮತ್ತು ಶೈಲಿಯ ಸರಳತೆಯೇ ಈ ಕೃತಿಯ ಗಮನಾರ್ಹ ಅಂಶ.

**ಅಡಿಗಲ್ಲು (ಇಂದಿರಾಣಿ)** ಮನೋವೈಜ್ಞಾನಿಕ ದೃಷ್ಟಿಯಿಂದ ವ್ಯಕ್ತಿಯೊಬ್ಬನ ಬದುಕನ್ನು ನೋಡಿ ಚಿತ್ರಿಸಿದ ಕಾದಂಬರಿ ಇದು. ಗುರುಮೂರ್ತಿ ಈ ಕಾದಂಬರಿಯ ಮುಖ್ಯ ಪಾತ್ರ ದುರಹಂಕಾರಿ ಅಜ್ಜಿಯ ದಬ್ಬಾಳಿಕೆ, ದ್ವೇಷಗಳಿಗೆ ಗುರಿಯಾಗಿ, ತಂದೆ ತಾಯಿಯರ ಪ್ರೀತಿ, ಅಂತಃಕರಣಗಳಿಗೂ ಎರವಾಗಿ ಅವನು ತನ್ನ ಬಾಲ್ಯವನ್ನು ಕಳೆಯಬೇಕಾಗುತ್ತದೆ. ಇದರ ಪರಿಣಾಮವಾಗಿ 'ಅಜ್ಜಿ' ಎಂಬ ಶಬ್ದವನ್ನೇ ಕೇಳಲಾಗದು ಅವನಿಗೆ. ಮಾತೃಪ್ರೇಮ, ಪಿತೃವಾತ್ಸಲ್ಯ ಇವುಗಳಿಂದ ವಂಚಿತನಾದ ಗುರುಮೂರ್ತಿ ಒಂದು ರೀತಿಯಲ್ಲಿ ಮಾನವದ್ವೇಷಿಯಾಗಿ ಪರಿವರ್ತಿತನಾಗುತ್ತಾನೆ. ವಿದ್ಯಾವಂತನಾಗಿ, ದೊಡ್ಡ ಅಧಿಕಾರಿಯಾದರೂ, ಆಫೀಸಿನಲ್ಲಿ ಅವನಿಗೆ ಯಾರನ್ನು ಕಂಡರೂ ಆಗದು. ಮನೆಯಲ್ಲಿ ತಂಗಿ, ತಾಯಿ ಅಕ್ಕ, ಭಾವ ಎಲ್ಲರ ಬಗೆಗೂ ತಿರಸ್ಕಾರ. ಪ್ರೀತಿ, ಸ್ನೇಹ, ಸಲುಗೆ ಯಾವುದೂ ಅವನ ಬಳಿ ಸುಳಿಯದು ಕೊನೆಗೆ ಮನಸ್ಸು ಹದಗೆಟ್ಟು, ಕೆಲಸಕ್ಕೆ ರಾಜೀನಾಮೆ ಕೊಟ್ಟು ಹುಚ್ಚ ಎಂಬ ಅಭಿದಾನಕ್ಕೆ ಪಾತ್ರನಾಗಿ ತಾಯಿಯ ಸಾವಿಗೂ ಕಾರಣನಾಗುತ್ತಾನೆ. ಇದಿಷ್ಟು

ಕಥೆಯನ್ನು ಗುರುಮೂರ್ತಿಯ ಸಹೋದ್ಯೋಗಿ ಮೃದುಲಾ ಹಾಗೂ ಅವಳಣ್ಣ ಸದಾನಂದ ಇವರ ಮೂಲಕ ಚಿತ್ರಿಸುತ್ತಾರೆ. ಗುರುಮೂರ್ತಿಯ ಮನೆಯ ಬಿಗಿ ವಾತಾವರಣ, ಅದಕ್ಕೆ ವಿರುದ್ಧವಾಗಿ ಮೃದುಲಾಳ ಮನೆಯ ಪ್ರೀತಿ ಸ್ನೇಹ ತುಂಬಿದ ವಾತಾವರಣ ಎರಡನ್ನೂ ಚಿತ್ರಿಸಿದ್ದಾರೆ. ವ್ಯಕ್ತಿಗಳು ಹೀಗೆ ಮಾನವ ದ್ವೇಷಿಗಳಾಗಿ ಸಮಾಜಕಂಟಕರಾಗಲು ಅವರ ಸುತ್ತಮುತ್ತಲ ವ್ಯಕ್ತಿಗಳು ಹಾಗೂ ವಾತಾವರಣವೇ ಕಾರಣವೆಂದೂ, ಪ್ರೀತಿ, ಸಹಾನುಭೂತಿಗಳಿಂದ ಇಂಥ ವ್ಯಕ್ತಿಗಳನ್ನು ತಿದ್ದಲು ಸಾಧ್ಯವೆಂಬ ಮಾತನ್ನೂ ಮನೋವೈಜ್ಞಾನಿಕ ವೈದ್ಯರೊಬ್ಬರ ಮೂಲಕ ಹೇಳಿಸಿ ಕಾದಂಬರಿ ಮುಗಿಸುತ್ತಾರೆ ಲೇಖಕಿ. ಸರಾಗವಾಗಿ ಓದಿಸಿಕೊಂಡು ಹೋಗುವ ಗುಣ ಕಾದಂಬರಿಗಿದೆ. ಆದರೆ ಮಾನಸಿಕ ವಿಷಮತೆಗೆ ಗುರಿಯಾದ ವ್ಯಕ್ತಿಯೊಬ್ಬನ ಮನಸ್ಸಿನ ಪದರ ಪದರಗಳನ್ನು ಬಿಚ್ಚಿ ತೋರುವ ಸೂಕ್ಷ್ಮತೆ ಲೇಖಕಿಗೆ ಇಲ್ಲವೆನ್ನಿಸುತ್ತದೆ.

**ಮರೆವು** (ಉಷಾ ನವರತ್ನರಾಂ) ಉಷಾ ನವರತ್ನರಾಂರವರು ನಮ್ಮ ಜನಪ್ರಿಯ ಕಾದಂಬರಿಕಾರ್ತಿಯರಲ್ಲೊಬ್ಬರು. ಅವರ ಈ ಕಾದಂಬರಿ ಮನೋವೈಜ್ಞಾನಿಕ ಸಮಸ್ಯೆಯೊಂದನ್ನು ವಸ್ತುವನ್ನಾಗಿ ಉಳ್ಳ ಕೃತಿ. ಬದುಕಿನಲ್ಲಿ ಆಗಿ ಹೋದ ದುರ್ಘಟನೆಗಳನ್ನು ಮರೆತು ಹೊಸ ಬದುಕನ್ನು ಬದುಕಲೆಳಸುವುದು ಮಾನವನಿಗೆ ಒಂದು ವರ. ಇದು ಸಾಧ್ಯವಾಗದಿದ್ದಾಗ ಎಂಥ ದುರಂತಕ್ಕೆ ಬದುಕು ಒಳಗಾಗಬಹುದು ಎಂಬ ಮನೋವೈಜ್ಞಾನಿಕ ವಿಶ್ಲೇಷಣೆಯನ್ನು ಮಾಡಲು ಯತ್ನಿಸುತ್ತದೆ ಈ ಕಾದಂಬರಿ. ತನ್ನ ಪ್ರೀತಿಯ ಪತ್ನಿ ಮನೋಹರಿಯನ್ನು ಕಳೆದುಕೊಂಡ ವೈದ್ಯ ಬಲದೇವ್‌ಗೆ ಅವಳನ್ನು ಮರೆಯಲು ಸಾಧ್ಯವಾಗುವುದಿಲ್ಲ. ಇಂಥ ಸಂದರ್ಭದಲ್ಲಿ, ಅತ್ಯಾಚಾರಕ್ಕೊಳಗಾಗಿ ಗರ್ಭಿಣಿಯಾಗಿ, ಆತ್ಮಹತ್ಯೆಗೆ ಪ್ರಯತ್ನಿಸಿ ಸೋತ ಹದಿನೆಂಟರ ಹರಯದ ಸೌಜನ್ಯ ಬಲದೇವ್‌ನ ನರ್ಸಿಂಗ್ ಹೋಂಗೆ ರೋಗಿಯಾಗಿ ಬರುತ್ತಾಳೆ. ತನ್ನ ಪತ್ನಿಯನ್ನೇ ಹೋಲುತ್ತಿದ್ದ ಸೌಜನ್ಯಳನ್ನು ಬಲದೇವ್ ಇಷ್ಟಪಡುತ್ತಾನೆ. ಆದರೆ ಅವನ ಸುಪ್ತ ಮನಸ್ಸಿನಲ್ಲಿ ಅಡಗಿದ್ದ ಪತ್ನಿಯ ಮೇಲಿನ ಪ್ರೀತಿ ಅವನನ್ನು ಮುಂದುವರೆಯಲು ಬಿಡುವುದಿಲ್ಲ. ನಂತರ ಸೌಜನ್ಯ ವಿದ್ಯಾಭ್ಯಾಸ ಮುಂದುವರಿಸಿ ಡಾಕ್ಟರಾಗಿ ಬರುವತನಕ ಏಳು ವರ್ಷಗಳ ಕಾಲ ಅವರಿಬ್ಬರೂ ಒಬ್ಬರನ್ನೊಬ್ಬರು ನೋಡಿಯೇ ಇರುವುದಿಲ್ಲ. ಅವಳು ಮತ್ತೆ ಬಂದು ಬಲದೇವನನ್ನು ಸಂಧಿಸುವ ವೇಳೆಗೆ ಅವನು ಭಗ್ನ ಹೃದಯಿಯಾಗಿ ಎಲ್ಲವನ್ನೂ ಕಳೆದುಕೊಳ್ಳುವ ಸ್ಥಿತಿಯಲ್ಲಿರುತ್ತಾನೆ. ಇಪ್ಪತ್ತೈದರ ಸೌಜನ್ಯ ನಲವತ್ತೇಳರ ಬಲದೇವನನ್ನು ಬಲವಂತದಿಂದ ಮದುವೆಯಾಗುತ್ತಾಳೆ. ಕಳೆದುಕೊಂಡ ಪತ್ನಿಯ ಪ್ರೀತಿ, ಸೌಜನ್ಯಳ ಮೇಲಿನ ಒಲವು ಎರಡಕ್ಕೂ ಘರ್ಷಣೆ ನಡೆದು ಬಲದೇವ್ ಪೂರ್ಣ ಹುಚ್ಚನಾಗುತ್ತಾನೆ. ಮನೆ, ಮಠ, ಒಡವೆ, ನರ್ಸಿಂಗ್ ಹೋಂ ಎಲ್ಲವನ್ನೂ

ಮಾರಿ, ಸೌಜನ್ಯ ಬಲದೇವನನ್ನು ವಿದೇಶಕ್ಕೆ ಕಳುಹಿಸಿ ಚಿಕಿತ್ಸೆ ಮಾಡಿಸುವ ಪ್ರಯತ್ನ ನಡೆಸಿ ಕೊನೆಯಲ್ಲಿ ಯಶಸ್ವಿಯಾಗುತ್ತಾಳೆ. ವಿದೇಶದಲ್ಲಿ ನಡೆದ ಬಲದೇವನ ಮಾನಸಿಕ ಚಿಕಿತ್ಸೆಯ ಆಕರ್ಷಕ ವಿವರಗಳನ್ನು ನೀಡುತ್ತಾರೆ ಲೇಖಕಿ. ಕಥೆಯನ್ನು ನೇರವಾಗಿ ನಿರೂಪಿಸದೆ, ಬೇರೆ ಬೇರೆ ಪಾತ್ರಗಳ ಮೂಲಕ ಹೇಳಿಸಿದ್ದಾರೆ. ಸೌಜನ್ಯ ಳನ್ನು ಮಹಾಪತಿವ್ರತೆ, ತ್ಯಾಗಮಯಿಯ ಪಟ್ಟಕ್ಕೇರಿಸಿದ್ದಾರೆ. ಅವಳ ತ್ಯಾಗದ ಚಿತ್ರಣದ ಒಂದು ಸ್ಯಾಂಪಲ್ ಹೀಗಿದೆ. "ಕೊನೇ ತನಕ ನರ್ಸಿಂಗ್ ಹೋಂ ಕಸ ಗುಡ್ಸಿ, ಕಾಂಪೌಂಡ್ ಗುಡಿಸಿ ಎಷ್ಟೋ ಸಲ ಕೊಳಕು ಬೆಡ್ಸೀಟು, ಮಗ್ಲಾಸ್ಗೆ, ದಿಂಬು ಎಲ್ಲಾ ಅವ್ರೇ ಒಗ್ಯಾರು"–ಇಂಥ ಅಸಹಜವಾದ, ಅಸಾಧ್ಯವಾದ ತ್ಯಾಗವನ್ನು ನಮ್ಮ ಸ್ತ್ರೀಪಾತ್ರಗಳ ಕೈಲಿ ಮಾಡಿಸುವ ಹುಚ್ಚು ನಮ್ಮ ಲೇಖಕಿಯರಿಗೆ ಏಕಿದೆ ಎಂಬುದೇ ಅರ್ಥವಾಗುವುದಿಲ್ಲ. ಆದರೆ ಆಕರ್ಷಕ ಶೈಲಿಯನ್ನು ಲೇಖಕಿ ಸಾಧಿಸಿಕೊಂಡಿದ್ದಾರೆ.

**ಮೃಗಜಲ** (ಸುನೀತಿ ಕೃಷ್ಣಸ್ವಾಮಿ) ಆಶಾ ಎಂಬ ನತದೃಷ್ಟೆಯ ಕಥೆಯನ್ನು ಈ ಕಾದಂಬರಿ ಹೇಳುತ್ತದೆ. ನತದೃಷ್ಟೆ ಎಂಬ ತಲೆಪಟ್ಟಿ ಅಂಟಿಸಿಕೊಳ್ಳದೆ, ಜೀವನದಲ್ಲಿ ಆಶಾವಾದಿಯಾಗಿ ಛಲದಿಂದ ಮುಂದೆ ಸಾಗಬೇಕು ಎಂಬ ಆಶಯವೇ ಈ ಕಾದಂಬರಿಯಾಗಿದೆ ಎನ್ನುತ್ತಾರೆ ಲೇಖಕಿ. ಹಣಕ್ಕೆ ಮಾತ್ರ ಬೆಲೆ ಕೊಡುವ ನಿರ್ದಯಿಯಾದ ರಾಕ್ಷಸ ಪ್ರವೃತ್ತಿಯ ಹೆಣ್ಣು ಆಶಾಳ ತಾಯಿ. ಚಿಕ್ಕ ವಯಸ್ಸಿ ನಿಂದಲೂ ತಾಯಿಯ ಪ್ರೀತಿಯೆಂದರೇನೆಂಬುದನ್ನೇ ತಿಳಿಯದೆ ಹೊಡೆತ, ಬೈಗಳ ತಿರಸ್ಕಾರ ಇವುಗಳ ಮಧ್ಯದಲ್ಲೇ ಬೆಳೆದು ದೊಡ್ಡವಳಾದ ಆಶಾ ನೋವನ್ನೇ ನುಂಗಿ ನಗುವ ಪ್ರತಿಭಟನೆಯ ವಿಚಿತ್ರ ಗಟ್ಟಿತನವನ್ನು ಬೆಳೆಸಿಕೊಳ್ಳುತ್ತಾಳೆ. ಬೆಳೆದು ಯುವತಿಯಾದ ಆಶಾಳ ಮದುವೆಯ ಆಲೋಚನೆಯನ್ನೇ ಮಾಡದ ಅಣ್ಣಂದಿರು, ದುಡ್ಡಿದ್ದರೂ ತನ್ನ ಸ್ವಾರ್ಥದಿಂದಾಗಿ ಮಗಳಿಗೆ ಮದುವೆ ಮಾಡದ ತಾಯಿ–ಇಂಥ ಪರಿಸ್ಥಿತಿಯಲ್ಲಿ ಆಶಾಳಿಗೆ ಅರಬನೊಬ್ಬನ ಪರಿಚಯವಾಗುತ್ತದೆ. ಆಶಾಳ ಬಗೆಗಿನ ಅನುಕಂಪೆಯಿಂದಾಗಿ ಅವನು ಅವಳನ್ನು ಮದುವೆಯಾಗಲು ಒಪ್ಪುತ್ತಾನೆ. ಅಸಹಾಯಕತೆ ಹಾಗೂ ತನ್ನವರ ಬಗೆಗಿನ ರೊಚ್ಚು ಎರಡೂ ಸೇರಿ ಆಶಾ ಆಯೇಶಾ ಆಗಿ ಅರಬನನ್ನು ವರಿಸುತ್ತಾಳೆ. ಅವಳನ್ನು ಸ್ವಲ್ಪ ದಿನ ರಾಣಿಯಂತೆ ಮೆರೆಸಿದ ಆರಬ್ ಯುವಕ ತನ್ನ ದೇಶಕ್ಕೆ ಹಿಂದಿರುಗಬೇಕಾಗಿ ಬಂದು ಅಲ್ಲಿನ ಯುದ್ಧದ ಬೇಗೆಗೆ ಸಿಕ್ಕು ಏನಾದನೆಂಬುದನ್ನು ತಿಳಿಯದ ಆಶಾ ಮತ್ತೊಮ್ಮೆ ಬೀದಿಪಾಲಾಗು ತ್ತಾಳೆ. ಗೆಳತಿಯೊಬ್ಬಳ ಸಹಾಯದಿಂದ ಸ್ತ್ರೀಯರ ಹಾಸ್ಟಲೊಂದನ್ನು ಸೇರುತ್ತಾಳೆ. ಎದುರು ಮನೆಯ ಲೇಖಕಿ ಸೌಜನ್ಯ, ಆಶಾಳ ಕಥೆಯನ್ನು 'ಮೃಗಜಲ' ಕಾದಂಬರಿಯಾಗಿ ಬರೆದು ಇಂಥ ಹೆಣ್ಣಿಗೆ ಯಾವ ರೀತಿಯ ಬಾಳು ಕೊಡಬಲ್ಲಿರಿ ಎಂದು ಓದುಗರಿಗೆ ಸವಾಲು ಹಾಕುತ್ತಾರೆ. ಕಾದಂಬರಿ ಓದಿದ ಆಕೆಯ ತಮ್ಮ ಈ ಸವಾಲನ್ನು ಸ್ವೀಕರಿಸಿ, ಇಂಥ ಹೆಣ್ಣಿಗೆ ಹೊಸಬಾಳನ್ನು ತಾನು

ಕೊಡಬಲ್ಲೆ ಎಂದು ಹೇಳುವಲ್ಲಿಗೆ ಕಾದಂಬರಿ ಮುಗಿಯುತ್ತದೆ. ಆಶಾಳ ತಾಯಿಯ ವಿಕ್ಷಿಪ್ತ ಸ್ವಭಾವ, ಅದರ ಹೊಡೆತಕ್ಕೆ ಸಿಕ್ಕಿ ಗಟ್ಟಿಯಾಗುವ ಯುವತಿ ಆಶಾಳ ಚಿತ್ರಣ, ಇದಿಷ್ಟು ಅರ್ಧ ಕಾದಂಬರಿ ಆಕ್ರಮಿಸಿಕೊಂಡಿದೆ. ಆದರೆ ಮದುವೆಯ ಮೊದಲು ಪ್ರತಿಭಟನೆಯ ಮೂರ್ತಿಯಂತೆ ಕಾಣುವ ಆಶಾ ಮದುವೆಯ ನಂತರ ದುರ್ಬಲ, ಅಸಹಾಯಕ ಪಾತ್ರದಂತೆ ಕಾಣುತ್ತಾಳೆ. ಕಾದಂಬರಿಯ ಉತ್ತರಾರ್ಧ ಸಿನಿಮೀಯವಾಗಿದೆ. ಆಶಾಳ ತಾಯಿಯ ಪಾತ್ರದ ದೃಷ್ಟಿಯಿಂದ ಈ ಕಾದಂಬರಿ ವಿಶಿಷ್ಟವಾಗಿದೆ.

**ಸ್ವರ್ಗ ಸೋಪಾನ** (ಛಾಯಾದೇವಿ ನಂಜಪ್ಪ) ಪ್ರೇಮ, ತ್ಯಾಗ, ಸೇವೆ, ಇವುಗಳನ್ನು ಕುರಿತ ಅಸಂಬದ್ಧ ಕಲ್ಪನೆಗಳ ಕಥೆ ಈ ಕಾದಂಬರಿ. ಶ್ರೀಮಂತ ಪುತ್ರ ಸಂಜಯ ರೂಪಸಿ ನರ್ಸ್ ಕಲ್ಪನಳನ್ನು ಪ್ರೀತಿಸುತ್ತಾನೆ. ಅವನಿಗೆಂದೇ ಮೀಸಲಾಗಿದ್ದ ನಯನಳನ್ನು ತಿರಸ್ಕರಿಸಿ, ಮನೆಯವರೆಲ್ಲರ ಇಚ್ಛೆಗೆ ವಿರೋಧವಾಗಿ, ಕಲ್ಪನಳನ್ನು ವಿವಾಹವಾಗುತ್ತಾನೆ. ನವದಂಪತಿಗಳು ಸ್ವಲ್ಪ ಕಾಲ ಸ್ವರ್ಗದಲ್ಲೇ ವಿಹರಿಸುತ್ತಾರೆ. ಆದರೆ ಅಪರಿಚಿತನೊಬ್ಬನಿಂದ ಬಂದ ಪತ್ರ, ಕಲ್ಪನ ಬೇರೊಬ್ಬನ ಮಡದಿಯಾಗಿದ್ದವಳು, ತನ್ನ ಕೆಟ್ಟ ನಡತೆಯಿಂದ ಗಂಡನ ಸಾವಿಗೆ ಕಾರಣಳಾಗಿ ಈಗ ಶ್ರೀಮಂತ ಸಂಜಯನಿಗೆ ಮೋಸ ಮಾಡಿ ಅವನನ್ನು ಮದುವೆಯಾಗಿರುವಳೆಂದು ತಿಳಿಸುತ್ತದೆ. ಕೋಪಗೊಂಡ ಸಂಜಯನ ತಂದೆ, ಕಲ್ಪನಳನ್ನು ಮನೆಯಿಂದ ಹೊರಗಟ್ಟುತ್ತಾರೆ. ಇದೇ ಕೊರಗಿನಲ್ಲಿ ಸಂಜಯನ ತಂದೆ-ತಾಯಿ ಸಾಯುತ್ತಾರೆ. ಸಂಸಾರದಲ್ಲಿ ಬೇಸತ್ತ ಸಂಜಯ ಮರುಮದುವೆಯನ್ನು ನಿರಾಕರಿಸಿ, ತನ್ನ ಪಾಲಿಗೆ ಬಂದ ಆಸ್ತಿಯನ್ನೂ ಮಾರಿ, ಶಾಲೆ, ಕಾಲೇಜು, ಆಸ್ಪತ್ರೆಗಳನ್ನು ಕಟ್ಟಿ, ಸಮಾಜ ಸೇವೆಗೆ ತನ್ನ ಬದುಕನ್ನೇ ಅರ್ಪಿಸಿಕೊಳ್ಳುತ್ತಾನೆ. ಸಂಜಯನನ್ನು ಮದುವೆಯಾಗಲು ಸಾಧ್ಯವಾಗದ ನಯನ ಕೂಡ ಬೇರೊಬ್ಬನನ್ನು ಮದುವೆಯಾಗಲು ಒಪ್ಪದೆ ಸಂಜಯನ ಜೊತೆಯಲ್ಲಿಯೇ ತನ್ನನ್ನೂ ಸಮಾಜ ಸೇವೆಗೆ ಅರ್ಪಿಸಿಕೊಳ್ಳುತ್ತಾಳೆ. ಮನೆಬಿಟ್ಟು ಹೋದ ಕಲ್ಪನಾ ಪಶ್ಚಾತ್ತಾಪದಿಂದ ಬೆಂದು ಸಂಜಯನ ಕಟ್ಟಡದ ಆವರಣದಲ್ಲಿಯೇ ಕೂಲಿಯವಳಾಗಿ ಬದುಕುತ್ತಾಳೆ. ಅಕಸ್ಮಾತ್ ಕಲ್ಪನಳನ್ನು ನೋಡಿದ ಸಂಜಯ ಹೃದಯಾಘಾತಕ್ಕೆ ಒಳಗಾಗಿ ಸಾಯುತ್ತಾನೆ. ಅವನನ್ನು ಬಿಟ್ಟಿರಲಾರದ ನಯನ ಕೂಡ ಆ ಘಳಿಗೆಯಲ್ಲೇ ಅವನ ಶವದ ಮೇಲೆ ಬಿದ್ದು ಸಾಯುತ್ತಾಳೆ. ಇನ್ನು ಇವರಿಬ್ಬರೂ ಸತ್ತಮೇಲೆ ಕಲ್ಪನಾ ಕೂಡ ಸಾಯಲೇಬೇಕಷ್ಟೆ ; ತ್ಯಾಗದಿಂದ ಪುನೀತವಾಗಿ ಬದುಕನ್ನೇ ಸ್ವರ್ಗಸೋಪಾನ ಮಾಡಿಕೊಂಡ ಸಂಜಯ, ನಯನರ ಹಾಗೂ ತಪ್ಪುಹಾದಿ ಹಿಡಿದು ತನ್ನ ಬದುಕನ್ನು ಹಾಳುಮಾಡಿಕೊಂಡು ಉಳಿದವರ ಬದುಕನ್ನೂ ಹಾಳುಮಾಡಿದ ಕಲ್ಪನಾ, ಇವರುಗಳ ಅಸಂಬದ್ಧ ತ್ಯಾಗ, ಸೇವೆಯ ಕಥೆಯನ್ನು ಅಷ್ಟೇ ಅಸಂಬದ್ಧ ಶೈಲಿಯಲ್ಲಿ

ಲೇಖಕಿ ಚಿತ್ರಿಸಿದ್ದಾರೆ. ಶ್ರೀಮಂತಿಕೆಯ ವರ್ಣನೆ ಓಕರಿಕೆ ಬರಿಸುವಷ್ಟರಮಟ್ಟಿಗೆ ತುಂಬಿಕೊಂಡಿದೆ.

**ಮಾಧುರಿ** (ಛಾಯಾದೇವಿ ನಂಜಪ್ಪ) ಭಾಮ, ಮನೋಜ, ಮಾಧುರಿ ಇವರು ಮೂವರೂ ಮಧ್ಯಮ ವರ್ಗದ ಪತ್ತರಾಜು ದಂಪತಿಗಳ ಮಕ್ಕಳು. ಚಂದ್ರಕಾಂತ ಅನಾಥ ಮಗುವಾಗಿ ಈ ಮನೆ ಸೇರುತ್ತಾನೆ. ಭಾಮ ಡಾಕ್ಟರಾಗುತ್ತಾಳೆ. ತಂದೆತಾಯಿಯರ ಕಷ್ಟದ ಹಣ ಖರ್ಚು ಮಾಡಿ ಇಂಜಿನಿಯರಾದ ಮನೋಜ ತಂದೆತಾಯಿಗೂ ತಿಳಿಸದೆ, ಶ್ರೀಮಂತ ಪುತ್ರಿಯೊಬ್ಬಳನ್ನು ಕೈಹಿಡಿದು ತಂದೆತಾಯಿಯಿಂದ ದೂರವಾಗುತ್ತಾನೆ. ಮಗನ ದ್ರೋಹದಿಂದ ನೊಂದ ದಂಪತಿಗಳು ಒಬ್ಬರ ನಂತರ ಒಬ್ಬರು ಕೊನೆಯುಸಿರೆಳೆಯುತ್ತಾರೆ. ಮಳೆಗಾಲದ ಗುಡುಗು ಮಿಂಚಿನ ರಾತ್ರಿಯೊಂದರಲ್ಲಿ, ಆಕಸ್ಮಿಕವಾಗಿ ಕನಸಿನಲ್ಲೆಂಬಂತೆ ಮಾಧುರಿ, ಚಂದ್ರಕಾಂತ ಒಂದಾಗುತ್ತಾರೆ. ಇದರ ಫಲವಾಗಿ ಮಾಧುರಿ ಗರ್ಭಿಣಿಯಾಗುತ್ತಾಳೆ. ಈ ಘಟನೆಯನ್ನು ಮರೆತ ಚಂದ್ರಕಾಂತ, ಮಾಧುರಿ ಗರ್ಭಿಣಿಯೆಂಬುದನ್ನು ಅರಿಯದೆ ಬೇರೊಬ್ಬಳನ್ನು ಮದುವೆಯಾಗಿ ವಿದೇಶಕ್ಕೆ ಹೋಗುತ್ತಾನೆ. ಅಕ್ಕ ಭಾವರ ನೆರವಿನಿಂದ ಮಾಧುರಿ ತನ್ನ ಸ್ವಂತ ಮಗಳು ಉಷಾಳನ್ನು ಸಮಾಜದ ಮುಂದೆ ಅನಾಥ ಮಗುವೆಂದು ಹೇಳಿಕೊಂಡು ಬೆಳಸುತ್ತಾಳೆ. ಮತ್ತೊಂದು ಮದುವೆಗೆ ಒಪ್ಪದೆ ಸನ್ಯಾಸಿನಿಯಂತೆ ನೊಂದು ಬೆಂದು ಬದುಕುತ್ತಾಳೆ ಮಾಧುರಿ. ಇತ್ತ, ತಂದೆತಾಯಿಗೆ ದ್ರೋಹ ಬಗೆದ ಪಾಪದ ಫಲವಾಗಿ ಕಷ್ಟ ಅನುಭವಿಸಿ, ಪಶ್ಚಾತ್ತಾಪದಿಂದ ಬೆಂದು ಪುನೀತನಾಗಿ ಹಿಂದಿರುಗಿ ಬಂದ ಮನೋಜ, ವಿದೇಶದಿಂದ ವಾಪಸು ಬಂದ ಚಂದ್ರಕಾಂತ ಇಬ್ಬರೂ ಸೇರಿ ಮಾಧುರಿಗೆ ಮದುವೆ ಗೊತ್ತು ಮಾಡುತ್ತಾರೆ. ಏನು ಮಾಡಲು ತೋಚದ ಮಾಧುರಿ, ನಡೆದ ವಿಷಯವನ್ನೆಲ್ಲ ತಿಳಿಸಿ ಚಂದ್ರಕಾಂತನಿಗೆ ಪತ್ರ ಬರೆದು, ಮಗಳೊಡನೆ ಮನೆಬಿಟ್ಟು ಹೋಗಿ ಯಾವುದೋ ಊರಿನ ಆಶ್ರಮವೊಂದರಲ್ಲಿ ಆಶ್ರಯ ಪಡೆಯುತ್ತಾಳೆ. ವಿಷಯ ತಿಳಿದ ಚಂದ್ರಕಾಂತ ಎಲ್ಲರೊಡನೆ ಮಾಧುರಿಯನ್ನು ಹುಡುಕಿಕೊಂಡು ಹೋಗಿ, ಅವಳಿಗೆ ತಾಳಿಕಟ್ಟಿ ಹೆಂಡತಿ–ಮಗಳನ್ನು ಸ್ವೀಕರಿಸುತ್ತಾನೆ. ಗ್ರೂಪ್ ಫೋಟೋದೊಡನೆ ಕಥೆ ಮುಗಿಯುತ್ತದೆ. ಮಾಧುರಿ-ಚಂದ್ರಕಾಂತ ಈರ್ವರೂ ಮೊದಲಿನಿಂದಲೂ ಒಬ್ಬರನ್ನೊಬ್ಬರು ಪ್ರೀತಿಸುತ್ತಿದ್ದರೂ, ಯಾವ ಅಡ್ಡಿ ಇಲ್ಲದಿದ್ದರೂ ಯಾರೂ ಮದುವೆಯ ಮಾತನ್ನು ಎತ್ತುವುದೇ ಇಲ್ಲ. ಸುಸಂಸ್ಕೃತ ವ್ಯಕ್ತಿ ಚಂದ್ರಕಾಂತನನ್ನು ಆ ರಾತ್ರಿ ತಾವು ಒಂದಾದ ಘಟನೆಯಾಗಲೀ, ಅದರ ಬಗೆಗಿನ ಪಾಪ ಪ್ರಜ್ಞೆಯಾಗಲೀ ಕಾಡುವುದೇ ಇಲ್ಲ. ಕೊನೆಯಲ್ಲಿ ಮಾಧುರಿ-ಚಂದ್ರಕಾಂತರ ಮದುವೆಗೆ ಚಂದ್ರಕಾಂತನ ಪತ್ನಿ ಕೂಡ ಅಡ್ಡಿ ಬರುವುದಿಲ್ಲ. ಇಷ್ಟೆಲ್ಲ

ನೋವನ್ನನುಭವಿಸಿದ ಮಾಧುರಿಯ ಮನಸ್ಸಿನ ಒಳತೋಟ ಕೂಡ ಸಮರ್ಥವಾಗಿ ಮೂಡಿ ಬಂದಿಲ್ಲ.

ಛಾಯಾದೇವಿ ನಂಜಪ್ಪನವರು ಈ ಮೇಲಿನ ಎರಡು ಕಾದಂಬರಿಗಳನ್ನು ಬರೆದಿದ್ದಾರೆ. ಅಸಹಜ ಘಟನೆ, ಪಾತ್ರಗಳು, ಕೃತಕಶೈಲಿ, ಕೃತಕಭಾಷೆ, ಸಿನಿಮೀಯತೆ, ಮುದ್ರಣ ದೋಷಗಳು-ಎರಡೂ ಕಾದಂಬರಿಗಳಲ್ಲಿ ತುಂಬಿ ತುಳುಕುತ್ತವೆ. ಸರಾಗವಾಗಿ ಓದಿಸಿಕೊಂಡು ಹೋಗುವ ಗುಣ ಕೂಡ ಈ ಕಾದಂಬರಿಗಳಿಗಿಲ್ಲ.

**ಹೂ ಬಾಣದ ಜ್ವಾಲೆ** (ಹೆಚ್. ಜಿ. ರಾಧಾದೇವಿ) ಸಿನಿಮೀಯವಾದ ಉತ್ಪ್ರೇಕ್ಷಿತ ಕಾದಂಬರಿಗಳನ್ನು ಬರೆಯುವುದರಲ್ಲಿ ರಾಧಾದೇವಿಯವರು ಸಿದ್ಧಹಸ್ತರು ಅವರ ಸ್ತ್ರೀ ಪಾತ್ರಗಳಂತೂ ತಮ್ಮ ದೈವಭಕ್ತಿಯಿಂದಾಗಿಯೇ ಎಲ್ಲ ಕಷ್ಟ-ಕ್ಲೇಶಗಳನ್ನು ಪರಿಹರಿಸಿಕೊಂಡು ಕೊನೆಯಲ್ಲಿ ಸುಖ ಸಂತೋಷಗಳನ್ನು ಪಡೆಯಬಲ್ಲರು. ದೇವಿಯವರ ಕೃತಿಗಳೆಲ್ಲ ಲಕ್ಷ್ಮಿವೆಂಕಟೇಶ್ವರನಿಗೆ ಅರ್ಪಿತ. ವಿವಾಹಪೂರ್ವ ಪ್ರೇಮ ಪ್ರಕರಣಗಳು ಇಂದಿನ ಯುವಕ ಯುವತಿಯರ ವೈವಾಹಿಕ ಬಾಳನ್ನು ಹೇಗೆ ದುರಂತಮಯವಾಗಿಸಬಲ್ಲವು ಎಂಬುದನ್ನು 'ಹೂ ಬಾಣದ ಜ್ವಾಲೆ' ಎಂಬ ಈ ಕಾದಂಬರಿಯಲ್ಲಿ ಚಿತ್ರಿಸಿದ್ದೇನೆಂದು ಲೇಖಕಿಯೇ ಹೇಳಿಕೊಂಡಿದ್ದಾರೆ. ಭಾನುರೇಖ-ಸತೀಶ, ಸುಲತಾ-ಸುಹಾಸ, ಇಂದಿರಾ-ಸುರೇಶ-ಇಂಥ ಮೂರು ಜೋಡಿಗಳ ಚಿತ್ರ ಈ ಕೃತಿಯಲ್ಲಿದೆ. ಸುರೇಶನನ್ನು ಮದುವೆ ಮನೆಯೊಂದರಲ್ಲಿ ನೋಡಿ ಪ್ರೀತಿಸಿದ ಭಾನುರೇಖಾ ಆಕಸ್ಮಿಕವಾಗಿ ಅವರಣ್ಣ ಸುರೇಶನನ್ನು ಮದುವೆಯಾಗಬೇಕಾಗುತ್ತದೆ. ಪತ್ನಿ ಹಾಗೂ ತಮ್ಮನ ನಡುವಿನ ಸಂಭಾಷಣೆಯನ್ನು ಕೇಳಿಸಿಕೊಂಡ ಸತೀಶ, ತಪ್ಪು ಅಭಿಪ್ರಾಯದಿಂದ ಹೆಂಡತಿಯನ್ನು ಬಿಟ್ಟು ಅಮೇರಿಕೆಗೆ ಹೊರಟುಹೋಗುತ್ತಾನೆ. ಭಾನುವನ್ನು ಮದುವೆಯಾಗಲು ಸುರೇಶ ಸಿದ್ಧನಿದ್ದರೂ, ಅವನನ್ನು ತಿರಸ್ಕರಿಸಿದ ಭಾನು ಎಂಟು ವರ್ಷ ತಪಸ್ವಿನಿಯಂತೆ ಬದುಕಿ ಅತ್ತೆ ಮಾವಂದಿರ ಸೇವೆಯಲ್ಲಿ ಕಾಲ ಕಳೆಯುತ್ತಾಳೆ. ನಿರಾಶನಾದ ಸುರೇಶ ವಸುಧಾಳನ್ನು ಮದುವೆಯಾಗುತ್ತಾನೆ. ವಸುಂಧಾ ಗಂಡನಿಗೆ ದ್ರೋಹ ಬಗೆದು ಅವನ ವೈವಾಹಿಕ ಬದುಕನ್ನು ದುರಂತಗೊಳಿಸುತ್ತಾಳೆ. ತಮ್ಮನ ಪತ್ರದಿಂದಾಗಿ ಭಾನು ಪವಿತ್ರಳೆಂಬುದನ್ನು ಅರಿತ ಸತೀಶ ಸ್ವದೇಶಕ್ಕೆ ವಾಪಸು ಬಂದು ಪತ್ನಿಯ ಕ್ಷಮೆ ಕೇಳುತ್ತಾನೆ. ಆದರೆ ಭಾನುವಿನ ಮನಸ್ಸು ನೋವಿನಲ್ಲಿ ಬೆಂದು ಕಲ್ಲಾಗಿರುತ್ತದೆ. ಆ ಕಲ್ಲನ್ನು ಕರಗಿಸುವ ಪ್ರಯತ್ನ ಸುರೇಶನಿಂದ ನಡೆಯುತ್ತದೆ. ಕೊನೆಯಲ್ಲಿ ಸೋದರ ಮಾವನ ಮಗನಿಂದ ಮೋಸ ಹೋಗಿದ್ದ ಸುಲತಾ-ಸುರೇಶನ ಮದುವೆಯೊಂದಿಗೆ, ಭಾನು-ಸುರೇಶರ ಜೀವನವೂ

ಹಾಲು ಸಕ್ಕರೆಯಾಗುತ್ತದೆ. ಇಲ್ಲಿ ಬರುವ ಭಾನು, ಸುಲತಾ ಈರ್ವರೂ ತಪಸ್ವಿನಿಯರು ಹಾಗೂ ಪವಿತ್ರರು. ಪೂಜೆ-ಪುನಸ್ಕಾರಗಳ ಪುಣ್ಯ ಫಲದಿಂದಾಗಿ ಎಲ್ಲ ಕಷ್ಟಗಳನ್ನೂ ಗೆದ್ದು ಬದುಕುತ್ತಾರೆ. ಹೆಂಗಳೆಯರ ಮನಸ್ಸನ್ನು ಗೆಲ್ಲುವ ಕಾದಂಬರಿ ಎನ್ನಬಹುದು.

**ಪ್ರೀತಿಯ ಹೂಮಾಲೆ** (ಹೆಚ್. ಜಿ. ರಾಧಾದೇವಿ) ರಾಧಾದೇವಿಯವರ ಈ ಕೃತಿ ಕೂಡ ವೆಂಕಟೇಶ್ವರನಿಗೆ ಅರ್ಪಿತವಾಗಿದೆ. ಯಥಾಪ್ರಕಾರ, ಈ ಕೃತಿಯಲ್ಲಿ ಕೂಡ ವಿರುದ್ಧ ಸ್ವಭಾವದ ಎರಡು ಸ್ತ್ರೀಪಾತ್ರಗಳು ಕಾಣಿಸಿಕೊಳ್ಳುತ್ತವೆ. ಒಬ್ಬಳು ಕುಲಟೆ.. ಮತ್ತೊಬ್ಬಳು ಸಾಧ್ವಿ. ಶ್ರೀಮಂತ ತರುಣ ಜಗದೀಶ ಕುಲಟೆ ಮಾಲಿನಿಯ ಬಲೆಗೆ ಬೀಳುತ್ತಾನೆ. ಈ ಸಂಬಂಧವನ್ನು ಮುರಿಯಲು ಯತ್ನಿಸಿ ಸೋತ ಜಗದೀಶನ ತಾಯಿ ಸುಮಿತ್ರಮ್ಮ ಬಡ ಹುಡುಗಿ ಸುಂದರಿ ಪದ್ಮರೇಖಳನ್ನು ಜಗದೀಶನಿಗೆ ಮದುವೆ ಮಾಡಿಸುತ್ತಾರೆ. ಪತಿಯ ತಿರಸ್ಕಾರಕ್ಕೆ ತುತ್ತಾದ ಪದ್ಮರೇಖ ಸಾಮಾನ್ಯ ಹೆಣ್ಣಿನಂತೆ ಅತ್ತು ಕರೆದು ರಂಪಮಾಡದೆ, ಹಠವಾದಿ ಯಂತೆ ತಾನೇ ಪತಿಯಿಂದ ದೂರವಿದ್ದು; ಜ್ವರಪೀಡಿತನಾದ ಪತಿಯ ಸೇವೆಗೆ ಮಾಲಿನಿಯನ್ನೇ ಕರೆತರುತ್ತಾಳೆ ಸುಮಿತ್ರಮ್ಮ ಆಸ್ತಿಯನ್ನೆಲ್ಲ ಸೊಸೆಯ ಹೆಸರಿಗೆ ಮಾಡಿದ್ದಾರೆಂಬುದನ್ನು ತಿಳಿದ ಮಾಲಿನಿ, ಜಗದೀಶನನ್ನು ತಿರಸ್ಕರಿಸಿ ಅವನ ಕಣ್ಣೆದುರಿಗೇ ಮತ್ತೊಬ್ಬನ ತೋಳತೆಕ್ಕೆಗೆ ಹಾರುತ್ತಾಳೆ. ಕೊನೆಗೆ ಗಾಜಿನ ಚೂರು ಯಾವುದು, ವಜ್ರ ಯಾವುದು ಎಂಬುದನ್ನರಿತ ಜಗದೀಶ ಪತ್ನಿಯೆಡೆಗೆ ಹಿಂದಿರುಗಿ ಕ್ಷಮೆ ಯಾಚಿಸುತ್ತಾನೆ. ಸುಮಿತ್ರಮ್ಮನ ಸಾವಿನೊಂದಿಗೆ, ಸತಿಪತಿಯರು ಒಂದಾಗು ತ್ತಾರೆ. ಸುಮಿತ್ರಮ್ಮನ ಮನೆಯ ಶ್ರೀಮಂತಿಕೆಯ ವೈಭವ ಪುಟಪುಟದಲ್ಲಿಯೂ ತುಂಬಿದೆ. ಕೆಂಪು, ವಜ್ರ, ಪಚ್ಚೆಯ ಆಭರಣಗಳು ಕಾದಂಬರಿಯುದ್ದಕ್ಕೂ ಚೆಲ್ಲಾಡುತ್ತವೆ. ರಾಧಾದೇವಿಯವರ, ಈ ಎರಡೂ ಕಾದಂಬರಿಗಳ ಸಮಾನ ಲಕ್ಷಣವೆಂದರೆ, ಓರ್ವ ಹೆಣ್ಣು ಕುಲಟೆಯಾದರೆ ಮತ್ತೋರ್ವಳು ತಪಸ್ವಿನಿ. ಎರಡೂ ಕಾದಂಬರಿಗಳ ನಾಯಕಿಯರು ಗಂಡಂದಿರಿಂದ ತಿರಸ್ಕೃತರಾದಾಗ ಹಠಯೋಗಿಗಳಂತೆ ಗಂಡಂದಿರನ್ನು ದೂರವಿರಿಸಿ, ಆ ಮೂಲಕವೇ ಅವರನ್ನು ತಮ್ಮತ್ತ ಆಕರ್ಷಿಸುತ್ತಾ ರೆನ್ನುವುದು ಈ ಎರಡೂ ಕಾದಂಬರಿಗಳ ಸಮಾನ ಅಂಶ. ಆದರೆ ಯಾವ ಪಾತ್ರದ ಅಂತರಂಗದಲ್ಲಿಯೂ ಘರ್ಷಣೆಯೆನ್ನುವುದೇ ಇಲ್ಲ. ತ್ಯಾಗ, ತಪಸ್ಸು, ಸೇವೆಯೆಲ್ಲ ಈ ಕಾದಂಬರಿಯ ನಾಯಕಿಯರಿಗೆ ನೀರು ಕುಡಿದಷ್ಟು ಸುಲಭ.

**ಕಲ್ಪನಾ ಛಾಯೆಯಲ್ಲಿ** (ಈಚನೂರು ಶಾಂತ) ಈಚನೂರು ಶಾಂತ, ಈಗಾಗಲೇ ಅನೇಕ ಕಾದಂಬರಿಗಳನ್ನು ಬರೆದು ಪ್ರಸಿದ್ಧರಾದವರು. ಭಾರತದಂಥ, ಬಡದೇಶ ಉದ್ಧಾರವಾಗಬೇಕಾದರೆ, ವಿದ್ಯಾವಂತರು ಹೆಚ್ಚಿನ ಸಂಖ್ಯೆಯಲ್ಲಿ ಹಳ್ಳಿಗಳಲ್ಲಿ ನೆಲಸಿ ಹಳ್ಳಿಗರ ಜಾಗೃತಿಗೆ ಪ್ರಯತ್ನ ಪಡಬೇಕು ಎಂದು ಭಾಷಣ

ಮಾಡುವ ಮಂದಿಗೆ, ಲೇಖಿಕಿ ಈ ಕೃತಿಯಲ್ಲಿ ಸವಾಲು ಹಾಕುತ್ತಾರೆ. ಈ ಮಾತ ನ್ನಾಡುವ ರಾಜಕಾರಣಿಗಳು ವಿದ್ಯಾವಂತರಿಗೆ ಸೂಕ್ತವಾದ ವಸತಿ, ರಕ್ಷಣೆ ಮುಂತಾದ ಸೌಲಭ್ಯಗಳನ್ನು ಒದಗಿಸಿಕೊಟ್ಟಿದ್ದಾರೆಯೇ ? ಹಳ್ಳಿಯ ಕ್ಷುದ್ರ ರಾಜಕೀಯದ ನಡುವೆ, ಸೂಕ್ಷ್ಮ ಮನಸ್ಸಿನ ವ್ಯಕ್ತಿಗಳು ಏನನ್ನಾದರೂ ಮಾಡಲು ಸಾಧ್ಯವೆ ಎಂದು ಪ್ರಶ್ನಿಸುತ್ತಾರೆ ಲೇಖಿಕಿ.

ನಿವೃತ್ತ ಆಫೀಸರರೊಬ್ಬರ ಪದವೀಧರೆ ಮಗಳಾದ ಸಾಮಾನ್ಯ ರೂಪದ ಚಂದ್ರಾ ಸ್ವಇಚ್ಛೆ ಹಾಗೂ ಪರಿಸ್ಥಿತಿಯ ಒತ್ತಡಕ್ಕೆ ಸಿಲುಕಿ ಹಳ್ಳಿಯೊಂದರ ಪ್ರೌಢಶಾಲೆಯ ಮುಖ್ಯೋಪಾಧ್ಯಾಯಿನಿಯಾಗಿ ಬರುತ್ತಾಳೆ, ಊರಿನ ಗೌಡನ ಮನೆಯಲ್ಲಿ ಬಾಡಿಗೆಗೆ ನಿಲ್ಲುತ್ತಾಳೆ. ಊರಿಗೆ ಕಾಲಿಟ್ಟ ಕ್ಷಣದಿಂದಲೇ ಅವಳಿಗೆ ಊರಿನ ಇಬ್ಬರು ಪ್ರಮುಖ ವ್ಯಕ್ತಿಗಳಾದ ಗೌಡ ಮತ್ತು ಗೋಪಾಲಾಚಾರಿ ಇವರೀರ್ವರ ಪಾರ್ಟಿ ರಾಜಕೀಯದ ಪರಿಚಯವಾಗಲು ಪ್ರಾರಂಭವಾಗುತ್ತದೆ. ಜವಾನ ಮಾದೇಗೌಡನ ಹಗರಣದ ನೆಪದಿಂದಾಗಿ, ಜಾತಿ ರಾಜಕೀಯದ ಹಿಡಿತಕ್ಕೆ ಅವಳು ಸಿಲುಕಿಕೊಳ್ಳುತ್ತಾಳೆ. ಕಾದಂಬರಿಯ ಕೊನೆಯಲ್ಲಿ ಗೋಪಾಲಾಚಾರಿಯ ಮಗ ರಾಘವನನ್ನು ಮದುವೆಯಾಗಲು ನಿರ್ಧರಿಸುತ್ತಾಳೆ. ಚಂದ್ರಾ ಹಾಗೂ ರಾಘವ ಇಬ್ಬರೂ ಊರು ಬಿಟ್ಟು ಹೋಗುವ ನಿರ್ಧಾರ ತೆಗೆದುಕೊಳ್ಳುತ್ತಾರೆ. ಈ ಮಧ್ಯೆ ಬೇರೊಬ್ಬನ ಒಲವಿಗಾಗಿ ಗಂಡನನ್ನು ಬಿಟ್ಟು ಹಳ್ಳಿಗೆ ಬಂದ ಗೋಪಾಲಾಚಾರಿಯ ಮಗಳು ರತ್ನಳ ನೋವಿನ ಕಥೆ, ಕ್ರಿಶ್ಚಿಯನ್ ಹುಡುಗ ಡೇನಿಯಲ್‌ನೊಂದಿಗೆ ತಿರುಗುವ ಕಥಾನಾಯಕಿಯ ತಂಗಿ ರೂಪಸಿ ದೀಪಾಲಿಯ ಪ್ರಸಂಗ, ದೀಪಾಲಿಗೆ ಮದುವೆ ಮಾಡಲು ತುದಿಗಾಲಿನಲ್ಲಿ ನಿಂತು, ಅಕ್ಕ ಚಂದ್ರಳ ಮದುವೆಯ ಬಗೆಗೆ ಉದಾಸೀನ ತೋರುವ ಚಂದ್ರಳ ತಾಯಿ, ಮಗಳಿಗೆ ಧೈರ್ಯ-ಸ್ಥೈರ್ಯಗಳನ್ನು ಧಾರೆಯೆರದ ಚಂದ್ರಾಳ ತಂದೆ, ರಾಯರ ಸಾವು—ಇವುಗಳನ್ನೂ ಕಾದಂಬರಿಕಾರ್ತಿ ಚಿತ್ರಿಸುತ್ತಾರೆ. ಚಂದ್ರಾಳ ಸೋಲು—ಗೆಲುವಿನ ಪ್ರಶ್ನೆ, ಲೇಖಿಕಿಗೆ ಮುಖ್ಯವಲ್ಲ. ಹಳ್ಳಿಗಳ ಇಂದಿನ ಪರಿಸ್ಥಿತಿಯ ಚಿತ್ರಣ ಮಾತ್ರ ಅವರ ಗಮನದಲ್ಲಿದೆ. ಭಾಷೆ ಮತ್ತು ಶೈಲಿಯ ದೃಷ್ಟಿಯಿಂದ ಗಮನಿಸತಕ್ಕ ಗುಣ ಕಾದಂಬರಿಗಿದೆ. ಶೈಲಿ ಎಲ್ಲಿಯೂ ಅತಿರೇಕಕ್ಕೆ ಹೋಗದೆ ಸಂಯಮಪೂರ್ಣವಾಗಿದೆ. ಆದರೆ ಹಳ್ಳಿಯ ಕೊಳಕು ರಾಜಕೀಯದ ವ್ಯಾಪಕವಾದ ಚಿತ್ರಣವೇನೂ ನಮಗೆ ದೊರಕುವುದಿಲ್ಲ. ವಸ್ತು, ಭಾಷೆ, ವೈಚಾರಿಕತೆ, ವಾಸ್ತವಿಕ ಪ್ರಜ್ಞೆ ಈ—ಎಲ್ಲ ದೃಷ್ಟಿಯಿಂದಲೂ ಈಚನೂರು ಶಾಂತರವರ ಕಾದಂಬರಿ, ಉಳಿದ ಲೇಖಿಕಿಯರ ಕೃತಿಗಳಿಗಿಂತ ಉತ್ತಮವಾಗಿದೆ ಎನ್ನಬಹುದು. ಇನ್ನೂ ಒಳ್ಳೆಯ ಕೃತಿಗಳನ್ನು ಶಾಂತರವರಿಂದ ನಾವು ನಿರೀಕ್ಷಿಸಬಹುದು.

—ಎಂ. ಹೆಚ್. ಪದ್ಮಾ

**ಅನುವಾದಿತ ಕಾದಂಬರಿಗಳು**

ಈ ವರ್ಷ ನಮ್ಮ ಸಮೀಕ್ಷೆಗೆ ದೊರೆತ ಅನುವಾದಿತ ಕಾದಂಬರಿಗಳ ಸಂಖ್ಯೆ ಕಡಿಮೆ. ಒಂದೆರಡು ಕೃತಿಗಳಾದರೂ ಗುಣಮಟ್ಟದಲ್ಲಿ, ಸತ್ವದಲ್ಲಿ ಎತ್ತರದಲ್ಲಿ ನಿಂತಿವೆ ಎಂಬುದು ಸಮಾಧಾನಕರವಾದ ಸಂಗತಿ.

**ಊರಿಗೆ ಮರಳಿದಾಗ** ಎಂಬ ಕೃತಿ ಇಂಗ್ಲಿಷ್ ಸಾಹಿತ್ಯದ ಸುಪ್ರಸಿದ್ಧ ಕಾದಂಬರಿಕಾರ ಥಾಮಸ್ ಹಾರ್ಡಿಯ 'The Return of the native' ಎಂಬ ಕಾದಂಬರಿಯ ಅನುವಾದ. ಇದನ್ನು ಕನ್ನಡಿಸಿದವರು ಎ. ನಾಗರಾಜರಾವ್ ಅವರು. ಇಡೀ ಕಾದಂಬರಿಯಲ್ಲಿ ಪ್ರಕೃತಿಯನ್ನು ಪ್ರಮುಖ ಪ್ರಬಲ ಶಕ್ತಿಯಾಗಿ ದುಡಿಸಿ ಕೊಳ್ಳುವ ಕಲೆ ಮೂಲ ಕಾದಂಬರಿಕಾರರಿಗೆ ಕರಗತವಾಗಿರುವುದನ್ನು ನಾವು ಉದ್ದಕ್ಕೂ ಕಾಣುತ್ತೇವೆ. ನಿಸರ್ಗದ ಅಗಾಧ ಅದ್ಭುತ ಶಕ್ತಿಯ ಮುಂದೆ ಮಾನವ ತನ್ನ ಸ್ವಾರ್ಥ ಸಣ್ಣತನವನ್ನು ಸಾಧ್ಯವಾದಷ್ಟು ಕಳೆದುಕೊಂಡು ಅದರ ಎತ್ತರಕ್ಕೆ ಅವನು ಬೆಳೆದು ನಿಲ್ಲಬೇಕು. ನಿಸರ್ಗಕ್ಕೆ ದೂರವಾದಷ್ಟು ಮಾನವ ಮಾನವೀಯತೆಯನ್ನು ಕಳೆದು ಕೊಳ್ಳುತ್ತಾನೆ. ಅವನು ಮೃಗವಾಗುತ್ತಾನೆ. ಅವನ ಬದುಕು ಜಡವಾಗುತ್ತದೆ. ನೀರಸವಾಗುತ್ತದೆ. ನಿಸರ್ಗದ ರಹಸ್ಯವನ್ನು, ತಿರುಳನ್ನು ಅರಿತು ಅದನ್ನು ಬದುಕಿನ ಸ್ಫೂರ್ತಿಯಾಗಿ, ಪ್ರೇರಕಶಕ್ತಿಯಾಗಿ ಬಳಸಿಕೊಂಡಾಗಲೇ ಅವನು ನಿಜವಾದ ಅರ್ಥದಲ್ಲಿ ಮನುಷ್ಯನಾಗುತ್ತಾನೆ. ಈ ಬಗೆಯ ಆಶಯವನ್ನು ಈ ಕೃತಿಯಲ್ಲಿ ಮುಖ್ಯವಾಗಿ ಕಾಣುತ್ತೇವೆ.

ವಿಸ್ತಾರವಾದ ಪ್ರಕೃತಿಯ ಚಿತ್ರಣ, ಪ್ರಕೃತಿಯ ರೌದ್ರ, ಮನೋಹರತೆಯ ವರ್ಣನೆ, ಮನುಷ್ಯನ ಸುಖ–ದುಃಖಗಳ ಭಾವನೆಗಳಿಗೆ ಪ್ರಕೃತಿಯೂ ಸಹಕರಿಸು ವಂತೆ ಚಿತ್ರಿಸುವುದು–ಇವೆಲ್ಲ ಈ ಕೃತಿಯಲ್ಲಿ ಎದ್ದು ಕಾಣುವ ಅಂಶಗಳು. ಈ ಕಾದಂಬರಿಯ ಮೊದಲ ಪುಟಗಳಲ್ಲಿ ವರ್ಣಿತವಾಗಿರುವ 'ಎಗ್ಡನ್ ಹೀತ್' ಎಂಬ ಕುರುಚಲು ಕಾಡಿನ ವಾತಾವರಣದ ಚಿತ್ರಣ, ಮುಂಬರುವ ರೌದ್ರ, ದುರಂತ–ಘಟನೆ ಗಳಿಗೆ ಒಳ್ಳೆಯ ಹಿನ್ನೆಲೆಯೂ ಆಗುತ್ತದೆ. ಈ ವರ್ಣನೆ ಒಂದು ರೀತಿಯಲ್ಲಿ ಓದುಗರಿಗೆ ಒಳ್ಳೆಯ ಭೂಮಿಕೆಯನ್ನು ಕಲ್ಪಿಸುತ್ತದೆ.

ಪ್ಯಾರಿಸ್‌ನ ವೈಭವಯುತವಾದ ನಾಗರಿಕ ಜೀವನಕ್ಕೆ ಬೇಸತ್ತು ಅಲ್ಲಿ ತಾನು ಮಾಡುತ್ತಿದ್ದ ಮುತ್ತು, ರತ್ನಗಳ ವ್ಯಾಪಾರವನ್ನು ಬಿಟ್ಟು ತನ್ನ ಹಳ್ಳಿಗೆ ವಾಪಸ್ಸು ಬರುತ್ತಾನೆ ಕ್ಲಿಮ್. ತನ್ನ ತಾಯಿ ಯೋಬ್ರೈಟ್‌ಳ ಇಚ್ಛೆಗೆ ವಿರೋಧವಾಗಿ ಮದುವೆಯಾಗಿ ತನ್ನ ಹಳ್ಳಿಯಲ್ಲೇ ನೆಲೆಸಲು ತೀರ್ಮಾನಿಸುತ್ತಾನೆ. ಮದುವೆಯ ಪರಿಣಾಮವಾಗಿ ತಾಯಿ-ಮಗ ಬೇರೆ ಬೇರೆಯಾಗುತ್ತಾರೆ. ಮಗನಿಂದ ಬೇರೆಯಾದ

ಕೊರಗಿನಲ್ಲಿ ತಾಯಿ ಕೊನೆಯುಸಿರೆಳೆಯುತ್ತಾಳೆ. ತಾಯಿಯ ಸಾವಿನ ದೃಶ್ಯದ ವಿವರಣೆ ಅತ್ಯಂತ ದಾರುಣವುಯವಾಗಿದೆ. ಸನ್ನಿವೇಶದ ಸೃಷ್ಟಿಯಿಂದಾಗಿ ಉಂಟಾಗುವ ದುರಂತದ ಛಾಯೆ ಮನದಾಳದಲ್ಲಿ ನಿಲ್ಲುತ್ತದೆ. ತಾಯಿ ಬದುಕಿರುವ ವರೆಗೂ ತಾನು ಅವಳನ್ನು ಸರಿಯಾಗಿ ನೋಡಿಕೊಳ್ಳಲಿಲ್ಲವೆಂಬ ಪಶ್ಚಾತ್ತಾಪದಿಂದ ಜೀವನವಿಡೀ ಕೊರಗುತ್ತಾನೆ ಕ್ಲಿಮ್. ಪಶ್ಚಾತ್ತಾಪದ ಬೇಗುದಿಯಲ್ಲಿ ಬೆಂದಷ್ಟೂ ಅವನ ಮನಸ್ಸು ಪಕ್ವವಾಗುತ್ತದೆ. ಕಣ್ಣು ಕಾಣಿಸದಿದ್ದರೂ ಹೊದರು ಹುಲ್ಲು ಕತ್ತರಿಸಿಹಾಕುವ ವೃತ್ತಿಯನ್ನು ಸಂತೋಷದಿಂದ ಕೈಗೊಂಡು ಸ್ವಂತ ಸಂಪಾದನೆ ಯಲ್ಲಿ ತೃಪ್ತಿಕಾಣಲಾರಂಭಿಸುತ್ತಾನೆ. ಆದರೆ ತನ್ನ ಗಂಡ ಕ್ಲಿಮ್‌ನೊಂದಿಗೆ ಪ್ಯಾರಿಸ್‌ಗೆ ಹೋಗಿ ಅಲ್ಲಿ ವೈಭವಯುತವಾದ ನಾಗರಿಕ ಜೀವನ ನಡೆಸುವ ಕನಸು ಕಾಣುತ್ತಿದ್ದ ಯುಸ್ಟೇಷ್ಯ ತನ್ನ ಗಂಡನ ಕಣ್ಣಿನ ಬೇನೆ, ಕೀಳುವೃತ್ತಿಯಿಂದಾಗಿ ತೀವ್ರ ನಿರಾಶೆಗೊಳಗಾಗುತ್ತಾಳೆ. ಗಂಡ–ಹೆಂಡಿರಲ್ಲಿ ಮನಸ್ತಾಪವುಂಟಾಗುತ್ತದೆ. ಇಬ್ಬರೂ ಬೇರೆಯಾಗುತ್ತಾರೆ.

ಕ್ಲಿಮ್‌ನ ಹೆಂಡತಿ ಯುಸ್ಟೇಷ್ಯ ತನ್ನ ಹಿಂದಿನ ಪ್ರಿಯಕರ ವೈಲ್ಡೀವ್‌ನೊಡನೆ ಪ್ಯಾರಿಸ್‌ಗೆ ಓಡಿಹೋಗಲು ಸಂಚುಹೂಡಿದ ರಾತ್ರಿ ಪ್ರಕೃತಿಯ ಪ್ರಕೋಪಕ್ಕೆ ಬಲಿ ಯಾಗುತ್ತಾಳೆ. ತುಂಬು ಪ್ರವಾಹದಲ್ಲಿ ತೇಲಿಹೋಗುತ್ತಾಳೆ. ಅವಳನ್ನು ಉಳಿಸಿ ಕೊಳ್ಳಲು ನೀರಿಗೆ ಬಿದ್ದ ಅವಳ ಪ್ರಿಯಕರನೂ ಸಾವನ್ನಪ್ಪುತ್ತಾನೆ. ವೈಲ್ಡೀವ್‌ನ ಹೆಂಡತಿ ಥೊಮಾಸಿನ್ (ಇವಳು ಕ್ಲಿಮ್‌ನ ಸೋದರತ್ತೆಯ ಮಗಳು) ತನ್ನ ಮಗುವಿ ನೊಂದಿಗೆ ಕೆಲವು ದಿನಗಳು ಕ್ಲಿಮ್‌ನ ಮನೆಯಲ್ಲಿರಲು ಬರುತ್ತಾಳೆ. ತನ್ನ ಎಲ್ಲ ಕಷ್ಟಗಳಲ್ಲೂ ಮೊದಲಿನಿಂದಲೂ ಸಹಾಯ ಹಸ್ತ ನೀಡುತಿದ್ದ, ತನ್ನನ್ನು ನಿಸ್ವಾರ್ಥ ದಿಂದ, ತುಂಬು ಹೃದಯದಿಂದ ಪ್ರೀತಿಸುತ್ತಿದ್ದ ವೆನ್ ಎಂಬುವವನನ್ನು ಥೊಮಾಸಿನ್ ಮದುವೆಯಾಗುತ್ತಾಳೆ.

ತಾಯಿ, ಹೆಂಡತಿಯನ್ನು ಕಳೆದುಕೊಂಡ ದುಃಖ ಮರೆಯಲು ಕ್ಲಿಮ್ ಹಳ್ಳಿಯಲ್ಲೇ ನೆಲೆಸುತ್ತಾನೆ. ಅಲೆಮಾರಿ ಧರ್ಮ ಪ್ರಚಾರಕನಾಗಿ, ರಾತ್ರಿ ಶಾಲೆಯಲ್ಲಿ ಭೋಧಕನಾಗಿ ಹಳ್ಳಿಯ ಮುಗ್ಧ ಜನರಿಗೆ ತಿಳುವಳಿಕೆ ನಿಡುವ ವೃತ್ತಿಯನ್ನು ಕೈಗೊಂಡು ಅದರಲ್ಲಿ ತೃಪ್ತಿ ಕಾಣಲು ಯತ್ನಿಸುತ್ತಾನೆ.

ಪ್ರೀತಿ, ಪ್ರೇಮ, ಮದುವೆ–ಮೊದಲಾದುವುಗಳಲ್ಲಿ ಮತ್ತು ತಾಯಿ, ಮಗ, ಅತ್ತೆ, ಸೊಸೆ, ಬಂಧು, ಬಳಗ, ಸ್ನೇಹಿತರು-ಈ ಎಲ್ಲಾ ಸಂಬಂಧಗಳ ವಿವರಗಳ ಹಿನ್ನೆಲೆಯಲ್ಲಿ ಸಾಂಪ್ರದಾಯಿಕ ಮನಸ್ಸು ಕೆಲಸ ಮಾಡಿರುವುದನ್ನು ಗುರುತಿಸಬಹುದು. ನಿಸರ್ಗದಲ್ಲಿ ಒಂದಾಗಿ ಬೆಳೆದ ಹತ್ತು ಹಲವು ಬಗೆಯ ಪಾತ್ರಗಳು ಧೀಮಂತವಾಗಿ ಬೆಳೆದು ನೀತಿರುವುದನ್ನು ಕಾಣಬಹುದು. ವಾಸ್ತುಶಿಲ್ಪ ವನ್ನು ಅಭ್ಯಸಿಸಿದ್ದ ಹಾರ್ಡಿ "ವಿವರಗಳನ್ನು ಕಲಾತ್ಮಕವಾಗಿ ಬೆಳಸಿಕೊಂಡು,

ಕಾದಂಬರಿಯಲ್ಲಿ ಅಸಾಧಾರಣ ಶಿಲ್ಪ ವಿನ್ಯಾಸವನ್ನು...ಸಾಧಿಸುತ್ತಾನೆ. ವಿಲಕ್ಷಣ ಸನ್ನಿವೇಶಗಳನ್ನು ಚಿತ್ರಿಸಿ ಕರಳು ಕತ್ತರಿಸುವ ದುರಂತಕ್ಕೆ ಕೋಮಲತೆಯ ಅಂಚನ್ನು ಕೊಡಬಲ್ಲ." ಎಂಬ ವಿಮರ್ಶಕರ ಮಾತುಗಳಿಗೆ ಈ ಕೃತಿಯಲ್ಲಿ ಸಾಕಷ್ಟು ಪುರಾವೆಗಳು ಸಿಗುತ್ತವೆ.

ಇಂತಹದೊಂದು ಪ್ರಬುದ್ಧ ಕೃತಿಯನ್ನು ನಾಗರಾಜರಾವ್ ಅವರು ಸಮರ್ಥವಾಗಿ ಕನ್ನಡಿಸಿದ್ದಾರೆ. ಮೂಲದ ಅರ್ಥ-ಭಾವಗಳಿಗೆ ಧಕ್ಕೆ ಬರದ ರೀತಿಯಲ್ಲಿ ಅನುವಾದಗೊಂಡಿರುವ ಈ ಕೃತಿ ಈ ವರ್ಷ ಕನ್ನಡಕ್ಕೆ ಸೇರಿರುವ ಒಂದು ಉತ್ತಮ ಕೊಡುಗೆ ಎನ್ನಬಹುದು.

**ತುಳಸೀದಳ,** ಯಂಡಮೂರಿ ವೀರೇಂದ್ರನಾಥ್ ಅವರ 'ತುಳಸೀದಳಂ' ಎಂಬ ತೆಲುಗು ಕಾದಂಬರಿಯ ಕನ್ನಡಾನುವಾದ. ಇದರ ಅನುವಾದಕರು ವಂಶಿ ಅವರು. ಓದುಗರನ್ನು ಒಂದು ವಿಚಿತ್ರ ಅನುಭವದ ಪ್ರಪಂಚಕ್ಕೆ ಕರೆದೊಯ್ಯುವ ಈ ಕಾದಂಬರಿ ವಿಸ್ಮಯಕಾರಿಯಾಗಿದೆ. ವಿಜ್ಞಾನಕ್ಕೂ, ವಾಮಾಚಾರಕ್ಕೂನಡೆಯುವ ಹೋರಾಟದಲ್ಲಿ ಯಾವುದರ ಶಕ್ತಿ ಮೇಲು ಎನ್ನುವುದರಲ್ಲಿ ತೀವ್ರವಾದ ಪೈಪೋಟಿ ನಡೆಯುತ್ತದೆ ಇಲ್ಲಿ. ಕಡೆಗೆ ಗೆಲ್ಲುವುದು ಯಾವುದು? ಎಂಬ ಕುತೂಹಲವನ್ನು ಹುಟ್ಟಿಸುತ್ತಾ ಸಾಗುವ ಈ ಕೃತಿ ಭಯಾನಕ ಘಟನೆಗಳ ವಿವರಣೆಗಳಿಂದ ಕೂಡಿದ್ದು ತನ್ನ ಉದ್ದೇಶದಲ್ಲಿ ಸಫಲತೆಯನ್ನು ಕಂಡುಕೊಂಡಿದೆ.

ತಮ್ಮ ದಾರಿಗೆ ಅಡ್ಡ ಬರುವವರನ್ನು ತಮಗಾಗದವರನ್ನು ಇಲ್ಲವೆ ನಿಧಿಗೋಸ್ಕರ ಮುಗ್ಧ ಜನರನ್ನು ಮಾಟ, ಮಂತ್ರ ಮೊದಲಾದ ಕ್ಷುದ್ರ ವಿದ್ಯೆಗಳಿಂದ ಬಲಿತೆಗೆದುಕೊಳ್ಳುವ ವಾಮಾಚಾರಿಗಳು ಹೇರಳವಾಗಿದ್ದಾರೆ. ತಮಗಾಗದವರ ಆಕೃತಿಯಲ್ಲಿ ಗೊಂಬೆ ಮಾಡಿ ಅದರ ಅಂಗಾಂಗಳಿಗೆ ಸೂಜಿಗಳನ್ನು ಚುಚ್ಚಿ ಆ ಗೊಂಬೆಯನ್ನು ಬೆಂಕಿಯಲ್ಲಿ ಸುಟ್ಟು ಹಾಕುವುದರ ಮೂಲಕ ಆ ವ್ಯಕ್ತಿಯನ್ನು ನಿರ್ನಾಮ ಮಾಡುವ ಕುವಿದ್ಯೆ ಒಂದು ದೇಶಕ್ಕೆ ಅಥವಾ ಕಾಲಕ್ಕೆ ಸೀಮಿತವಾದುದಲ್ಲ. ಅತಿ ಪ್ರಾಚೀನ ಕಾಲದಿಂದಲೂ ಇಂತಹ ಕುವಿದ್ಯೆಯ ಪ್ರಯೋಗ ನಡೆಯುತ್ತಲೇ ಬಂದಿದೆ. ಹಾರ್ಡಿಯ 'ಊರಿಗೆ ಮರಳಿದಾಗ' ಕಾದಂಬರಿಯಲ್ಲಿ ಬರುವ ಸೂಸಾನ್ ಎಂಬುವಳು ಯುಸ್ಟೇಷ್ಯಳ ಮೇಲೆ ಈ ದುಷ್ಟಪ್ರಯೋಗ ನಡೆಸುತ್ತಾಳೆ. ಮೂಢನಂಬಿಕೆಯ ಭಯಂಕರ ಸಾಹಸವೊಂದಕ್ಕೆ ಕೈಹಾಕುತ್ತಾಳೆ. (ಪು. 349—351)

ಮಂತ್ರ, ಮಾಟ, ವಾಮಾಚಾರ, ಬಾನಾಮತಿ, ಕಾಷ್ಮೋರಾ—ಮೊದಲಾದ ಕ್ಷುದ್ರ ವಿದ್ಯೆಗಳನ್ನು (ವಿಚ್‌ಕ್ರಾಫ್ಟ್) ಮತ್ತು ಭೂತ ಚೇಷ್ಟೆ ಹಾಗೂ ಅಘೋರಿಗಳನ್ನು ಕುರಿತ ಕತೆ, ಕಾದಂಬರಿಗಳು ಇತ್ತೀಚಿನ ವರ್ಷಗಳಲ್ಲಿ ಭಾರತೀಯ ಭಾಷೆಗಳಲ್ಲಿ ಹೇರಳವಾಗಿ ಕಂಡುಬರುತ್ತಿವೆ. ಬಹುಶಃ ಆಂಗ್ಲಭಾಷೆಯ 'ಓಮೆನ್', ಎಗ್ಸಾರ್ಸಿಸ್ಟ್,

'ಡ್ರಾಕುಲಾ'-ಮೊದಲಾದ ಭಯಾನಕ ಚಲನ ಚಿತ್ರಗಳಿಂದ ಇಂತಹ ಕತೆ, ಕಾದಂಬರಿಗಳಿಗೆ ಪ್ರೇರಣೆ ಒದಗಿರಬಹುದೆಂದು ತೋರುತ್ತದೆ. ನಮ್ಮ ದೇಶದಲ್ಲಿ ಇಂದಿಗೂ ಇಂತಹ ಮಾಂತ್ರಿಕರು ಒರಿಸ್ಸಾ, ಕೇರಳಗಳಲ್ಲಿ ಹೆಚ್ಚಾಗಿ ಕಂಡು ಬರುತ್ತಾರೆ. ಯಾರ ವಿರುದ್ಧ ಮಾಡಲಾಗುವುದೋ ಅಂತಹವರಿಗೆ ಪೂರಾ ನಿರ್ಬಲತೆ, ಚಿತ್ರಹಿಂಸೆ ಮತ್ತು ನಾಶವನ್ನುಂಟುಮಾಡುವ ಈ ದುಷ್ಟ ವಿದ್ಯೆಯನ್ನು ಮಾಂತ್ರಿಕರು ಸಾಧಿಸಿಕೊಂಡಿರುತ್ತಾರೆ. 'ತುಳಸೀ ದಳ' ಕಾದಂಬರಿಯಲ್ಲಿ 'ಕಾಷ್ಮೋರಾ' ಎಂಬ ಕ್ಷುದ್ರ ಶಕ್ತಿಯ ಪ್ರಯೋಗವಾಗಿದೆ.

ಪಾಪುವಿನ ಹೆಸರಿಗಿದ್ದ ಇಪ್ಪತ್ತು ಲಕ್ಷ ರೂಪಾಯಿಯ ಆಸ್ತಿಯನ್ನು ತಮಗೇ ದಕ್ಕಿಸಿಕೊಳ್ಳಬೇಕೆಂಬ ಅತಿ ದುರಾಶೆಯಿಂದ 'ಶ್ರೀಕೃಷ್ಣ ಅನಾಥ ಬಾಲಕಿಯರ ಶರಣಾಲಯ'ದ ದುಷ್ಟಶಕ್ತಿಗಳು ಹತ್ತು ವರ್ಷದ ಬಾಲಕಿ ಪಾಪುವಿನ ಮೇಲೆ ಕ್ಷುದ್ರ ಶಕ್ತಿಯಾದ ಕಾಷ್ಮೋರಾವನ್ನು ಪ್ರಯೋಗಿಸುತ್ತಾರೆ. ಇಪ್ಪತ್ತೊಂದು ದಿನಗಳಲ್ಲಿ ಪಾಪು ಕೊನೆಯುಸಿರೆಳೆಯುತ್ತದೆ. ನಂತರ ತಮಗೇ ಆಸ್ತಿ ದಕ್ಕುತ್ತದೆ ಎಂದು ಕನಸು ಕಂಡಿದ್ದರು ಅವರು. ಕಾಷ್ಮೋರಾ ಪ್ರಯೋಗಕ್ಕೆ ಒಳಗಾದ ಪಾಪು ದಿನಕ್ಕೊಂದು ವಿಚಿತ್ರ ಬಗೆಯ ಹೊಸ ಹೊಸ ವ್ಯಾಧಿಯಿಂದ ನರಳುತ್ತಿತ್ತು. ನರಕ ಹಿಂಸೆ ಅನುಭವಿಸುತ್ತಿತ್ತು. ದೈಹಿಕವಾಗಿ, ಮಾನಸಿಕವಾಗಿ ಕ್ಷೀಣಿಸುತ್ತಿತ್ತು. ಕಾಷ್ಮೋರಾ ಪ್ರಯೋಗದ ವಿವರಗಳು ಅತ್ಯಂತ ದಾರುಣವಾದುದು. ಕ್ಷಣ ಕ್ಷಣಕ್ಕೂ ಸಾವಿನ ಅಂಚಿಗೆ ಸಾಗುತ್ತಿದ್ದ ಪಾಪುವಿನ ವ್ಯಾಧಿ ಪ್ರಖ್ಯಾತ ಸರ್ಜನ್‌ಗಳಿಗೆ, ಹಿಪ್ನಾಟಿಸಂ ತಜ್ಞರಿಗೆ, ಮಾಂತ್ರಿಕರಿಗೆ, ಪಾಪುವಿನ ತಂದೆ ಶ್ರೀಧರನಿಗೆ, ತಾಯಿ ಶಾರದಳಿಗೆ ಹಾಗೂ ಅವರ ಹಿತೈಷಿ ಮಿತ್ರರಿಗೆ ಒಂದು ದೊಡ್ಡ ಸವಾಲಾಗಿತ್ತು. ಅವರೆಲ್ಲರೂ ಪಾಪುವನ್ನು ಈ ನರಕಯಾತನೆಯಿಂದ ಬಿಡುಗಡೆ ಮಾಡಲು ಸತತ ಪ್ರಯತ್ನ ಮಾಡುತ್ತಿದ್ದರು. ಹಗಲಿರುಳೂ ಶ್ರಮಿಸುತ್ತಿದ್ದರು.



ವಿಜ್ಞಾನಕ್ಕೆ ಸವಾಲಾಗಿ ನಿಂತ ಈ ಕ್ಷುದ್ರಶಕ್ತಿಯ ವಿಪರೀತ ವರ್ತನೆ—ಎಲೆಕ್ಟ್ರಾನಿಕ್ಸ್ ಇಂಜನಿಯರೊಬ್ಬನು ತಾನು ಓದಿದ ಎಲೆಕ್ಟ್ರಾನಿಕ್ಸ್ ವಿದ್ಯೆಯನ್ನು ದುರುಪಯೋಗಪಡಿಸಿಕೊಂಡು ಪಾಪುವಿಗೆ ವೈರ್‌ಲೆಸ್ ಮೂಲಕ ಕೊಡುತ್ತಿದ್ದ ಅನಿಷ್ಟಕಾರಕ ಸೂಚನೆಗಳು—ಪಾಪುವಿನ ಕರುಣಾಜನಕ ಸ್ಥಿತಿ—ಇವೆಲ್ಲ ಓದುಗರನ್ನು ರೋಮಾಂಚನಗೊಳಿಸುತ್ತವೆ. ವಿಸ್ಮಿತರನ್ನಾಗಿ ಮಾಡುತ್ತವೆ.

ವಿಶೇಷ ತಜ್ಞ ವೈದ್ಯರ ಸತತ ಪರಿಶ್ರಮ, ಸಮಯ ಪ್ರಜ್ಞೆಯಿಂದಾಗಿ, ನಿತ್ಯ ನರಕವನ್ನನುಭವಿಸುತ್ತಾ ಸಾವಿಗೀಡಾಗಬೇಕಾಗಿದ್ದ ಪಾಪು ಕೊನೆಯ ಸೆಕೆಂಡಿನಲ್ಲಿ ಸಾವಿನ ದವಡೆಯಿಂದ ಪಾರಾದದ್ದು ವಿಜ್ಞಾನಕ್ಕೆ ದೊರೆತ ವಿಜಯ! ಈ ಅನಿರೀಕ್ಷಿತ ತಿರುವಿನಿಂದಾಗಿ ಕಾಷ್ಮೋರಾ ಪ್ರಯೋಗಿಸಲು ಕಾರಣರಾದ ದುಷ್ಟಶಕ್ತಿಗಳು

ಒಂದಲ್ಲ ಒಂದು ರೀತಿಯಲ್ಲಿ ಸಾವಿಗೀಡಾಗುತ್ತಾರೆ. ಎಲೆಕ್ಟ್ರಾನಿಕ್ಸ್ ಇಂಜನಿಯರ್ ತನ್ನ ದುಷ್ಟಪ್ರಯೋಗದಲ್ಲಿ ಅಸಫಲನಾಗಿ ಕಡೆಗೆ 'ಬ್ರೈಯಿನ್ ವಾಷಿಂಗ್' ಶಿಕ್ಷೆ ಅನುಭವಿಸಿ ಹುಚ್ಚನಾಗುತ್ತಾನೆ.

ಪಾಪುವಿನ ಮನೆಯಲ್ಲೇ ವಾಸವಾಗಿದ್ದ ಇಬ್ಬರು ದುಷ್ಟಶಕ್ತಿಗಳು ಪಾಪುವನ್ನು ದಿನೇ ದಿನೇ ಬಲಿ ತೆಗೆದುಕೊಳ್ಳುತ್ತಿದ್ದರೂ ಪಾಪುವಿನ ತಂದೆ–ತಾಯಿಗಳು ಆ ಬಗ್ಗೆ ಒಂದು ಸಲವಾದರೂ ಯೋಚಿಸದಿದ್ದುದು ಆಶ್ಚರ್ಯ! ಅಪರಿಚಿತರು ಮನೆಯಲ್ಲೇ ಠಿಕಾಣಿ ಊರಿದಾಗ ಮನೆಯ ಯಜಮಾನ ಅವರ ದುಷ್ಟ ಚಟುವಟಿಕೆಗಳ ಬಗ್ಗೆ ಯಾಗಲಿ, ಅವರ ಇರುವಿಕೆಯ ಬಗ್ಗೆಯಾಗಲಿ ಎಚ್ಚರವಹಿಸದಿದ್ದುದು ಪ್ರಶ್ನಾರ್ಹ ವಾಗಿದೆ. ಅದೂ ಮನೆಯಲ್ಲಿ ಇಂತಹ ವಿಚಿತ್ರ ಘಟನೆಗಳು ಬೇರೆ ನಡೆಯುತ್ತಿರುವಾಗ ಅವರನ್ನು ವಿಚಾರಿಸಿಕೊಳ್ಳದಿದ್ದುದು ವಾಸ್ತವತೆಗೆ ದೂರವಾಗಿದೆ. ಶ್ರೀಧರನ ತಂಗಿ ಅನಿತಳಂತಹ ಮುಗ್ಧ ಯುವತಿಯ ಬಲಿಯಂತೂ ಅಮಾನುಷವಾದುದು. ಮಗಳ ವಿಚಿತ್ರ ಖಾಯಿಲೆಯ ಬಗ್ಗೆ ಅತಿಯಾಗಿ ಕಾಳಜಿವಹಿಸಿದ ಶ್ರೀಧರ, ತನ್ನ ತಂಗಿ ಅನಿತಳು ಆತ್ಮಹತ್ಯೆ ಮಾಡಿಕೊಂಡರೂ ಅದು ಏಕಾಯಿತು? ಅದಕ್ಕೆ ಕಾರಣವೇನು? ಎಂದು ಒಮ್ಮೆಯಾದರೂ ಆಲೋಚಿಸದೆ, ತನಿಖೆಗೊಳಪಡಿಸದೆ ಆ ಬಗ್ಗೆ ನಿರ್ಲಕ್ಷದಿಂದಿದ್ದುದು ತೀರಾ ಅಸಹಜವೆನಿಸುತ್ತದೆ. ಮೂಕನಾದರೂ ನಾರಾಯಣ ಅನಿತಳ ಸಾವಿಗೆ ಕಾರಣ ತಿಳಿದುಕೊಂಡು ಅದಕ್ಕೆ ಕಾರಣನಾದ ದುಷ್ಟ ವ್ಯಕ್ತಿಯ ಮೇಲೆ ಸೇಡು ತೀರಿಸಿಕೊಂಡದ್ದು ನಿಜಕ್ಕೂ ಮೆಚ್ಚಬೇಕಾದ ಸಂಗತಿ.

ಒಟ್ಟಿನಲ್ಲಿ ಈ ಕ್ಷುದ್ರಶಕ್ತಿಯ ತೀವ್ರ ಸ್ವರೂಪದ ಚಿತ್ರವನ್ನು ತಮ್ಮ ಕೃತಿಯಲ್ಲಿ ಸಮರ್ಥವಾಗಿ ಸೆರೆಹಿಡಿದಿರುವ ಮೂಲಲೇಖಕರು ಅಭಿನಂದನೆಗೆ ಪಾತ್ರರು. ಮೂಲದ ಅಂದ ಕೆಡದಂತೆ, ಅದರ ಸತ್ವವನ್ನು, ಕಾವನ್ನು, ತೀವ್ರತೆಯನ್ನು ಅನುವಾದದಲ್ಲೂ ಉಳಿಸಿಕೊಂಡಿರುವ ಅನುವಾದಕರ ಶ್ರಮ ಸಾರ್ಥಕವಾಗಿದೆ.

'The sign of Four' ಎಂಬ ಕಾನನ್ ಡಾಯ್ಲ್ ಅವರ ಪತ್ತೇದಾರಿ ಕಾದಂಬರಿಯನ್ನು ವಾಸುದೇವರಾವ್ ಅವರು **ನಾಲ್ವರ ಸಂಕೇತ** ಎಂಬ ಹೆಸರಿನಲ್ಲಿ ಅನುವಾದಿಸಿದ್ದಾರೆ. ಕಳೆದ ವರ್ಷ ಇದೇ ಅನುವಾದಕರ 'ರಕ್ತಪರಿಶೋಧನೆ' ಎಂಬ ಕಾದಂಬರಿ ಪ್ರಕಟವಾಯಿತು. 'ರಕ್ತಪರಿಶೋಧನೆ'ಯಲ್ಲಿ ಷರ್ಲಾಕ್ ಹೋಮ್ಸ್ ಪತ್ತೆದಾರಿಕೆಯಲ್ಲಿ ಅನುಸರಿಸುವ ವೈಜ್ಞಾನಿಕ ವಿಧಾನ, ತರ್ಕ, ಅವನ ಸೂಕ್ಷ್ಮಗ್ರಹಣ ಶಕ್ತಿ–ಇವೆಲ್ಲದರ ಪರಿಚಯವಾಗುತ್ತದೆ. ಅದು ಇಲ್ಲಿಯೂ ಮುಂದುವರೆದಿದೆ. ಈ ಕಾದಂಬರಿಯಲ್ಲಿ ಹೋಮ್ಸ್ ಅತ್ಯಂತ ಚಾಣಾಕ್ಷತನದಿಂದ ನಡೆಸುವ ಪತ್ತೇದಾರಿಕೆಯ ಕ್ರಮ ನಿಜಕ್ಕೂ ಶ್ಲಾಘನೀಯವಾದುದು. ಓದುಗರ ಆಸಕ್ತಿಯನ್ನು ಕೊನೆಯವರೆಗೂ ಉಳಿಸಿಕೊಂಡುಹೋಗುವ ಇದು ಒಂದು ಕಲಾತ್ಮಕ ವಿಸ್ಮಯಕಾರಿ ಕೃತಿ.

ಅಂಡಮಾನ್ ದ್ವೀಪದಲ್ಲಿ ಖೈದಿಗಳಾಗಿದ್ದ ನಾಲ್ವರಿಗೆ ಸೇರಬೇಕಾಗಿದ್ದ ಒಂದು ದೊಡ್ಡ ಮೊತ್ತದ ರಹಸ್ಯ ನಿಧಿಯನ್ನು ಆಗ್ರಾ ಕೋಟೆಯಿಂದ ಅಪಹರಿಸಿಕೊಂಡು ಹೋಗಿ ಇಂಗ್ಲೆಂಡ್ ಸೇರಿದ ಮೇಜರ್ ಷಾಲ್ಟೋ ಮೃತನಾಗುತ್ತಾನೆ. ಅಂಡಮಾನ್ ದ್ವೀಪದ ಆದಿನಿವಾಸಿ ಟೋಂಗ ಎಂಬುವನೊಡನೆ ಖೈದಿಗಳಲ್ಲೊಬ್ಬನಾದ ಬಿಳಿಯನಾದ ಮರದಕಾಲಿನ ಸ್ಮಾಲ್ ಎಂಬುವನು ಆ ದ್ವೀಪದಿಂದ ತಪ್ಪಿಸಿಕೊಂಡು ಇಂಗ್ಲೆಂಡಿಗೆ ಬರುತ್ತಾನೆ. ತಮ್ಮ ನಾಲ್ವರಿಗೆ ಮೋಸ ಮಾಡಿದ ಷಾಲ್ಟೋನಮೇಲೆ ಸೇಡುತೀರಿಸಿಕೊಳ್ಳುವುದೊಂದೇ ಸ್ಮಾಲ್‌ನ ಏಕೈಕ ಗುರಿಯಾಗುತ್ತದೆ. ತಾನು ಮಾಡಿದ ತಪ್ಪಿಗೆ ಪಶ್ಚಾತ್ತಾಪಪಟ್ಟು, ತಾನು ಬಚ್ಚಿಟ್ಟಿದ್ದ ರಹಸ್ಯನಿಧಿಯ ಜಾಗವನ್ನು ತನ್ನ ಮಕ್ಕಳಿಗೆ ತಿಳಿಸುವ ಮೊದಲೇ ಷಾಲ್ಟೋ ಸಾಯುತ್ತಾನೆ. ಈ ಸುದ್ದಿ ತಿಳಿದ ಸ್ಮಾಲ್ ರಹಸ್ಯನಿಧಿಗಾಗಿ ಹುಡುಕಿ ಅದು ಸಿಗದಿರಲು ಕೋಪಗೊಂಡು ಒಂದು ಕಾಗದದಲ್ಲಿ 'ನಾಲ್ವರ ಸಂಕೇತ'ವೆಂದು ಬರೆದು ಅವನ ದೇಹಕ್ಕೆ ಸಿಕ್ಕಿಸಿಹೋಗುತ್ತಾನೆ. ಷಾಲ್ಟೋನ ಮಗ ಬಾರ್ತೋಲೊಮಿಂ ವಾಸಿಸುತ್ತಿದ್ದ ಕೊಠಡಿಯ ಮೇಲ್ಛಾವಣಿಯಿಂದ ನುಗ್ಗಿ ಟೋಂಗ ಮತ್ತು ಸ್ಮಾಲ್ ರಹಸ್ಯನಿಧಿಯ ಪತ್ತೆಹಚ್ಚುತ್ತಾರೆ. ಬಾರ್ತೋಲೋಮಿಯನ್ನು ಟೋಂಗ ವಿಷದ ಮುಳ್ಳಿನಿಂದ ಕೊಲ್ಲುತ್ತಾನೆ. ಈ ಕೊಲೆಯ ರಹಸ್ಯವನ್ನು ಪತ್ತೆಹಚ್ಚಲು ಹೋಮ್ಸ್ ಉತ್ಸಾಹದಿಂದ ಕಾರ್ಯಪ್ರವೃತ್ತನಾಗುತ್ತಾನೆ. ನಿಧಿಯ ಪೆಟ್ಟಿಗೆಯನ್ನು ಹೊತ್ತ ಇಬ್ಬರೂ ಥೇಮ್ಸ್ ನದಿಯನ್ನು ದಾಟಿಹೋಗಲು ನಿರ್ಧರಿಸುತ್ತಾರೆ. ಹೋಮ್ಸ್‌ರ ಅತಿ ಸೂಕ್ಷ್ಮ ಗ್ರಹಣಶಕ್ತಿ, ತರ್ಕ, ವೈಜ್ಞಾನಿಕ ವಿಧಾನದ ಅಪರಾಧ ಶೋಧನೆ ಯಿಂದಾಗಿ ಅಪರಾಧಿಗಳು ಸಿಕ್ಕಿಬೀಳುತ್ತಾರೆ. ದುರ್ದೈವವೆಂದರೆ ನಿಧಿಯ ಪೆಟ್ಟಿಗೆ ಯೇನೋ ಸಿಗುತ್ತದೆ. ಆದರೆ ನಿಧಿಯೆಲ್ಲವೂ ಮಾಯವಾಗಿ ಪೆಟ್ಟಿಗೆ ಖಾಲಿ ಯಾಗಿರುತ್ತದೆ. ತಾನು ಜೀವದ ಹಂಗು ತೊರೆದು ಸಂಪಾದಿಸಿದ್ದು ತನಗೂ ಹಾಗೂ ತನ್ನ ಮೂವರು ಮಿತ್ರರಿಗೆ ನ್ಯಾಯವಾಗಿ ಸಲ್ಲಬೇಕು. ಅದನ್ನು ಬೇರೆ ಯಾರೂ ಅನುಭವಿಸಕೂಡದೆಂಬ ಸಿಟ್ಟಿನಿಂದ ತಾನು ಪೋಲೀಸರಿಗೆ ಸಿಕ್ಕಿಬೀಳುವ ಮುನ್ನ ನಿಧಿಯೆಲ್ಲವನ್ನೂ ಸ್ಮಾಲ್ ಥೇಮ್ಸ್ ನದಿಗೆ ಎಸೆಯುತ್ತಾನೆ. 'ನಾಲ್ವರ ಸಂಕೇತ'ದ ರಹಸ್ಯವನ್ನು ಡಾ. ವಾಟ್ಸನ್ ಹಾಗೂ ಮತ್ತಿತರ ಸಹಾಯಕರ ಸಹಾಯದಿಂದ ಪತ್ತೆ ಹಚ್ಚಿದ ಹೋಮ್ಸ್ ಎಂದಿನಂತೆ ಹಿಂದೆ ಸರಿಯುತ್ತಾನೆ. ಆದರೆ ಈ ಚಾಣಾಕ್ಷ ಪತ್ತೇದಾರಿಕೆಯ ಕೀರ್ತಿ ಮಾತ್ರ ಪತ್ತೇದಾರ ಅಥೆಲ್ ಜೋನ್ಸ್‌ರಿಗೆ ಲಭಿಸುತ್ತದೆ. ಡಾ. ವಾಟ್ಸನ್‌ಗೆ ಪ್ರೀತಿಸಿದ ಹುಡುಗಿ ಸಿಗುತ್ತಾಳೆ. ಹೋಮ್ಸ್ ಮಾತ್ರ ಮತ್ತೊಂದು ಪತ್ತೇದಾರಿಕೆಯ ಕೆಲಸ ಸಿಗುವವರೆಗೆ ಅಸ್ವಾಭಾವಿಕ ಪ್ರಚೋದನೆ ಪಡೆಯಲು ಕೊಕೇಯ್ನ ಇಂಜೆಕ್ಷನ್ ಚುಚ್ಚಿಕೊಂಡು ತೃಪ್ತನಾಗುತ್ತಾನೆ.

ಪತ್ತೇದಾರರಿಗೆ ಅಪರಾಧ ಶೋಧನೆಯಲ್ಲಿ ವಿಶೇಷ ಸಲಹೆ, ವಿವರಗಳನ್ನು ಪರಿಶೀಲಿಸಿ ಅಭಿಪ್ರಾಯ ಕೊಡುವ ಪ್ರಖ್ಯಾತ ಖಾಸಗಿ ಪತ್ತೇದಾರನೆಂದರೆ ಷರ್ಲಾಕ್

ಹೋಮ್ಸ್. ಅವನ ವಿಶೇಷ ಜ್ಞಾನಕ್ಕೆ ಪ್ರಚಾರವಿಲ್ಲ, ಕೀರ್ತಿಯಿಲ್ಲ, ಯಾವ ಪ್ರತಿಫಲವೂ ಇಲ್ಲ. ಅಪರಾಧ ಯಾವ ರೀತಿ ನಡೆದಿದೆ ಎಂಬುದನ್ನು ಕಂಡುಹಿಡಿಯುವುದೇ ಅವನ ಹವ್ಯಾಸ. ಹೀಗೆ ಕಂಡುಹಿಡಿಯಲು ದೊರಕುವ ಅವಕಾಶವೇ ಅವನಿಗೆ ನಿಜವಾದ ಪಾರಿತೋಷಕ.

ಕಾನನ್‌ಡಾಯ್ಲ್ ಅವರ ಅತ್ಯಂತ ಕುತೂಹಲಕಾರಿಯಾದ ಈ ಕಾದಂಬರಿಯನ್ನು ಕನ್ನಡ ಓದುಗರಿಗೆ ಒದಗಿಸಿದ ಅನುವಾದಕರು ಹಾಗೂ ಪ್ರಕಾಶಕರು ಅಭಿನಂದನೀಯರು.

—ಎಸ್. ವಿ. ವಿಮಲ



# ಸಾಹಿತ್ಯ ವಿಮರ್ಶೆ

**ಎಚ್. ಎಸ್. ರಾಘವೇಂದ್ರರಾವ್**

ಒಂದು ವರ್ಷದ ಅವಧಿಯಲ್ಲಿ, ಗ್ರಂಥರೂಪದಲ್ಲಿ ಪ್ರಕಟವಾಗಿರುವ ವಿಮರ್ಶಾ ಕೃತಿಗಳಲ್ಲಿ ನಮಗೆ ಉಪಲಬ್ಧವಾಗಿರುವ ಮೂವತ್ತು ಗ್ರಂಥಗಳ ಈ ಸಮೀಕ್ಷೆಯು ಸಮಕಾಲೀನ ವಿಮರ್ಶಾ ಪರಿಸರದ ವೈವಿಧ್ಯ, ಸ್ವೋಪಜ್ಞತೆ ಮತ್ತು ಮುಕ್ತತೆಗಳನ್ನು ಪ್ರಕಟಪಡಿಸುತ್ತದೆ. ವಿಮರ್ಶೆಯ ಕಾರ್ಯವು ಪರಸ್ಪರ ಅಸಮಾವೇಶಕವಾದ ಶ್ರೇಣಿಗಳಲ್ಲಿ ನಡೆಯುತ್ತಿರುವುದರಿಂದ ವಿಮರ್ಶೆಯ ಅತ್ಯುನ್ನತ ಸ್ತರದಲ್ಲಿ ನಡೆಯುತ್ತಿರುವ ಮೌಲಿಕವಾದ ಕಾರ್ಯವು, ತನಗಿಂತ ಕೆಳಗಿನ ಹಂತಗಳಿಗೆ ತಲುಪುತ್ತಿಲ್ಲವೇನೋ ಎನ್ನುವ ಅನುಮಾನವು ಸಹಜವಾಗಿಯೇ ಮೂಡುತ್ತದೆ. ವಿಮರ್ಶೆಯು ಕ್ರಮವಾಗಿ ಸೃಜನಶೀಲ ಲೇಖಕರು, ಇತರ ವಿಮರ್ಶಕರು, ಸಾಹಿತ್ಯದ ಅಧ್ಯಾಪಕರು/ವಿದ್ಯಾರ್ಥಿಗಳು ಮತ್ತು ಸಾಹಿತ್ಯಾಸಕ್ತರಾದ ಸಾಮಾನ್ಯ ವಾಚಕ ವರ್ಗದೊಂದಿಗೆ ಆರೋಗ್ಯಕರವಾದ ಸಂವಾದದ ನೆಲೆಗಳನ್ನು ಸ್ಥಾಪಿಸಿಕೊಳ್ಳಬೇಕಾಗುತ್ತದೆ. ಈ ಕ್ರಿಯೆಯು ಕನಿಷ್ಟಪಕ್ಷ ಇತರ ವಿಮರ್ಶಕರೊಂದಿಗಾದರೂ ಪಾರಸ್ಪರಿಕವಾಗಬೇಕಾಗುತ್ತದೆ. ಉಳಿದ ಕಡೆಯೂ, ಉದ್ಭವವಾಗಬಹುದಾದ ಸಂವಹನದ ಸಮಸ್ಯೆಗಳನ್ನು ಪರಿಹರಿಸಲು ಖಚಿತವಾದ ಪ್ರಯತ್ನಗಳನ್ನು ನಡೆಸಬೇಕಾಗುತ್ತದೆ. ಇಲ್ಲದೆ ಹೋದರೆ ಪ್ರತಿಯೊಬ್ಬ ವಿಮರ್ಶಕನೂ, ಒಂದು ದ್ವೀಪವಾಗಿ ವಿಮರ್ಶಾ ಪರಂಪರೆಯೊಂದಿಗಿನ ಜೀವಂತ ಸಂಬಂಧಗಳನ್ನು ಕಳೆದುಕೊಳ್ಳುತ್ತಾನೆ. ಸಾವಿರಾರು ಜನರು ಏಕಕಾಲದಲ್ಲಿ ಬೇರೆಬೇರೆ ಕಡೆ ಬಾವಿತೋಡ ಹೊರಟಾಗ ಆಗುವಂತೆ ನಿರಾಳವಾದ ಕೆಲಸ ನಡೆಯುತ್ತದೆ. ಪುನರುಕ್ತಿಯೇ ನಿಯಮವಾಗಿ, ಸ್ವಂತಿಕೆಯು ಅಪವಾದವಾಗುತ್ತದೆ. ವಿಮರ್ಶಕನಿಗೆ ಬುದ್ಧಿವಂತಿಕೆಯೇ ಬಂಡವಾಳವಾಗಿ ಅಧ್ಯಯನ ಮತ್ತು ಶಾಸ್ತ್ರಜ್ಞಾನಗಳು ನಿರ್ಲಕ್ಷ್ಯಕ್ಕೋ ಗೇಲಿಗೋ ಗುರಿಯಾಗುತ್ತದೆ.

ಇಂದಿನ ವಿಮರ್ಶೆಯ ಮತ್ತೊಂದು ಪ್ರಮುಖ ನೆಲೆಯೆಂದರೆ ಶತಮಾನಗಳಿಂದ, ಶಿಕ್ಷಣ ಸೌಲಭ್ಯಗಳಿಗೆ ಎರವಾಗಿದ್ದ, ಬಹುಸಂಖ್ಯಾತ ಜನಸಮುದಾಯವು ಸಾಹಿತ್ಯವನ್ನು ಕುರಿತ ತನ್ನ ನಿಲುವುಗಳನ್ನು ಮಂಡಿಸುತ್ತಿರುವುದು. ಇಂತಹ ಮಂಡನೆಯು ವಿಮರ್ಶೆಯ ಪರಿಕರ ಮತ್ತು ಪರಿಭಾಷೆಗಳ ಮೇಲೆ ಹಿಡಿತವನ್ನು ಹೊಂದದಿರಬಹುದು. ಶಿಷ್ಟಭಾಷೆಯ ನಯ-ನಾಜೂಕುಗಳು, ತೋರಿಕೆಯ ನಿರ್ಲಿಪ್ತತೆಗಳು ಅಲ್ಲಿ ಕಾಣೆಯಾಗಿರಬಹುದು. ಆದರೆ ಸಾಹಿತ್ಯದ ಸ್ವರೂಪವನ್ನೇ

ಬದಲಾಯಿಸುವಂತಹ ಚಾಲಕಶಕ್ತಿಗಳು ಸಕ್ರಿಯವಾಗಿರುವ ಈ ಸನ್ನಿವೇಶದಲ್ಲಿ ಬದಲಾಗಬೇಕಿರುವುದು ವಿಮರ್ಶೆಯ ಮಾನದಂಡಗಳೇ ವಿನಾ ಸಾಹಿತ್ಯ ರೂಪಣದ ದಿಕ್ಕುಗಳಲ್ಲ. ಸಾಮಾಜಿಕ ಸನ್ನಿವೇಶದಲ್ಲಿ ಮೂಡಿಬರುತ್ತಿರುವ ಹೊಸ ಉಸಿರುಗಳಿಗೆ ಸ್ಪಂದಿಸುತ್ತಲೇ, ತನ್ನ ಗ್ರಹಿಕೆ ಮತ್ತು ಚಿಂತನಗಳ ಪರಿಧಿಗಳನ್ನು ವಿಸ್ತರಿಸುವ ಮುಕ್ತಮನಸ್ಸನ್ನು ವಿಮರ್ಶಕನು ಪಡೆಯಬೇಕಾಗಿದೆ. ಹಾಗಲ್ಲದ ವಿಮರ್ಶೆ ಬೌದ್ಧಿಕ ವ್ಯಾಯಾಮವಾಗಿ ಮಾತ್ರ ಉಳಿಯುತ್ತದೆ.

ಸಾಹಿತ್ಯ ವಿಮರ್ಶೆಯ ಪಠ್ಯಕ್ರಮದಲ್ಲಿ ಮೂಡಿರುವ ಅಥವಾ ಇರುವ ಶಿಥಿಲತೆಗಳನ್ನು ಹಲವು ಗ್ರಂಥಗಳು ಹೊರಗೆಡಹುತ್ತವೆ. ಸಾಹಿತ್ಯವೆಂಬ ಕಲಾ ರೂಪದ ಅನನ್ಯತೆಗೆ ಗಮನಕೊಡದೆ ಕೇವಲ ಅದರ ವಸ್ತುವಿಗೆ ಮಾತ್ರ ಗಮನ ಕೊಡುವ ಪಠ್ಯ ಕ್ರಮವು ಸಾಹಿತ್ಯಕೃತಿಗಳ ಸಾಹಿತ್ಯೇತರ ಆಯಾಮಗಳನ್ನು ಮಾತ್ರ ಚರ್ಚಿಸುವ ವಿಮರ್ಶೆಗೆ ಕಾರಣವಾಗುತ್ತದೆ.

ಇಂತಹ ಸಮೀಕ್ಷಾ ಲೇಖನಗಳಿಗೆ ಅನಿವಾರ್ಯವಾದ ಕೆಲವು ಪರಿಮಿತಿಗಳು ಈ ಲೇಖನವಲ್ಲಿಯೂ ತೋರಿಕೊಂಡಿರಬಹುದು. ವಿವರವಾದ ಸಮರ್ಥನೆ ಯಿಲ್ಲದ, ಕೇವಲ ತೀರ್ಮಾನರೂಪವಾದ ಮಾತುಗಳು ನುಸುಳುವ ಸಂಭವ ಇಲ್ಲಿ ಜಾಸ್ತಿ. ಇಲ್ಲಿ ಹಾಗೆ ಆಗಿರಬಹುದಾದ ಕಡೆಗಳಲ್ಲಿಯೂ ಅನುಕ್ತವಾದ ತರ್ಕವು ನನ್ನ ತೀರ್ಮಾನಗಳ ಹಿಂದೆ ಇರುವುದೆಂದು ಸೂಚಿಸಬಯಸುತ್ತೇನೆ. ಹಲವು ಕೃತಿಗಳ ಬಗ್ಗೆ ನಾನು ಆಡಿರಬಹುದಾದ ಕಟುವಾದ ಮಾತುಗಳಿಗೆ, ಆಯಾ ವಿಮರ್ಶಕರ ಮುಂದಿನ ಪ್ರಯತ್ನಗಳು ಇನ್ನಷ್ಟು ಫಲಪ್ರದವಾಗಲೆಂಬ ನನ್ನ ಪ್ರಾಮಾಣಿಕ ವಾದ ಆಸಕ್ತಿ ಮಾತ್ರ ಕಾರಣ. 1983ರಲ್ಲಿ ಪ್ರಕಟವಾಗಿ, ಇಲ್ಲಿ ವಿಮರ್ಶಿತವಾಗದಿರುವ ಕೃತಿಗಳ ಲೇಖಕರು ನಮ್ಮನ್ನು ಕ್ಷಮಿಸಬೇಕು. ಕೃತಿಗಳ ಅನುಪಲಬ್ಧತೆ ಮತ್ತು ಅವುಗಳ ಅಸ್ತಿತ್ವವೇ ನಮಗೆ ತಿಳಿಯದಿರುವುದು ಈ ಲೋಪಕ್ಕೆ ಕಾರಣ.

ದುರ್ಗಸಿಂಹ : ರಾಮೇಗೌಡ

ಪ್ರಪಂಚದ ಹಲವು ನಾಗರಿಕತೆಗಳಲ್ಲಿ, ಹಲವು ರೂಪಗಳಲ್ಲಿ ಕಾಣಿಸಿಕೊಂಡಿರುವ, 'ಪಂಚತಂತ್ರ'ದ ಅನುಪಲಬ್ಧ ಆವೃತ್ತಿಯಾದ ವಸುಭಾಗಭಟ್ಟನ ಕೃತಿಯನ್ನು ಆಧಾರವಾಗಿಟ್ಟುಕೊಂಡು ರಚಿತವಾಗಿರುವ ದುರ್ಗಸಿಂಹನ ಪಂಚತಂತ್ರವನ್ನು ಪರಿಚಯ ಮಾಡಿಕೊಡುವುದು ಈ ಕಿರು ಪುಸ್ತಕದ ಉದ್ದೇಶ. ಈ ಕೆಲಸವನ್ನು ಕೃತಿಪರಿಚಯದ ಸಾಂಪ್ರದಾಯಿಕ ಚೌಕಟ್ಟಿನಲ್ಲಿ ಸರಳವಾಗಿ ನಿರ್ವಹಿಸಲಾಗಿದೆ. ಕವಿಯ ದೇಶ ಕಾಲ ವಿಚಾರಗಳ ಚರ್ಚೆಗೆ ಮೀಸಲಾಗಿರುವ ಭಾಗವು ಸಾಮಾನ್ಯ ಓದುಗರ ದೃಷ್ಟಿಯಿಂದ ಸ್ವಲ್ಪ ಭಾರವಾಯಿತೇನೋ. ನಂತರದ ಭಾಗವು ಪಂಚ

ತಂತ್ರದ ಐದೂ ಕಥೆಗಳನ್ನು ಸಂಕ್ಷಿಪ್ತವಾಗಿ ನಿರೂಪಿಸುತ್ತದೆ. ಉಪಕಥೆಗಳು ಎಂಬ ನಾಲ್ಕನೆಯ ಅಧ್ಯಾಯವು ಮೌಲಿಕವಾಗಿದೆ. ಅಲ್ಲಿ ಮಾರ್ಗಕೃತಿಯಾದ ಪಂಚ ತಂತ್ರಕ್ಕೆ ಇರಬಹುದಾದ ಜಾನಪದ ಪ್ರೇರಣೆಗಳನ್ನು ಹುಡುಕುವ ಪ್ರಯತ್ನವಿದೆ. ಜಾನಪದದಿಂದ ಮಾರ್ಗಕ್ಕೆ ಆಗಬಹುದಾದ ಪರಿವರ್ತನೆಯ ಸ್ವರೂಪವನ್ನು ಇನ್ನಷ್ಟು ವಿವರವಾಗಿ ಚರ್ಚಿಸುವ ಅಗತ್ಯವಿದೆ. ಪ್ರಾಣಿಕಥೆಗಳೂ, ನೀತಿಕಥೆಗಳೂ ಆದ ಉಪಕಥೆಗಳು ರಾಜಕಾರಣ ತಂತ್ರದ ಒಳನೋಟಗಳನ್ನು ಕಲಿಸಲು ಸಹಾಯಕ ವಾಗುವ ಬಗೆಯನ್ನು ಅಲ್ಲಲ್ಲಿ ಚರ್ಚಿಸಲಾಗಿದೆ. ಮುಂದಿನ ಅಧ್ಯಾಯವು ಪಂಚ ತಂತ್ರದ ನೈತಿಕ, ಸಾಮಾಜಿಕ, ಸಮಕಾಲೀನ ಮತ್ತು ಧಾರ್ಮಿಕ ಆಯಾಮಗಳನ್ನು ಹುಡುಕುವ ಪ್ರಯತ್ನ ಮಾಡುತ್ತದೆ. ಕೊನೆಗೆ ಕಾವ್ಯದ ರೂಪ, ಛಂದಸ್ಸು ಮತ್ತು ಭಾಷೆಗಳ ಬಗೆಗೆ ಕೆಲವು ಸೂತ್ರರೂಪದ ಮಾತುಗಳನ್ನು ಹೇಳುವ ಈ ಕೃತಿಯು, ದುರ್ಗಸಿಂಹನ ವಿಶಿಷ್ಟತೆಯನ್ನು ತಿಳಿಸುವ ಪ್ರಯತ್ನದೊಂದಿಗೆ ಮುಕ್ತಾಯವಾಗು ತ್ತದೆ. ಇಂತಹ ಸಮೀಕ್ಷೆಯು ಎಷ್ಟು ಸಮಗ್ರವಾಗಿ ಇರಬಹುದೋ ಅಷ್ಟು ಸಮಗ್ರವಾಗಿ ಕೃತಿಯನ್ನು ರಚಿಸಿರುವ ಲೇಖಕರು ಅಭಿನಂದನೀಯರು.

ಬಂಧುವರ್ಮ : ಬಿ. ಎಸ್. ಸಣ್ಣಯ್ಯ

ಸಾಹಿತ್ಯಕವಾಗಿ ಆಸಕ್ತಿಯನ್ನು ಹುಟ್ಟಿಸಲಾಗದ ಕವಿಗಳ ಬಗ್ಗೆ, ಕುತೂಹಲ ಕೆರಳುವಂತೆ ಬರೆಯುವುದು ಬಹಳ ಕಷ್ಟವಾದ ಕೆಲಸ. ಬಂಧುವರ್ಮನಂತಹ ಕವಿಯು ಜೈನಧಾರ್ಮಿಕಸಾಹಿತ್ಯದ ಅಧ್ಯಯನದಲ್ಲಿ ಆಸಕ್ತರಾದ ಕೆಲವರಿಗೆ ಮುಖ್ಯವಾಗಬಹುದೇ ಹೊರತು, ಇಪ್ಪತ್ತನೆಯ ಶತಮಾನದ ಸಾಮಾನ್ಯ ವಿದ್ಯಾವಂತರಿಗಲ್ಲ. ಸ್ನಾತಕೋತ್ತರ ಪದವಿ ಪಡೆದು, ಕನ್ನಡ ಅಧ್ಯಾಪಕರಾಗಿರು ವವರಲ್ಲಿಯೂ ನೂರಕ್ಕೆ ತೊಂಬತ್ತು ಜನ ಬಂಧುವರ್ಮನ ಕೃತಿಗಳನ್ನು ಓದಿರುವು ದಿಲ್ಲ. ವಸ್ತುಸ್ಥಿತಿ ಹೀಗಿರುವಾಗ ಬಂಧುವರ್ಮ, ಕುಮಾರ ವಾಲ್ಮೀಕಿ, ದುರ್ಗಸಿಂಹ ಮುಂತಾದವರ ಬಗ್ಗೆ ಪ್ರಚಾರೋಪನ್ಯಾಸಗಳನ್ನು ನಡೆಸುವುದರ ಔಚಿತ್ಯವೇ ಪ್ರಶ್ನಾರ್ಹವಾಗುತ್ತದೆ. ಹಾಗೆ ನೋಡಿದರೆ, ಬೇಂದ್ರೆ, ಕುವೆಂಪು, ಕಾರಂತ ಮುಂತಾದವರ ಬಗ್ಗೆ ಇಂತಹ ಉಪನ್ಯಾಸಗಳು ನಡೆದರೆ ಸಾಮಾನ್ಯರಿಗೂ ಆಕರ್ಷಕ ವಾಗುವ ಸಂಭವವಿದೆ. ಇಲ್ಲವಾದರೆ ಇಂತಹ ಪ್ರಯತ್ನಗಳು ಕೇವಲ ಬೌದ್ಧಿಕ ಕಸರತ್ತುಗಳಾಗಿಬಿಡುತ್ತವೆ.

ಏನೇ ಆಗಲಿ, ಹನ್ನೆರಡನೆಯ ಶತಮಾನದಷ್ಟು ಹಿಂದೆ ಇದ್ದ, ಜೈನಧರ್ಮಕ್ಕೆ, ವೈಶ್ಯವೃತ್ತಿಗೆ ಸೇರಿದ ಬಂಧುವರ್ಮನು ತನ್ನ ಕಾಲದ ಪ್ರಕ್ಷುಬ್ಧ, ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ಪರಿಸರವನ್ನು ಪ್ರತಿಫಲಿಸುವ ಗೋಜಿಗೆ ಹೋಗದೆ, ನೀತಿ ಬೋಧಕ ಕೃತಿಗಳ ರಚನೆಯಲ್ಲಿಯೇ ತೃಪ್ತನಾಗಿದ್ದುದು, ಅವನ ಪ್ರತಿಭೆಯ ಪರಿಮಿತಿ ಯನ್ನೇ ಸೂಚಿಸುತ್ತದೆ. ಹರಿವಂಶಾಭ್ಯುದಯ, ಜೀವಸಂಬೋಧನಂ ಮತ್ತು

ಸತಿಧರ್ಮಸಾರವೆಂಬ ಮೂರು ಕೃತಿಗಳೂ ಸಿದ್ಧ ಮೌಲ್ಯಗಳ, ಆಚಾರ-ವಿಚಾರಗಳ ಪ್ರತಿಪಾದನೆಮಾಡುತ್ತಾ, ಸಾಂಪ್ರದಾಯಿಕ ರಚನಾವಿಧಾನಗಳ ಗಾಡಿಜಾಡನ್ನು ಬಿಡದೆ ನಡೆಯುತ್ತವೆ. ಇವುಗಳ ಪರಿಚಯ ಕೂಡಾ ಪ್ರಶಂಸೆಯ ನೆಲೆಯಿಂದಲೇ ಹೊರಟಾಗ, ವಿಮರ್ಶಾದೃಷ್ಟಿಯು ಮೊದಲ ಬಲಿಯಾಗುತ್ತದೆ. ಉದಾಹರಣೆಗೆ 1331 ರಲ್ಲಿದ್ದ ನಾಗರಾಜನು,

"ಕವಿಗಳೊಳ್ ಬಂಧುವರ್ಮಂ
ಕವಿಯಂವರ್ಗಳ ಮುಂದೆ ಕವಿಗಳೆಂಬವರೆಲ್ಲಂ
ಛವಿಗೆಟ್ಟಿರ್ಪರ್ ತೊಳಗುವ
ರವಿಯಂ ಬಳಸಿರ್ಪ ಬಹಳ ಭಗಣಂಗಳವೋಲ್"

ಎಂದು ಬಂಧುವರ್ಮನನ್ನು ಹೊಗಳಿರುವನಂತೆ. ಇದರ ಬಗ್ಗೆ ಲೇಖಕರು, "ಬಂಧುವರ್ಮನ ಕೃತಿಗಳನ್ನು ಓದಿದ ಯಾರಿಗಾದರೂ ಈ ಮಾತು ಸರಿಯೆಂದು ತೋರುತ್ತದೆ". ಹಾಗಾದರೆ ಇವರ ದೃಷ್ಟಿಯಲ್ಲಿ ಪಂಪ, ರನ್ನ, ಅಲ್ಲಮರ ಸ್ಥಾನವೇನು? ತಾನು ಬರೆಯುತ್ತಿರುವ ವಿಷಯದಲ್ಲಿಯೇ ಲೀನವಾಗಿ ಒಟ್ಟು perspective ಅನ್ನು ಕಳೆದುಕೊಂಡಾಗ, ಇಂತಹ ತಮಾಷೆಯ ಬರವಣಿಗೆ ಹುಟ್ಟುತ್ತದೆ. ಯಥಾಪ್ರಕಾರ ಬಂಧುವರ್ಮನ ಭಾಷೆ, ವರ್ಣನೆಗಳು, ಶೈಲಿ, ಪಾತ್ರಚಿತ್ರಣ, ಸಾಮಾಜಿಕ ದರ್ಶನ ಮುಂತಾದವುಗಳ ಸಂಕ್ಷಿಪ್ತ ಸಮೀಕ್ಷೆಯನ್ನು ನಡೆಸುವ ಈ ಕೃತಿಯ ಒಂದೇ ಒಂದು ಉತ್ತಮ ಅಂಶವೆಂದರೆ, ಬಂಧುವರ್ಮನ ಕೃತಿಗಳಲ್ಲಿರುವ ಸಮಕಾಲೀನ ಜೀವನದ ಕೆಲವು ವಿವರಗಳನ್ನು ಹುಡುಕಿ ತೆಗೆಯುವ ಪ್ರಯತ್ನ.

ಪಾಲ್ಕುರಿಕೆ ಸೋಮನಾಥ : ಆರ್‌ವಿಯೆಸ್ ಸುಂದರಂ

ಮೈಸೂರು ವಿಶ್ವವಿದ್ಯಾಲಯದ ಈ ಕಿರು ಪ್ರಕಟಣೆಯು ತೆಲುಗು ಕವಿಯೊಬ್ಬನನ್ನು ಕನ್ನಡಿಗರಿಗೆ ಪರಿಚಯ ಮಾಡಿಕೊಡುವ ಪ್ರಯತ್ನ. ತನ್ನ ನೆರೆ ರಾಜ್ಯದ ಹಿರಿಯ ಸಂತನೊಬ್ಬನನ್ನು ತನ್ನ ಭಾಷಾಬಂಧುಗಳಿಗೆ ಪರಿಚಯ ಮಾಡಿಕೊಡುವಂತಿರುವ, ತೆಲುಗು ಬಸವಪುರಾಣವನ್ನು ಬರೆದ ಪಾಲ್ಕುರಿಕೆ ಸೋಮನಾಥನ ಬದುಕು ಮತ್ತು ಬರೆಹಗಳು ಈ ಕೃತಿಯ ವಸ್ತು.

ಕವಿಯ ಕಾಲ, ದೇಶ, ಕೃತಿಗಳು ಮುಂತಾದ ಸಂಗತಿಗಳನ್ನು ಕುರಿತಾದ ಯಾಂತ್ರಿಕ ವಿವರಗಳ ನಂತರ ಕವಿಯ ಜೀವನವನ್ನು ಸಮೀಕ್ಷಿಸಲಾಗಿದೆ. ವೀರಶೈವ ದೀಕ್ಷೆಯನ್ನು ಪಡೆದು, ಜಂಗಮನಾಗಿ, ಆ ಧರ್ಮದ ಹಿರಿಮೆ ಹಾಗೂ ಹಿರಿಯರನ್ನು ಕುರಿತು ಬರೆದ ಈ ಕವಿಯು ತನ್ನ ಸಮಕಾಲೀನರಾದ ಅನ್ಯಧರ್ಮೀಯರಿಂದ ಅನುಭವಿಸಬೇಕಾದ ಯಾತನೆಯ ಸ್ವರೂಪವು ಸ್ಪಷ್ಟವಾಗಿಯೇ ಮೂಡಿಬಂದಿದೆ.

ಸೋಮನಾಥನು ಬರೆದಿರುವ ಬಸವ ಪುರಾಣ, ಪಂಡಿತಾರಾಧ್ಯ ಚರಿತ್ರೆ, ಅನುಭವ ಸಾರವು, ಚತುರ್ವೇದ ಸಾರವು, ಬಸವೋದಾಹರಣವು ಮುಂತಾದ ತೆಲುಗು ಕೃತಿಗಳ ಹಾಗೂ ಗಣ ಸಹಸ್ರನಾಮ, ಬಸವರಗಳೆ ಮುಂತಾದ ಕನ್ನಡ ಕೃತಿಗಳ ಪ್ರಶಂಸಾತ್ಮಕವಾದ ಪರಿಚಯವು ನಂತರ ಬರುತ್ತದೆ. ಎರಡೂ ಭಾಷೆಗಳಿಂದ ಅನೇಕ ನಿದರ್ಶನಗಳನ್ನು ಕೊಡಲಾಗಿದೆ.

ತೆಲುಗು ಭಾಷೆಯನ್ನು ಸಂಸ್ಕೃತಭೂಯಿಷ್ಠವಾದ ಛಂದೋರಚನೆಗಳಿಂದ ಜಾನಪದ ರೂಪಗಳ ಕಡೆಗೆ ನಡೆಸಿದ್ದು ಸೋಮನಾಥನ ಸಾಧನೆಯೆಂದು ಹೇಳಲಾಗಿದೆ. ಆದರೆ ಇಲ್ಲಿ ದೊರೆಯುವ ಕಾವ್ಯಭಾಗಗಳ ಆಧಾರದಿಂದ ಹೇಳುವುದಾದರೆ ಸೋಮನಾಥನು ಮಹಾಕವಿ ಎಂಬ ಭಾವನೆಯು ಖಂಡಿತವಾಗಿಯೂ ಮೂಡುವುದಿಲ್ಲ. ಮಹಾಪುರುಷನೊಬ್ಬನ ಬದುಕನ್ನು ಪುರಾಣದ ನೆಲೆಗೆ ಏರಿಸುವುದರಿಂದ ಆ ಕೃತಿಯು ಐತಿಹಾಸಿಕತೆಗೆ ಭಂಗ ತಂದುದು ಅಂತಹ ಮೆಚ್ಚಬಹುದಾದ ಸಾಧನೆಯೆಂದೇನೂ ತೋರುವುದಿಲ್ಲ. ಜೀವನ ಚರಿತ್ರಕಾರರು ಅತಿ ಗೌರವದ ಧೋರಣೆಯ ಬದಲು, ಕೊಂಚ ವಿಮರ್ಶಾತ್ಮಕವಾಗದಿದ್ದರೆ ಇಂತಹ ಪ್ರಯತ್ನಗಳು ವಾಸ್ತವಕ್ಕೆ ಅನ್ಯಾಯ ಮಾಡುತ್ತವೆಂದೇ ಹೇಳಬೇಕು.

ಕನ್ನಡ ಸಾಹಿತ್ಯದ ಭಾಗವತ ಕವಿಗಳು : ಎ. ಎಸ್. ವೇಣುಗೋಪಾಲರಾವ್

ಸಾಹಿತ್ಯಕೃತಿಗಳ ಅನನ್ಯತೆಯನ್ನು ಗಮನಕ್ಕೆ ತಂದುಕೊಳ್ಳದೆ, ಅವುಗಳನ್ನು ಕುರಿತು ಮಾಡುವ ಚರ್ಚೆಯು, 'ಸಾಹಿತ್ಯ' ವಿಮರ್ಶೆಯ ಅಸಲು ಕಸುಬಿಗೆ ಬಾಹಿರವಾದರೂ ಕೂಡ, ಅಂತಹ ಚರ್ಚೆಯ ಔಚಿತ್ಯವನ್ನೇ ಪ್ರಶ್ನಿಸುವುದು ಕಷ್ಟ. ಏಕೆಂದರೆ ಅಂತಹ ಚರ್ಚೆಯು ಸಾಹಿತ್ಯೇತರ ಪ್ರಯೋಜನಗಳನ್ನು ಹೊಂದಿರಬಹುದು. ಭಾಗವತ ಧರ್ಮವನ್ನು ಹಿಂದೂ ಧರ್ಮದ ಒಂದು ತಾತ್ವಿಕ ಕವಲಾಗಿ ಗುರುತಿಸುವ ಪ್ರಸ್ತುತ ಕೃತಿಯು "ಭಕ್ತಕವಿಗಳೂ, ವೈಷ್ಣವ ಭಕ್ತಿಪಂಥವನ್ನು ಮನಸಾ ಸ್ವೀಕರಿಸಿದವರೂ''ಆದ ಕನ್ನಡ ಭಾಗವತ ಕವಿಗಳ ಸಾಧನ ಮತ್ತು ವಿಶಿಷ್ಟತೆಗಳನ್ನು ಪರಿಚಯ ಮಾಡಿಕೊಡ ಹೊರಡುತ್ತದೆ. ರುದ್ರಭಟ್ಟ, ನೇಮಿಚಂದ್ರ, ಕುಮಾರ ವ್ಯಾಸ, ಲಕ್ಷ್ಮೀಶ ಮತ್ತು ಪು.ತಿ.ನ. ಅವರಿಗೆ ತನ್ನನ್ನು ಸೀಮಿತಗೊಳಿಸಿಕೊಳ್ಳುವ ಈ ಕೃತಿಯು, ವಿಷ್ಣು ಭಕ್ತಿಯ ಮಾನದಂಡವನ್ನು ಆರಿಸಿಕೊಳ್ಳುವುದರಿಂದ ಸಮಗ್ರ ಭಕ್ತಿ ಸಾಹಿತ್ಯದ ಅಧ್ಯಯನ ಮಾಡುವ ಅವಕಾಶವನ್ನು ಕಳೆದುಕೊಂಡಿದೆ. ಅಧ್ಯಯನಕ್ಕೆ ತೆಗೆದುಕೊಂಡ ಕವಿಗಳ ವ್ಯಕ್ತಿತ್ವ ಮತ್ತು ಧೋರಣೆಗಳ ಹಿನ್ನೆಲೆಯಲ್ಲಿ ಅವರ ಕೃತಿಗಳ ಭಕ್ತಿಪರ ಭಾಗಗಳ ಸ್ಥೂಲ ವಿವರಣೆಯಿದೆ. ಹರಿ-ಹರ ಅಭೇಧ, ಜೀವನ ಪ್ರೇಮ ಮತ್ತು ಸರ್ವಸಮರ್ಪಣ ಭಾವಗಳನ್ನು ಭಾಗವತ ಸಾಹಿತ್ಯದ ಪ್ರಧಾನ ನೆಲೆಗಳೆಂದು ಗುರುತಿಸಲಾಗಿದೆ. ಇಲ್ಲಿ ಕಂಡುಬರುವ ವಿಮರ್ಶಕನ

ಧೋರಣೆಯೂ ಮುಖ್ಯವಾಗಿ ಭಾವುಕನಾದ Moralist ನದು. ತಾನು ಮೆಚ್ಚಿ ಕೊಂಡ ಜೀವನ ವಿಧಾನದ ಮಾದರಿಗಳನ್ನು ಸಾಹಿತ್ಯಕೃತಿಗಳಲ್ಲಿ ಕಂಡಾಗ ಪುಲಕಿತ ವಾಗುವ ಈ ಮನೋಧರ್ಮವು ಸಾಹಿತ್ಯದಿಂದ ಭಾವಮಯವಾದ ನೀತಿಪಾಠಗಳನ್ನು ನಿರೀಕ್ಷಿಸುತ್ತದೆ ಮತ್ತು ಪಡೆಯುತ್ತದೆ. ಲೇಖಕರ ಆತ್ಮೀಯವಾದ ನಿರೂಪಣಾ ಧಾಟಿಯೂ ಕೃತಿಯ ಓದನ್ನು ಸಹನೀಯ ಹಾಗೂ ಸಂತೋಷಕರವಾಗಿ ಮಾಡುತ್ತದೆ.

ಕುಮಾರ ವಾಲ್ಮೀಕಿ : ಹೊಸಬೆಟ್ಟು ಸೀತಾರಾಮ ಆಚಾರ್ಯ

ಅಷ್ಟೇನೂ ಜನಪ್ರಿಯನಲ್ಲದ, ಅನುಕರಣಶೀಲ ಕವಿಯೊಬ್ಬನ ಬದುಕು–ಬರೆಹಗಳನ್ನು ವಿಮರ್ಶಾತ್ಮಕವಾಗಿ ಪರಿಚಯ ಮಾಡಿಕೊಡುವ ಈ ಕೃತಿಯು, ಸಾಂದರ್ಭಿಕ ಆಧಾರಗ್ರಂಥವಾಗಿ ಮಾತ್ರ ಉಪಯುಕ್ತವಾಗಬಲ್ಲುದು. ಕುಮಾರ ವಾಲ್ಮೀಕಿಯಂತಹ ಕವಿಗಳು ಇಂದು ಕೇವಲ ಅಕಡೆಮಿಕ್ ಆಸಕ್ತಿಯನ್ನೂ ಕೆರಳಿಸ ಲಾರದವರಾಗಿದ್ದಾರೆ. ವಾಲ್ಮೀಕಿರಾಮಾಯಣದಂತಹ ಮಹಾಕೃತಿಗಳು ಬೇರೆ ಬೇರೆ ದೇಶ, ಕಾಲ, ಸನ್ನಿವೇಶಗಳಲ್ಲಿ ಪ್ರತಿಫಲನ ಹೊಂದಿರುವ ಬಗೆಯನ್ನು ತಿಳಿಯಲು ತೊರವೆ ರಾಮಾಯಣದಂತಹ ಕೃತಿಗಳು ನೆರವಾಗುತ್ತವೆ. ವಿಭಿನ್ನ ರಾಮಾಯಣ ಸಂಪ್ರದಾಯಗಳಿಂದ ನಸು ಪ್ರಭಾವಿತವಾದ ವಿವರಗಳು, ಸ್ವಕಲ್ಪಿತವಾದ ಸನ್ನಿವೇಶ ಗಳು ಮತ್ತು ಸ್ವೀಕೃತ ಕಥೆಯ ಹಂದರದಮೇಲೆ ಕಲ್ಪನೆಯ ಬಳ್ಳಿಯನ್ನು ಹಬ್ಬಿಸ ಬಲ್ಲಂತಹ ಪ್ರತಿಭೆಗಳನ್ನು ಪ್ರಸ್ತುತ ಪುಸ್ತಕವು ಗುರುತಿಸಿದೆ. ಕವಿಯನ್ನು ಕುರಿತ ಮಾಹಿತಿಗಳು, ಕಥೆಯ ಸಂಕ್ಷಿಪ್ತ ನಿರೂಪಣೆ, ಪಾತ್ರವಿವೇಚನೆ, ಶೈಲಿ, ಭಾಷೆ, ನವರಸಗಳು ಮುಂತಾಗಿ ಸ್ವೀಕೃತ ವಿಮರ್ಶಾವಿಧಾನದ ಚೌಕಟ್ಟಿನಿಂದ ಆಚೆ ಈಚೆ ಹೋಗದ ಇಂತಹ ಬರವಣಿಗೆಯು ಎಷ್ಟು ಸರಳವೋ ಅಷ್ಟೇ ಸುಲಭ,ಆದ್ದರಿಂದಲೇ ಅಮುಖ್ಯ. ಪ್ರಚಾರ ಪುಸ್ತಕ ಮಾಲೆಯೊಳಗೆ ಇವುಗಳ ಪ್ರಯೋಜನ ಸಾಕಷ್ಟು ಇರಬಹುದು. ಅದರಾಚೆಗೆ ಇವು ಅನುಪಯುಕ್ತ. ಈ ಸೀಮಿತಗಳನ್ನು ಒಪ್ಪಿ ಕೊಂಡಾಗ ಲೇಖಕರ ಶೈಲಿಯ ಸ್ಪಷ್ಟತೆ ಮತ್ತು ಸರಳತೆಗಳು ಸಮಾಧಾನ ಕೊಡುತ್ತವೆ. ಅವರು ಕುಮಾರವಾಲ್ಮೀಕಿಯ ಮೇಲೆಯೇ ಸಂಶೋಧನೆ ಮಾಡಿ ಡಾಕ್ಟರೇಟ್ ಪದವಿಯನ್ನು ಪಡೆದಿರುವರೆನ್ನುವುದು ವಿಶೇಷ ಮಾಹಿತಿ.

ಶ್ರೀ ರಾಮಾಯಣ ದರ್ಶನಂ : ಸಿ. ಪಿ. ಕೃಷ್ಣಕುಮಾರ್

ಮೈಸೂರು ವಿಶ್ವವಿದ್ಯಾಲಯದ ಪ್ರಚಾರೋಪನ್ಯಾಸಗಳ ಸೀಮಿತ ವ್ಯಾಪ್ತಿ ಯಲ್ಲಿ, ಕನ್ನಡದ ಬಹುಮುಖ್ಯ ಕೃತಿಯೊಂದರ ಪರಿಚಯ ಮತ್ತು ವಿಮರ್ಶೆಗಳನ್ನು ಮಾಡಿಕೊಡಹೊರಡುವ ಈ ಕಿರುಪುಸ್ತಕವು ತನ್ನ ಮೊದಲ ಉದ್ದೇಶದಲ್ಲಿ ಯಶಸ್ವಿ ಯಾಗಿದೆ. ಆದರೆ ಶ್ರೀ ರಾಮಾಯಣ ದರ್ಶನಂ ಕಾವ್ಯವನ್ನು ಕುರಿತಂತೆ ಇದುವರೆಗೆ ಬಂದಿರುವ ವಿಮರ್ಶೆಗಳ ಹಿನ್ನೆಲೆಯಲ್ಲಿ ಇಡೀ ಕಾವ್ಯವನ್ನು ಪುನರವಲೋಕನ ಮಾಡುವ ಕಾರ್ಯವು ಇಲ್ಲಿ ನಡೆದಿಲ್ಲ. ಪ್ರಾಯಶಃ ಅದು ಸಾಧ್ಯವೂ ಇರಲಿಲ್ಲ

ವೇನೋ. ಮೂಲಕೃತಿಯ ಬಗ್ಗೆ ಬಂದಿರುವ ಪ್ರಶಂಸಾತ್ಮಕ ಬರೆಹಗಳ ಸಮುದಾಯಕ್ಕೆ ಇನ್ನೊಂದು ಸೇರ್ಪಡೆಯಾಗಿ ಈ ಕೃತಿಯು ಬಂದಿದೆಯೆಂದು ಹೇಳಿದರೆ, ಅದು 'ಶ್ರೀರಾಮಾಯಣ ದರ್ಶನಂ'ನ ಪ್ರಶಂಸಾರ್ಹತೆಯನ್ನಾಗಲೀ, ಈ ಪುಸ್ತಿಕೆಯ ಪ್ರಸ್ತುತತೆಯನ್ನಾಗಲೀ ಪ್ರಶ್ನಿಸಿದಂತೆ ಆಗುವುದಿಲ್ಲ.

ಪುಸ್ತಕದ ಮೊದಲಭಾಗದಲ್ಲಿ ಮಹಾಕಾವ್ಯದ ಕೆಲವು ವಿಶಿಷ್ಟತೆಗಳನ್ನು ಪರಿಚಯಮಾಡಿಕೊಡುವ ಸಿ.ಪಿ.ಕೆ. ಯವರು ಎರಡನೆಯ ಭಾಗದಲ್ಲಿ ಮಂಥರೆ ಮತ್ತು ರಾವಣರ ಪಾತ್ರಗಳನ್ನು ಸಾಕಷ್ಟು ದೀರ್ಘವಾಗಿ. ರಾಮ, ಸೀತೆ ಮತ್ತು ಇತರ ಕೆಲವು ಪಾತ್ರಗಳನ್ನು ಸಂಕ್ಷಿಪ್ತವಾಗಿ ಪರಿಚಯ ಮಾಡಿಕೊಡುತ್ತಾರೆ. ಕೊನೆಯ ಭಾಗವು ವರ್ಣನೆಗಳು, ರಸಪ್ರತಿಪಾದನೆ, ನಾಟಕೀಯತೆ, ಪ್ರತಿಮಾದೃಷ್ಟಿ, ಶೈಲಿ ಮತ್ತು ಛಂದಸ್ಸುಗಳಿಗೆ ಸಂಬಂಧಿಸಿದ ಹಾಗೆ ಕೆಲವು ಸೂತ್ರರೂಪದ ಮಾತುಗಳನ್ನು ಹೇಳುತ್ತದೆ.

ಸರ್ವೋದಯ, ಸಮನ್ವಯ ಮತ್ತು ಪೂರ್ಣದೃಷ್ಟಿಗಳು ಕಾವ್ಯದ ಮೂರು ಕಣ್ಣುಗಳೆಂದು ಹೇಳುವ ಲೇಖಕರು ಆ ಮಾತನ್ನು ಇನ್ನಷ್ಟು ವಿವರಿಸಬಹುದಿತ್ತು. ವಿಧಿನಿಯತಿಗೆ ಸಂಬಂಧಿಸಿದಂತಹ ಕುವೆಂಪುರವರ ಅಭಿಪ್ರಾಯಗಳನ್ನು ಅವರ ಪ್ರಗತಿಪರ ವೈಚಾರಿಕ ಧೋರಣೆಗಳೊಂದಿಗೆ ಸಂಯೋಜಿಸಿದಾಗ ಮೂಡಿಬರುವ ಸಮಗ್ರಚಿತ್ರದ ಪರಿಶೀಲನೆ ಅಗತ್ಯವಾಗುತ್ತದೆ. ರಾವಣಪಾತ್ರದ ವಿಕಸನಶೀಲತೆಯನ್ನು ಕುರಿತು ಹೇಳಿರುವ ಮಾತುಗಳು ಮನನೀಯವಾದರೂ, ದುಷ್ಟ ಪಾತ್ರಗಳ ಉದಾತ್ತೀಕರಣ ಪರಂಪರೆಯೇ ಇರುವ ಕನ್ನಡ ಕಾವ್ಯದ ಹಿನ್ನೆಲೆಯಲ್ಲಿ ಅದನ್ನು ಪರಿಶೀಲಿಸಬಹುದಿತ್ತು. ಇಂತಹ ಸಂಕೀರ್ಣ ಪಾತ್ರಗಳು ತಮ್ಮ ಪ್ರಾತಿನಿಧಿಕತೆಯನ್ನು ಕಳೆದುಕೊಳ್ಳುವುದರಿಂದ ಮಹಾಕಾವ್ಯದ ಒಂದು ಆಯಾಮವು ಬದಲಾಗುವುದೇನೋ ?

ಲೇಖಕರಿಗೆ ಕವಿ ಮತ್ತು ಕಾವ್ಯದ ಬಗ್ಗೆ ಇರುವ ಅಪಾರವಾದ ಗೌರವವು ಕಾವ್ಯದ ಸಹೃದಯ ವಿಮರ್ಶೆಗೆ ದಾರಿಮಾಡಿಕೊಟ್ಟಿದೆ. ಬರವಣಿಗೆಯು ಖಚಿತವೂ ಸರಳವೂ ಆಗಿದೆ.

ಉಪಮಾ ಸರಸ್ಸು : ವಿ. ಕೃಷ್ಣಶೆಟ್ಟಿ

ಹತ್ತು ಹಲವು ವಿಮರ್ಶಕರ ಹಿನ್ನುಡಿ ಮುನ್ನುಡಿಗಳ ವಜ್ರಕವಚವನ್ನು ಧರಿಸಿಕೊಂಡು ಹುಟ್ಟಿರುವ ಈ ಗ್ರಂಥವು ಆ ಹಿರಿಯರ ಸ್ನೇಹಪರತೆಗೆ ಸಾಕ್ಷಿಯಾಗಿದೆಯೇ ಹೊರತು ವಿಮರ್ಶಕನ ಪ್ರಜ್ಞೆಗಂತೂ ಖಂಡಿತ ಅಲ್ಲ. ಕುವೆಂಪುರವರ ಶ್ರೀರಾಮಾಯಣ ದರ್ಶನಂ ಮಹಾಕಾವ್ಯವು ವಿಮರ್ಶಕರಿಗೊಂದು ಸೂಜಿಗಲ್ಲು. ಹಲವು ಹಿನ್ನೆಲೆಗಳನ್ನು ಹೊಂದಿರುವ, ಸಾಹಿತ್ಯ ವಿಮರ್ಶೆಯ ಪರಿಕರ ಮತ್ತು ಪರಿಭಾಷೆಗಳ ಪರಿಚಯವಿಲ್ಲದ 'ಕಾವ್ಯಾರಾಧಕ'ರು ಆ ಕಾವ್ಯವನ್ನು ಕುರಿತ ಗ್ರಂಥ

ಗಳನ್ನು ರಚಿಸಿದ್ದಾರೆ. ಪ್ರಸ್ತುತ ಕೃತಿಯೂ ಈ ನಿಯಮಕ್ಕೆ ಅಪವಾದವಲ್ಲ. ಒಂದು ಮಹಾ ಕಾವ್ಯದ ಸಮಸ್ತ ಉಪಮೆಗಳ ಪರಿಚಯ ಮತ್ತು ವಿಶ್ಲೇಷಣೆಯನ್ನು ಮಾಡುವ ಉದ್ದೇಶದಿಂದ ಹೊರಡುವ ಈ ಕೃತಿಯು ಉಪಮಾಲಂಕಾರವನ್ನು ಕುರಿತ ತಾತ್ವಿಕ ಚರ್ಚೆಗಾಗಲೀ, ಅಲಂಕಾರ ಮತ್ತು ಕಾವ್ಯ ಶರೀರದ ನಡುವೆ ಇರಬೇಕಾದ ಸಂಬಂಧದ ಸ್ವರೂಪ ನಿರ್ಣಯಕ್ಕಾಗಲೀ ಯಾವುದೇ ಮಹತ್ವವನ್ನು ಕೊಡುವುದಿಲ್ಲ. ಹಲವು ಬಾರಿ ಕಾವ್ಯವನ್ನು ಓದಿ, ಅದರಲ್ಲಿರುವ ಉಪಮೆಗಳನ್ನು ಗುಡ್ಡೆಹಾಕಿ, ಆ ಮೇಲೆ ಅವುಗಳನ್ನು ಅಸಂಖ್ಯಾತ ವರ್ಗಗಳಾಗಿ ವಿಂಗಡಿಸಿ, ಆ ಮೇಲೆ ಕೆಲವು ಉಪಮೆಗಳ ಗದ್ಯಾನುವಾದ ಮಾಡುವ, ಹಲವು ಉಪಮೆಗಳ ಪಟ್ಟಿ ಮಾಡುವ ಈ ಪುಸ್ತಕವು ಮಹೋಪಮೆ ಮತ್ತು ಆಧ್ಯಾತ್ಮಿಕ ಉಪಮೆಗಳನ್ನು ಕೊಂಚ ವಿವರವಾಗಿ ಚರ್ಚಿಸುತ್ತದೆ. ಇಲ್ಲಿ ನಿಜವಾಗಿಯೂ ಮನರಂಜನೆ ಕೊಡುವ ಭಾಗಗಳೆಂದರೆ ಲೇಖಕರೇ ಸೃಷ್ಟಿಸಿರುವ ಕೆಲವು ಹೋಲಿಕೆಗಳು. ರಾಮಾಯಣ ದರ್ಶನಂನಲ್ಲಿ ಬರುವ ಮೂರು ನಗರೋಪಮೆಗಳು ಶ್ರೀವೈಷ್ಣವರ ಹಣೆಯ ಮೂರು ನಾಮಗಳಂತೆ ಇವೆಯಂತೆ! ಉಪಮಾಸರಸ್ಸಿನಲ್ಲಿ ನಗರೋಪಮೆಗಳು ಈಜುಕೊಳ ವಾದರೆ, ಔದ್ಯೋಗಿಕ ಉಪಮೆಗಳು ವಿವಿಧೋದ್ದೇಶ ಮಳಿಗೆಯಂತೆ! ರಾಮಾಯಣ ದರ್ಶನವು ಮಹಾನಗರವಾದರೆ ಅದರ ಮನಮೋಹಕ ಕಥೆಯು ವಾಣಿಜ್ಯ ಕೇಂದ್ರವಂತೆ. ಉಪಮಾಲಂಕಾರವನ್ನು ದೇವರೇ ಕಾಪಾಡಬೇಕು.

ಕನ್ನಡದಲ್ಲಿ ಕೈವಲ್ಯ ಸಾಹಿತ್ಯ : ಎಚ್. ತಿಪ್ಪೇರುದ್ರಸ್ವಾಮಿ

ಅನುಭಾವ ಸಾಹಿತ್ಯದ ಬಗ್ಗೆ ಕನ್ನಡದಲ್ಲಿ ನಡೆದಿರುವ ಅಧ್ಯಯನದ ಆಳ ಅಗಲಗಳು ಪರಿಮಿತವಾದವು. ಅನುಭಾವವೆಂಬ ಪರಿಕಲ್ಪನೆಯೇ ಅಮೂರ್ತ ವಾದುದರಿಂದ ಅದರ ಬಗೆಗಿನ ಚರ್ಚೆಯೂ ಕೂಡ ಅಮೂರ್ತವೂ ಅಸ್ಪಷ್ಟವೂ ಆಗುವುದು ಅನಿವಾರ್ಯವೇನೋ ಆದ್ದರಿಂದ ಈ ವಿಷಯದ ಬಗೆಗಿನ ಮಾತುಗಳು, ಇತ್ತ ಸಾಹಿತ್ಯಕ ವಿಮರ್ಶೆಯೂ ಆಗದೆ ಅತ್ತ ಆಧ್ಯಾತ್ಮಿಕ ಶೋಧನವೂ ಆಗದೆ, ವಿವರಣಾತ್ಮಕ ವ್ಯಾಖ್ಯಾನಗಳ ನೆಲೆಯಲ್ಲಿ ವಿರಮಿಸುತ್ತವೆ.

'ಕೈವಲ್ಯ ಸಾಹಿತ್ಯ' ಎಂಬ ಹೆಸರಿನ ವ್ಯಾಪ್ತಿಯಲ್ಲಿ, ತಿಪ್ಪೇರುದ್ರಸ್ವಾಮಿ ಯವರು ತಂದುಕೊಳ್ಳುವುದು ಕೆಳಗಿನ ಸಂಗತಿಗಳನ್ನು.

ಅ) ಶಿವ–ಜೀವರ ಅವಿನಾಸಂಬಂಧದಿಂದ ಮೂಡಿದ 'ಕೇವಲ' ಅನುಭವ ವನ್ನು ಕೈವಲ್ಯವೆಂದು ಕರೆಯುವುದು, ಶಿವಾನುಭವದ ವಲಯಕ್ಕೆ ಅದನ್ನು ಸೀಮಿತ ಗೊಳಿಸುತ್ತದೆ.

ಬ) (ಕೈವಲ್ಯ ಸಾಹಿತ್ಯವು) ಹಾಡಿನ ರೂಪದಲ್ಲಿ ಅಭಿವ್ಯಕ್ತಗೊಂಡ ಅನುಭವನ್ನು ಮಾತ್ರ ತನ್ನ ವಲಯದೊಳಗೆ ಸೇರಿಸಿಕೊಳ್ಳುತ್ತದೆ.

ಹೀಗೆ ವಿಷಯ ವ್ಯಾಪ್ತಿಯನ್ನು ಸೀಮಿತಗೊಳಿಸಿಕೊಂಡ ಮೇಲೆ, ದಾಸ ಸಾಹಿತ್ಯಕ್ಕೂ ಕೈವಲ್ಯ ಸಾಹಿತ್ಯಕ್ಕೂ ಇರುವ ವ್ಯತ್ಯಾಸಗಳನ್ನು ವಿಚಿತಪಡಿಸಲಾಗಿದೆ.

ಈ ಕೃತಿಯು ನಿಜಗುಣ ಶಿವಯೋಗಿಗಳ 'ಕೈವಲ್ಯ ಪದ್ಧತಿ', ಸರ್ಪಭೂಷಣ ಶಿವಯೋಗಿಗಳ 'ಕೈವಲ್ಯಕಲ್ಪವಲ್ಲರಿ' ಮತ್ತು ಬಾಲಲೀಲಾ ಮಹಾಂತ ಶಿವಯೋಗಿಗಳ 'ಕೈವಲ್ಯ ದರ್ಪಣ' ಎಂಬ ತತ್ತ್ವಪದಗಳ ಸಂಗ್ರಹವನ್ನು ತನ್ನ ಅಧ್ಯಯನದ ಮುಖ್ಯನೆಲೆಗಳಾಗಿ ಹೊಂದಿದೆ, ಇವುಗಳ ಜೊತೆಗೆ, ಬಸವಲಿಂಗ ಶರಣರ 'ಶಿವಾನುಭವ ದರ್ಪಣ', ಕಡಕೋಳದ ಮಡಿವಾಳಪ್ಪ, ಶಿಶುನಾಳ ಶರೀಫರು, ಕೂಡಲೂರೇಶ ಮತ್ತು ಶಂಕರಾನಂದರ ಕೆಲವು ಕೃತಿಗಳನ್ನೂ ಕೂಡ ಪರಿಶೀಲಿಸಲಾಗಿದೆ.

ಈ ಕೃತಿಯು ಮೂಲರೂಪ ಉಪನ್ಯಾಸಗಳದು. ವೀರಶೈವ ಮಠವೊಂದರಲ್ಲಿ ಸಮಾನ ಮನೋಧರ್ಮದ ಆಸ್ತಿಕರೊಂದಿಗೆ ಹಂಚಿಕೊಂಡ ವಿಚಾರಲಹರಿ ಇಲ್ಲಿರುವುದರಿಂದ ಸಹಜವಾಗಿಯೇ ಇದಕ್ಕೆ ಪ್ರವಚನದ ಸ್ವರೂಪವು ಪ್ರಾಪ್ತವಾಗಿದೆ. ವ್ಯಾಖ್ಯಾನ, ವಿವರಣೆ ಮತ್ತು ರಸಗ್ರಹಣೆಗಳಿಗೆ ಇಲ್ಲಿ ಮೊದಲ ಮಣೆ. ಬಿಡಿ ಪದ್ಯಗಳನ್ನು ಹೇಳಿ, ಅವುಗಳನ್ನು ತನಗಿರುವ ಪಾಂಡಿತ್ಯದ ಹಿನ್ನೆಲೆಯಲ್ಲಿ ವಿವರಿಸುವುದು ಇಲ್ಲಿ ಅನುಸರಿಸಲಾಗಿರುವ ವಿಧಾನ. ತತ್ತ್ವಪದಗಳ ಆಶಯಕ್ಕೆ, ಅವು ಹೇಳಬಹುದಾದ ಆಧ್ಯಾತ್ಮಿಕ ಸಂಗತಿಗಳ ನಿರೂಪಣೆಗೆ ಮಹತ್ತ್ವ ದೊರೆತಿದೆಯೇ ಹೊರತು, ಅವುಗಳ ಸಾಹಿತ್ಯಕ ಸ್ವರೂಪದ ಅಧ್ಯಯನಕ್ಕೆ ಅಲ್ಲ. ಆದರೂ ಕನ್ನಡ ಸಾಹಿತ್ಯದ ಒಂದು ವಿಶಿಷ್ಟ ಪ್ರಕಾರದ ಉಗಮ, ವಿಕಾಸ ಮತ್ತು ಮೌಲ್ಯಗಳನ್ನು ಮೊದಲ ಬಾರಿಗೆ ನಿರೂಪಿಸುವ ಪ್ರಾಥಮಿಕ ಪ್ರಯತ್ನದಲ್ಲಿ ಈ ಕೃತಿಯು ಯಶಸ್ಸನ್ನುಗಳಿಸಿದೆ.

ಶರಣಪಥ : ದೇಜಗೌ

ತಮ್ಮ ವಿಶ್ರಾಂತ ಜೀವನವನ್ನು ಹಲವು ಬಗೆಯ ಗ್ರಂಥರಚನೆಗೆ ವಿನಿಯೋಗಿಸುತ್ತಿರುವ ದೇಜಗೌ ಅವರ ಈ ಗ್ರಂಥವನ್ನು ಅದರೊಳಗಿನ ಅನೇಕ ಮೌಲಿಕ ವಿಚಾರಗಳಿಗಾಗಿ ಅಭಿನಂದಿಸಬಹುದಾದರೂ, ಸಾಹಿತ್ಯ ವಿಮರ್ಶೆಯೆಂದು ಅದರ ಬಗ್ಗೆ ಏನನ್ನೂ ಬರೆಯಲು ಸಾಧ್ಯವಾಗುವುದಿಲ್ಲ. ವಾಸ್ತವವಾಗಿ ಇದೊಂದು ವೈಚಾರಿಕ ಬರೆಹಗಳ ಸಂಕಲನ. ಎಲ್ಲದರ ಕೇಂದ್ರವಸ್ತು ಶರಣ ಜೀವನ ಮತ್ತು ಶರಣ ತತ್ತ್ವ. "ನನ್ನ ದೃಷ್ಟಿಯಲ್ಲಿ ಮೂಲ ಲಿಂಗಾಯತ ಧರ್ಮ ಉಳಿದೆಲ್ಲ ಧರ್ಮಗಳಿಂದ ವಿಭಿನ್ನವಾದದ್ದು, ಶ್ರೇಷ್ಠವಾದದ್ದು" ಎಂಬ ನಂಬಿಕೆಯ ತಳಹದಿಯಿಂದ ಹೊರಡುವ ಇವರ ವಿಚಾರಗಳು, ಮಾತುಗಾರಿಕೆಯ, ಭಾವುಕತೆಯ ಓಘದಲ್ಲಿಯೇ ರೂಪಿತವಾಗುತ್ತವೆ. ಆ ಕ್ಷಣಕ್ಕೆ ಆ ವಿಚಾರವು ಸರಿಯೆನಿಸಿದರೂ, ಹಲವು ಪುಟಗಳ

ನಂತರ ಅದಕ್ಕಿಂತ ಭಿನ್ನವಾದ ಮತ್ತೊಂದು ಅಭಿಪ್ರಾಯ ಬಂದು ಅವುಗಳ ನಡುವಿನ ಪರಸ್ಪರ ವಿರೋಧ ತಲೆಕೆಡಿಸುತ್ತದೆ.

ಈ ಸಂಕಲನದಲ್ಲಿ ಐದು ಲೇಖನಗಳಿವೆ. ಮೊದಲ ನಾಲ್ಕು ಸಾಂದರ್ಭಿಕವಾದ ಬರೆಹಗಳು/ಭಾಷಣಗಳು. ಬಸವಯುಗವು ದಲಿತೋದಯದ ಡಿಂಡಿಮ ಬಾರಿಸಿತೆಂಬ ಸರಿಯಾದ ವಿಚಾರದ ಹಿನ್ನೆಲೆಯಲ್ಲಿ ರೂಪಿತವಾಗಿರುವ ಮೊದಲ ಲೇಖನವು, ಸರ್ವಸಮ್ಮತವೆನ್ನಿಸುವ ಸಂಗತಿಗಳ ನಿರೂಪಣೆಯಾಗಿರುವುದರಿಂದ ವಾಗ್ವಾದಕ್ಕೆ ಎಡೆಗೊಡುವುದಿಲ್ಲ. ಆದರೆ ಆದರ್ಶ ಸ್ಥಿತಿ ಮತ್ತು ವಸ್ತುಸ್ಥಿತಿಗಳೆರಡನ್ನೂ ತುಲನೆ ಮಾಡಿ, ಆದರ್ಶವೇ ವಾಸ್ತವವಾಗಬೇಕೆಂದು ಪ್ರತಿಪಾದಿಸುವ ಇಂತಹ ಬರೆಹಗಳನ್ನು, ಮನುಷ್ಯ ಸ್ವಭಾವದ ಆಳಗಳ ಶೋಧನೆ ಮಾಡುವುದಿಲ್ಲವೆಂಬ ಆಕ್ಷೇಪಣೆಯೊಂದಿಗೆ ಗಮನಿಸಬೇಕಾಗುತ್ತದೆ. ನಾನು ಹೇಳುವ ಮಾತುಗಳನ್ನು ನಾನೂ ಕೂಡ ಸೇರಿದಂತೆ ಯಾರೂ ಕೇಳುತ್ತಿಲ್ಲವಲ್ಲಾ, ಏಕೆ? ಎಂಬ ಪ್ರಶ್ನೆಯನ್ನು ಗಂಭೀರವಾಗಿ ಕೇಳಿಕೊಂಡ ಹೊರತು ಇಂತಹ ವಿಚಾರಗಳಿಗೆ ಮೌಲಿಕತೆ ಬರುವುದಿಲ್ಲ. ಇಂದಿನ ಬದುಕಿಗೆ ಶರಣರ ಮೌಲ್ಯಗಳು ಹೇಗೆ ಅನ್ವಯವಾಗಬಹುದೆಂದು ಎರಡನೆಯ ಲೇಖನವು ಪರಿಶೀಲಿಸುತ್ತದೆ. ಶರಣಧರ್ಮದ ಆರ್ಥಿಕ ನಿಲುವುಗಳನ್ನು ಹುಡುಕಿ, ಅವುಗಳಲ್ಲಿ ಸಮತಾವಾದ ಮತ್ತು ಸಮಾಜವಾದಗಳ ಬೇರುಗಳನ್ನು ಗುರುತಿಸುವ ಈ ಬರಹವು ಶರಣರ ಆಸ್ತಿಕತೆಗೆ ಸಮ್ಮತಿ ನೀಡುತ್ತದೆ. ಶರಣರ ಅವತರಣದಿಂದ ಶಾಂತಿಸಂಸ್ಥಾಪನೆಯಾಗುವುದೆಂಬ ನಿರೀಕ್ಷೆಯೊಂದಿಗೆ ಮುಗಿಯುವ ಈ ಲೇಖನ ಕೂಡ ಮನುಷ್ಯನ ಮೇಲುಪದರದ ಅಧ್ಯಯನದಲ್ಲಿಯೇ ತೃಪ್ತವಾಗುತ್ತದೆ. 'ವೀರಶೈವ ತರುಣರಿಗೆ ಕರೆ' ಎಂಬ ಉಪನ್ಯಾಸವು, ಉಪನ್ಯಾಸವಾಗಿ ಯಶಸ್ವಿಯಾಗಿರಬಹುದು. ಕೃತಿಪ್ರಚೋದಕವಾಗಿ ಅಲ್ಲ. 'ಬಸವಣ್ಣನವರ ಕಲ್ಪನೆಯ ಸಮಾಜ' ಎಂಬ ಬರವಣಿಗೆಯೂ ಕೂಡ ನಿರ್ವಿವಾದವಾದ ವಿಷಯಗಳ ಭಾವುಕ ನಿರೂಪಣೆಯಾಗಿದೆ.

ಈ ಸಂಕಲನದಲ್ಲಿ ನಿಜವಾಗಿಯೂ ಮಹತ್ವಪೂರ್ಣವಾದ ಲೇಖನವೆಂದರೆ 'ಲಿಂಗಾಯತ ಮತ್ತು ಲೋಕಾಯತ' ಎಂಬ ಸುದೀರ್ಘ ಪ್ರಬಂಧ. ಲೇಖಕರ ಪಾಂಡಿತ್ಯ, ಅಧ್ಯಯನ ಮತ್ತು ವೈಚಾರಿಕತೆಗೆ ಅದು ಸಾಕ್ಷಿಯಾಗಿದೆ. ಮೇಲು ನೋಟಕ್ಕೆ ನಾಸ್ತಿಕವೆನಿಸುವ ಲೋಕಾಯತದೊಡನೆ, 'ಸಕಲ ಜೀವಾತ್ಮರಿಗೆ ಲೇಸನೇ ಬಯಸುವ' ಲಿಂಗಾಯತ ಧರ್ಮವನ್ನು ವಿವರ ವಿವರವಾಗಿ ಹೋಲಿಸುವ, ಅನೇಕ ಸಮಾನ ಸಂಗತಿಗಳನ್ನು ಕಂಡುಕೊಳ್ಳುವ ಈ ಲೇಖನವು ಸಮಾನವಲ್ಲದ ಸಂಗತಿಗಳ ಕಡೆಗೆ ಗಮನ ಹರಿಸುವುದಿಲ್ಲ. ದೇವೀಪ್ರಸಾದ ಚಟ್ಟೋಪಾಧ್ಯಾಯ, ಎ. ಆರ್. ನಾರ್ಲಾ, ಎಂ. ಎನ್. ರಾಯ್ ಹೀಗೆಯೇ ಹಲವು ವೈಚಾರಿಕರ ಅಭಿಪ್ರಾಯಗಳು ಈ ಲೇಖನಕ್ಕೆ ತೂಕ ತಂದುಕೊಟ್ಟಿವೆ.

ಒಟ್ಟಿನಲ್ಲಿ, ಯಾವುದೇ ಸಾಹಿತ್ಯ ಕೃತಿಯ ಪರಿಶೀಲನೆಯಿಲ್ಲದ ಈ ಕೃತಿಯು, ವೈಚಾರಿಕ ಜಾಗೃತಿಯನ್ನು ಮೂಡಿಸುವ ಪ್ರಯತ್ನದಲ್ಲಿ, ಒಂದು ಮಟ್ಟದ ಓದುಗರ ದೃಷ್ಟಿಯಿಂದ ಯಶಸ್ವಿಯಾಗುತ್ತದೆ. ದೇಜಗೌ ಅವರ ಗದ್ಯಶೈಲಿಯು ಆಲಂಕಾರಿಕತೆ ಮತ್ತು ಮಾತುಗಾರಿಕೆಗಳನ್ನು ತನ್ನ ಮೂಲ ನೆಲೆಯಾಗಿಮಾಡಿಕೊಂಡಿದ್ದರೂ ಕೂಡ ಪರಿಣಾಮಕಾರಿಯಾಗಿಯೇ ಸಂವಹನವಾಗುತ್ತದೆ.

ರಾಮಾಯಣದ ಸ್ತ್ರೀಪಾತ್ರಗಳು : ಸೀತಾಸುತ

ಅನೇಕ ದೃಷ್ಟಿಗಳಿಂದ ಇದೊಂದು ಅಪರೂಪದ ಪುಸ್ತಕ. ಎಂಬತ್ತೆರಡು ವರ್ಷಗಳ, ನಿವೃತ್ತ ಸರ್ಕಾರೀ ಅಧಿಕಾರಿಯೊಬ್ಬರು ತಮ್ಮ ಸಮಸ್ತ ಗಮನವನ್ನೂ ಮಹಾಕಾವ್ಯವೊಂದರ ಅಧ್ಯಯನದ ಮೇಲೆ ಕೇಂದ್ರೀಕರಿಸಿ, ಅದರ ಪರಿಣಾಮವಾಗಿ ಮೂಡಿ ಬಂದ ಆಲೋಚನೆಗಳನ್ನು ಈ ಸುದೀರ್ಘ ಕೃತಿಯಲ್ಲಿ ನಿರೂಪಿಸಿದ್ದಾರೆ. ವಾಲ್ಮೀಕಿ ರಾಮಾಯಣದ ಕನ್ನಡ ಅನುವಾದವನ್ನು ಸಂಪೂರ್ಣವಾಗಿ ಅವಲಂಬಿಸಿರುವ ಲೇಖಕರು, ಅದಕ್ಕೆ ಪೂರಕವಾಗಿ ಕುವೆಂಪು, ಡಿ.ವಿ.ಜಿ., ಪು.ತಿ.ನ , ವಿ.ಸೀ. ಮುಂತಾದ ಹಲವು ಸಾಹಿತಿಗಳ ಸೃಜನಶೀಲ ಮತ್ತು ವಿಮರ್ಶಾತ್ಮಕ ಬರೆಹಗಳನ್ನು ಆಳವಾಗಿ ಅಭ್ಯಾಸ ಮಾಡಿರುವರೆನ್ನುವುದಕ್ಕೆ ಅವರ ಕೃತಿಯ ತುಂಬಾ, ಹೇರಳವಾದ ನಿದರ್ಶನ ಗಳು ದೊರೆಯುತ್ತವೆ. ಅದರ ಜೊತೆಗೆ ಈ ಲೇಖಕರು ಸ್ವತಂತ್ರವಾಗಿ ಮೌಲಿಕ ವಾದ ಆಲೋಚನೆಗಳನ್ನು ಮಾಡುವ ಸಾಮರ್ಥ್ಯವುಳ್ಳವರು.

740 ಪುಟಗಳಿರುವ ಈ ಕೃತಿಯ ಕೇಂದ್ರವಸ್ತು ರಾಮಾಯಣದ ಹಲವು ಸ್ತ್ರೀ ಪಾತ್ರಗಳ ಸಮರ್ಥನಾತ್ಮಕವಾದ ಹಾಗೆಯೇ ಶೋಧನಪರವಾದ ಪರಿಶೀಲನೆ. ಸುಮಾರು ಅರವತ್ತು ಪುಟಗಳ ಪ್ರಸ್ತಾವನೆಯಲ್ಲಿ ಲೇಖಕರು ತಮ್ಮ ವಿಮರ್ಶೆಯ ವೈಚಾರಿಕ ನೆಲೆಗಳನ್ನು ಸ್ಪಷ್ಟಪಡಿಸಿದ್ದಾರೆ. ರಾಮಾಯಣವು ಸಮಸ್ಯೆಗಳ ಆಗರ ವೆಂದು ಒಪ್ಪಿಕೊಳ್ಳುವ ಅವರು, "ಕಾವ್ಯದಲ್ಲಿ ಸಮಸ್ಯಾತ್ಮಕವಾದ ಸಂದರ್ಭಗಳು ಒದಗಿದಾಗ ಕಾವ್ಯವು ತರ್ಕಬದ್ಧವೂ, ತರ್ಕಾತೀತವೂ ಆದುದೆಂದು ಗಮನಿಸಿ, ಕಾವ್ಯದ ರಸಾಸ್ವಾದನೆ ಮಾಡುವುದು ಹಿತಕರ"ವೆಂಬ ತೀರ್ಮಾನಕ್ಕೆ ಬರುತ್ತಾರೆ. ಈ ತೀರ್ಮಾನ ವಿದ್ದರೂ ಅವರು ಪಾತ್ರಗಳ ವರ್ತನೆಯ ವಿವರಗಳನ್ನು ವಿಚಾರದ ನಿಕಷಕ್ಕೆ ಒಡ್ಡದೆ ಬಿಡುವುದಿಲ್ಲ. ಈ ಪ್ರಸ್ತಾವನೆಯಲ್ಲಿ ಭಾರತೀಯ ನಾರಿಯು ನಡೆದು ಬಂದ ದಾರಿ ಯನ್ನು ನಿರೂಪಿಸುವ ಒಂದು ಭಾಗವಿದೆ. ಇದು ವೇದಕಾಲದಿಂದ ಇಂದಿನವರೆಗೆ ಹೆಣ್ಣಿನ ಸ್ಥಾನಮಾನಗಳಲ್ಲಿ ಸಂತತವಾದ ಅಧಃಪತನವಾಗಿದೆಯೆಂದು ಒಪ್ಪಿಕೊಳ್ಳುವ ಲೇಖಕರು, ತಮ್ಮ ಪೀಳಿಗೆಯುವರಲ್ಲಿ ವಿರಳವಾದ ಪ್ರಗತಿಪರ ಧೋರಣೆಗಳನ್ನು ತೋರಿಸುತ್ತಾರೆ. ಶಾಸನ ಸಭೆಗಳಲ್ಲಿ ತಮ್ಮನ್ನು ಪ್ರತಿನಿಧಿಸಲು ಮಹಿಳೆಯರೆಲ್ಲರೂ ಕೇವಲ ಮಹಿಳೆಯರನ್ನೇ ಆರಿಸಬೇಕೆಂದಿರುವುದು ಒಂದು ನಿದರ್ಶನ.

ಒಟ್ಟು ಇಪ್ಪತ್ತೇಳು ಸ್ತ್ರೀ ಪಾತ್ರಗಳನ್ನು ಪರಿಶೀಲಿಸಿರುವ ಲೇಖಕರು ಅವುಗಳನ್ನು ಆರ್ಯಸ್ತ್ರೀಯರು, ತಪಸ್ವಿನಿಯರು, ರಾಕ್ಷಸ ಸ್ತ್ರೀಯರು ಮತ್ತು ವಾನರ ಸ್ತ್ರೀಯರೆಂದು ನಾಲ್ಕು ಗುಂಪುಗಳಾಗಿ ವಿಂಗಡಿಸಿದ್ದಾರೆ. ಸಹಜವಾಗಿಯೇ ಆರ್ಯ ಸ್ತ್ರೀಯರಿಗೆ ಹೆಚ್ಚಿನ ಪ್ರಾಶಸ್ತ್ಯ ದೊರಕಿದೆ. ಯಾವ ಪಾತ್ರದ ಬಗ್ಗೆಯೂ ಕೇವಲ ಕಥೆ ಹೇಳುವುದರಿಂದ ತೃಪ್ತರಾಗುವುದಿಲ್ಲ. ಕೃತಿ ಲೋಕದಲ್ಲಿನ ಪಾತ್ರಗಳ ವರ್ತನೆಯನ್ನು ನಿಜಲೋಕದ ಮೌಲ್ಯಗಳೊಂದಿಗೆ ಹೋಲಿಸಿನೋಡುವ, ಸಾಂಸ್ಕೃತಿಕ ಸಮರ್ಥನೆಗಳನ್ನು ಒದಗಿಸುವ ವಿಧಾನವನ್ನು ಎಲ್ಲ ಕಡೆಯೂ ಗಮನಿಸಬಹುದು. ಮೇಲು ನೋಟಕ್ಕೆ ದೋಷಪೂರ್ಣವೆಂದು ಕಾಣಬಹುದಾದ ಅಹಲ್ಯೆಯ ವರ್ತನೆಯನ್ನು ಸ್ಥೂಲದೃಷ್ಟಿ, ಸೂಕ್ಷ್ಮದೃಷ್ಟಿ ಮತ್ತು ಪೂರ್ಣದೃಷ್ಟಿಗಳೆಂಬ ಮೂರು ಹಂತಗಳಲ್ಲಿ ಪರಿಶೀಲಿಸಿ ಅದು ಲೋಕ ಕಲ್ಯಾಣಪರವೇ ಆಗಿತ್ತೆಂದು ತೋರಿಸಿಕೊಡುವುದು ಒಂದು ನಿದರ್ಶನ. ಒಟ್ಟಿನಲ್ಲಿ ವಾಲ್ಮೀಕಿಯ ಪಾತ್ರ ಚಿತ್ರಣವನ್ನು ಸಮರ್ಥಿಸಿಕೊಳ್ಳುವ ಧೋರಣೆಯಿದೆ. ಪ್ರತಿಯೊಂದು ಪಾತ್ರದ ವಿಶ್ಲೇಷಣೆಗೆ ಇಲ್ಲಿ ವ್ಯವಧಾನವಿಲ್ಲ.

ಲೇಖಕರು ತಮ್ಮ ಗಮನವನ್ನು ಕೇವಲ ಸ್ತ್ರೀ ಪಾತ್ರಗಳ ಅಧ್ಯಯನಕ್ಕೆ ಮೀಸಲಾಗಿಡದೆ, ಒಟ್ಟು ರಾಮಾಯಣದ ಬಗ್ಗೆ ಚಿಂತನೆ ನಡೆಸಿದ್ದರೆ ಇನ್ನಷ್ಟು ಮೌಲಿಕವಾದ ಕೃತಿ ದೊರಕುತ್ತಿತ್ತು. ಲೇಖನಗಳ ರಚನೆಯಲ್ಲಿ ತರ್ಕಬದ್ಧವಾದ ಬೆಳವಣಿಗೆ ಹಲವುಕಡೆ ಕಂಡುಬರುವುದಿಲ್ಲವೆಂದರೆ, ಪರಸ್ಪರ ಸಂಬಂಧವಿಲ್ಲದ ವಿಷಯಗಳು ಮಧ್ಯೆ ನುಸುಳುತ್ತವೆಂದು ಅರ್ಥ. ಹಲವು ಕಡೆ ಪುನರುಕ್ತಿಗಳು ಕಂಡುಬರುವುದರಿಂದ ಗ್ರಂಥದ ವಾಚನೀಯತೆ ಕಡಿಮೆಯಾಗಿದೆ. ಅಲ್ಲದೆ ವಿಷಯವೇ ಆಧುನಿಕರಲ್ಲಿ ಆಸಕ್ತಿಯನ್ನು ಹುಟ್ಟಿಸದಂತಹುದು.

ಏನೇ ಆದರೂ ಗ್ರಂಥಕರ್ತರ ಹಿನ್ನೆಲೆ, ವಯಸ್ಸು ಮತ್ತು ಏಕಾಗ್ರಚಿತ್ತಗಳ ಸಂದರ್ಭದಲ್ಲಿ ಇಟ್ಟು ನೋಡಿದಾಗ ಈ ಕೃತಿಯು ಸಹೃದಯರೆಲ್ಲರ ಮೆಚ್ಚಿಗೆ ಹಾಗೂ ಗೌರವಗಳಿಗೆ ಪಾತ್ರವಾಗುತ್ತದೆ. ರಾಮಾಯಣ ವಿಮರ್ಶೆಯ ಕ್ಷೇತ್ರದಲ್ಲಿ ಇದು ಕ್ರಾಂತಿಯನ್ನು ಎಬ್ಬಿಸದಿರಬಹುದು. ಆದರೆ ಇಂತಹ ದುಡಿಮೆಯು ಸರ್ವದಾ ಪ್ರಶಂಸನೀಯವಾದುದು.

ದಾಸ ಸಾಹಿತ್ಯದ ಕೆಲವು ನೋಟಗಳು : ಲೀಲಾವತಿ ಎಸ್. ರಾವ್.

"ಮೈಸೂರು ವಿಶ್ವವಿದ್ಯಾಲಯದ ಸಂಶೋಧನಾ ವಿಭಾಗದಲ್ಲಿ ದಾಸ ಸಾಹಿತ್ಯದ ಸಂಗ್ರಹ, ಸಂಸ್ಕರಣ, ಸಂಪಾದನ, ಅಧ್ಯಯನಗಳನ್ನು ನಡೆಸಿ ಮಾನ್ಯ ಲೇಖಕಿಯರು ಗಳಿಸಿದ ಅನುಭವ ಸಂಪನ್ನತೆ ಈ ಬರವಣಿಗೆಯ ಹಿನ್ನೆಲೆಯಲ್ಲಿರುವುದನ್ನು ಓದುಗರು ನೆನಪಿನಲ್ಲಿಟ್ಟುಕೊಳ್ಳಬೇಕು" ಎಂಬ ಮುನ್ನುಡಿಕಾರರ ಎಚ್ಚರಿಕೆಯ

ಹಿನ್ನೆಲೆಯಲ್ಲಿ ಈ ಪುಸ್ತಕವನ್ನು ಓದಿದಾಗ ನಿರಾಶೆಯಾಗುವುದೆಂದು ಹೇಳದೆ ವಿಧಿಯಿಲ್ಲ. 'ಗುಣಗ್ರಾಹೀ ದೃಷ್ಟಿಕೋನ' ಕೂಡ ಇಲ್ಲಿ ತೀರ ಪ್ರಾಥಮಿಕವಾದ ವಿವರಣೆ ಪ್ರಶಂಸೆಗಳ ನೆಲೆಯಲ್ಲಿಯೇ ಕೆಲಸ ಮಾಡಿದೆ. ವಿಮರ್ಶೆಯೆಂಬ ಹೆಸರು ಇಲ್ಲಿ ಕೇವಲ ಅಲಂಕಾರ ಅಷ್ಟೆ.

ಶ್ರೀಪಾದರಾಯರನ್ನು ಕುರಿತ ಪರಿಚಯ ಲೇಖನವು ಅಷ್ಟು ಮಾತ್ರ ಆಗಿದೆ. ಕೃತಿ ಪರಿಚಯವೆಂದರೆ ಪದ್ಯದ ಸಾಲುಗಳು ಮತ್ತು ಅವುಗಳ ಗದ್ಯಾನುವಾದವೆಂದು ಲೇಖಕಿಯರು ತಿಳಿದಂತಿದೆ. ಹೆಳವನ ಕಟ್ಟೆ ಗಿರಿಯಮ್ಮನ 'ಸೀತಾ ಕಲ್ಯಾಣ'ವನ್ನು ಕುರಿತ ಲೇಖನವೂ ಇದೇ ಮಾದರಿಯನ್ನು ಅನುಸರಿಸುತ್ತದೆ. ಶ್ರೀ ತುಳಸಿಯನ್ನು ಕುರಿತ ಲೇಖನಕ್ಕೆ ಸಾಹಿತ್ಯ ವಿಮರ್ಶೆಯ ಗ್ರಂಥದಲ್ಲಿ ಖಂಡಿತವಾಗಿಯೂ ಸ್ಥಾನವಿಲ್ಲ. ದಾಸ ಸಾಹಿತ್ಯದಲ್ಲಿ ಗಣಪತಿಯನ್ನು ಕುರಿತಂತೆ ಬರುವ ಪದ್ಯಗಳನ್ನು ಮತ್ತೊಂದು ಲೇಖನವು ಪರಿಚಯ ಮಾಡಿಕೊಡುತ್ತದೆ. ಹರಿದಾಸರ ಕೀರ್ತನೆಗಳಲ್ಲಿ ಮಹಾ ಭಾರತವು ಚಿತ್ರಿತವಾಗಿರುವ ಬಗೆಯನ್ನು ಪರಿಚಯಿಸುವ ಬರವಣಿಗೆಯೂ ಉಪಯುಕ್ತ ವಾಗಿದೆ. ಹರಿದಾಸರು ಹರಿ-ಹರ-ಅನ್ಯದೈವ ಸಮಾನತೆಯನ್ನು ಬೋಧಿಸಿರುವರೆಂಬ ವಾದವೂ ನಿದರ್ಶನಗಳ ಹಂತದಲ್ಲಿ ನಿಜವಿರಬಹುದಾದರೂ, ಹರಿದಾಸರು ದ್ವೈತ ತತ್ವ ಪ್ರತಿಪಾದಕರಾಗಿದ್ದರೆಂಬ ಸಂಗತಿಯ ಹಿನ್ನೆಲೆಯಲ್ಲಿ ಪ್ರಶ್ನಾರ್ಹವಾಗುತ್ತದೆ.

ಕೇವಲ ಸಹೃದಯತೆ, ಕನ್ನಡ ಎಂ.ಎ. ಪದವಿ ಮತ್ತು ಸಾಹಿತ್ಯಾಸಕ್ತಿಗಳ ಫಲವಾಗಿ ನಿಜವಾದ ವಿಮರ್ಶೆ ಹುಟ್ಟಲಾರದೆನ್ನುವುದಕ್ಕೆ ಈ ಕೃತಿಯು ಸಾಕ್ಷಿಯಾಗಿದೆ.

ಸಾಹಿತ್ಯ ವಿಮರ್ಶೆ 1980 : ಸಿ. ಪಿ. ಕೃಷ್ಣಕುಮಾರ್

ಕನ್ನಡ ನಿಯತಕಾಲಿಕಗಳಲ್ಲಿ, ಒಂದು ವರ್ಷದ ಅವಧಿಯಲ್ಲಿ ಪ್ರಕಟವಾದ ಅತ್ಯುತ್ತಮ ವಿಮರ್ಶಾ ಲೇಖನಗಳನ್ನು ಒಂದು ಕಡೆ ಸಂಗ್ರಹಿಸಿ, ಪುಸ್ತಕರೂಪದಲ್ಲಿ ಪ್ರಕಟಿಸುವ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಯೋಜನೆಯ ಅಂಗವಾಗಿ ಹೊರ ಬಂದಿರುವ ಈ ಸಂಕಲನವನ್ನು ಸಿ.ಪಿ.ಕೆ.ಯವರು ಸಮರ್ಥವಾಗಿ ಸಂಪಾದಿಸಿ ಕೊಟ್ಟಿದ್ದಾರೆ. ತಾತ್ವಿಕ ಮತ್ತು ಅನ್ವಯಿಕ ಕ್ಷೇತ್ರಗಳಲ್ಲಿ, ಸಮಕಾಲೀನ ವಿಮರ್ಶೆ ಯೊಳಗೆ ನಡೆಯುತ್ತಿರುವ ಚಲನವಲನಗಳನ್ನು ಸ್ಥೂಲವಾಗಿ ಗುರುತಿಸುವ ಸಂಪಾದಕರ ಉದ್ದೇಶವು ಯಶಸ್ವಿಯಾಗಿದೆ.

ಇಂತಹ ಕೃತಿಗಳ ರಚನೆಯಲ್ಲಿ ಸಂಪಾದಕನು ಎದುರಿಸಬೇಕಾಗಿಬರುವ ಅತಿ ದೊಡ್ಡ ಸವಾಲೆಂದರೆ ತನ್ನ ಸ್ವಂತ ಇಷ್ಟಾನಿಷ್ಟಗಳ, ಅಭಿರುಚಿಗಳ ಪರಿಮಿತಿಯನ್ನು ದಾಟಿ ಸಂಕಲನವು ನಿಜವಾಗಿಯೂ ಪ್ರಾತಿನಿಧಿಕವಾಗುವಂತೆ ನೋಡಿಕೊಳ್ಳುವುದು. ಸ್ವತಃ ವಿಮರ್ಶಕನಾದ ಸಂಪಾದಕನು ತನಗೆ 'ಅತ್ಯುತ್ತಮ'ವೆನಿಸಿದ ಲೇಖನಗಳನ್ನು ಆರಿಸಿದರೆ ಅದು ಯಾವುದೋ ವಿಮರ್ಶಾಪಂಥದ ಮುಖವಾಣಿಯಾಗಿ ಬಿಡುತ್ತದೆ

ಪ್ರಸ್ತುತ ಸಂಕಲನದಲ್ಲಿ ಹಾಗೆ ಆಗಿಲ್ಲವೆನ್ನುವುದು ಕಿ.ಪಿ.ಕೆ.ಯವರ ಮುಕ್ತವಾದ, ನಿರ್ಮಮವಾದ ಮನೋಧರ್ಮಕ್ಕೆ ಸಾಕ್ಷಿಯೆಂದು ನಾನು ತಿಳಿದಿದ್ದೇನೆ. ಇಂದಿನ ವಿಮರ್ಶೆಯ ಪರಿಸರದ ವಿವಿಧ ಒಲವನ್ನು ಪ್ರತಿನಿಧಿಸುವ ಲೇಖನಗಳನ್ನು ಆರಿಸಿರುವ ಅವರು, ಎಲ್ಲ ಲೇಖನಗಳೂ ಒಂದು ನಿರ್ದಿಷ್ಟ ಗುಣಮಟ್ಟವನ್ನು ಉಳಿಸಿಕೊಂಡಿರುವಂತೆ ನೋಡಿಕೊಂಡಿದ್ದಾರೆ. ಇಲ್ಲಿನ ಲೇಖನಗಳು ಮಂಡಿಸುವ ಧೋರಣೆಗಳನ್ನು ನಾವು ಒಪ್ಪಲಿ, ಬಿಡಲಿ ಅವುಗಳನ್ನು ಗಂಭೀರವಾಗಿ ಪರಿಗಣಿಸದಿರಲು ಸಾಧ್ಯವಿಲ್ಲ. ಇಲ್ಲಿನ ಯಾವ ಲೇಖನವೂ ಕೂಡ ಸಾಹಿತ್ಯೇತರ ಕಾರಣಗಳಿಗಾಗಿ ಇಲ್ಲಿ ಸೇರಿಕೊಂಡಿಲ್ಲವೆನ್ನುವುದು ಇದರ ಹೆಗ್ಗಳಿಕೆ.

ಇಲ್ಲಿರುವ ಲೇಖನಗಳಲ್ಲಿ ಎರಡು ಸಾಹಿತ್ಯ ತತ್ವಗಳ ನಿರೂಪಣೆಯನ್ನು ಗುರಿಯಾಗಿ ಹೊಂದಿವೆ. (ಕೆ. ವಿ. ನಾರಾಯಣ ಮತ್ತು ದೇವಯ್ಯ ಹರವೆ). ಸಮಾಜವಾದೀ ವಾಸ್ತವತೆಯ ಇತಿಹಾಸ, ಸ್ವರೂಪ ಮತ್ತು ಪ್ರಸ್ತುತತೆಗಳನ್ನು ಪಾಂಡಿತ್ಯಪೂರ್ಣವಾಗಿ ಚರ್ಚಿಸುವ ನಾರಾಯಣ ಅವರ ಲೇಖನವು ಕೊನೆಯಲ್ಲಿ ಒಂದು ಮಹತ್ವದ ಪ್ರಶ್ನೆಯನ್ನು ಕೇಳುತ್ತದೆ. ''ಒಂದು ಸಾಹಿತ್ಯಕ ತತ್ತ್ವ, ಸೃಜನಾತ್ಮಕ ಸಾಹಿತ್ಯ ಕೃತಿಗಳು ಸೃಷ್ಟಿಯಾದ ಮೇಲೆ ಅವುಗಳನ್ನು ವಿವರಿಸುವ ದೃಷ್ಟಿಯಿಂದ ರೂಪುಗೊಳ್ಳುವುದನ್ನು ಸಹಜವೆನ್ನಬಹುದು. ಆದರೆ ಇಂಥದೇ ಸಾಹಿತ್ಯಕ ತತ್ತ್ವಗಳಿಗೆ ಅನುಗುಣವಾದ ಕೃತಿಗಳು ರಚನೆಗೊಳ್ಳಬೇಕೆಂದು ಹೇಳುವುದು ವಿಪರ್ಯಾಸವಲ್ಲವೇ ?'' ದೇವಯ್ಯ ಹರವೆಯವರ ಬಂಡಾಯ ಸಾಹಿತ್ಯಕ್ಕೆ ಪೂರ್ವಪೀಠಿಕೆಯನ್ನು ದೊರಕಿಸಿಕೊಡುವ ಲೇಖನವು, ''ತಲತಲಾಂತರದಿಂದ ಓದುಗರ ಮನಸ್ಸಿನಲ್ಲಿ ನೆಟ್ಟಿರುವ ಸೌಂದರ್ಯದ ಬಗೆಗಿನ ತಿಳಿವಳಿಕೆಯನ್ನು ಅಲ್ಲಾಡಿಸುವಂಥ ಕೆಲಸ ಮಾಡಬೇಕಲ್ಲದೆ ಹೊಸರೀತಿಯ ಸೌಂದರ್ಯ ಮತ್ತು ಸಹಾನುಭೂತಿಯನ್ನು ಅವರೆದೆಯಲ್ಲಿ ಬೇರೂರುವಂತೆ ಮಾಡಬೇಕಾಗುತ್ತದೆ'' ಎಂಬ ಸಮರ್ಥನೀಯವಾದ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತದೆ.

ಈ ಲೇಖನದಲ್ಲಿ ತೋರಿಬರುವ ಸಮರ್ಥನೆಯ ಧಾಟಿ ಮತ್ತು ತನಗಿಂತ ಅನ್ಯವಾದ ಸಾಹಿತ್ಯ ಮಾರ್ಗಗಳ ಸರಳೀಕರಣವನ್ನು ಬಂಡಾಯವು ಎದುರಿಸಬೇಕಾಗಿರುವ ಸವಾಲುಗಳ ಹಿನ್ನೆಲೆಯಲ್ಲಿ ಅರ್ಥಮಾಡಿಕೊಳ್ಳಬಹುದು.

ಉಳಿದ ಲೇಖನಗಳಲ್ಲಿ ಐದು ಕಥಾಸಾಹಿತ್ಯಕ್ಕೆ ಸಂಬಂಧಪಟ್ಟವು. ಮೂರು ಕಾವ್ಯ/ಕವಿತೆಗಳಿಗೆ ಸಂಬಂಧಿಸಿದವಾದರೆ ಇನ್ನೊಂದು ಲೇಖನ ವಿಮರ್ಶೆಯ ವಿಮರ್ಶೆ. ವಿಮರ್ಶಿತ ಕೃತಿಯು ಕೇವಲ ಪ್ರಶಂಸೆಯ ನೆಲೆಯಲ್ಲಿ ಸ್ವೀಕೃತವಾಗದೆ, ಅನೇಕ ಒಳನೋಟಗಳಿಗೆ, ಶೋಧನೆಗೆ ವಸ್ತುವಾಗುವುದನ್ನು ಇಲ್ಲಿ ಗಮನಿಸಬಹುದು.

ಸಮಕಾಲೀನ ವಿಮರ್ಶೆಯ ಬಹುಪಾಲು, ಸಮಕಾಲೀನ ಸಾಹಿತ್ಯದ ಚರ್ಚೆಗೆ ಮೀಸಲಾಗಿರುವುದು ಸಹಜವಾದರೂ ಪ್ರಾಚೀನ ಸಾಹಿತ್ಯದ ಅಧ್ಯಯನವು ತೀರಾ ಉಪೇಕ್ಷಿತವಾಗಿರುವುದು ಆತಂಕಕಾರಿ. ವಿಮರ್ಶಕರಲ್ಲಿ ಅನೇಕರು ಮೂವತ್ತರ ಆಚೆ–ಈಚೆಯ ತರುಣರಿರುವುದು ಆಶಾದಾಯಕವಾದ ಅಂಶ. ವಿಮರ್ಶೆಗೆ ಬೇಕಾದ ಬುದ್ಧಿಶಕ್ತಿ ಮತ್ತು ನಿರ್ಣಮತಗಳು ಸ್ಪಷ್ಟವಾಗಿದ್ದರೂ, ವಿಮರ್ಶೆಯ ಪರಿಕರ ಮತ್ತು ಪರಿಭಾಷೆಗಳ ಮೇಲಿನ ಪ್ರಭುತ್ವವು ಲೇಖನದಿಂದ, ಲೇಖನಕ್ಕೆ ಬದಲಾಗುತ್ತದೆ. ಏನೇ ಆದರೂ ಕ್ರಮೇಣ ವಿಮರ್ಶೆಯು ಕಲಾವಿಲಾಸೀ ಲಕ್ಷಣಗಳನ್ನು ಕಳೆದುಕೊಂಡು ವೃತ್ತಿಪರವಾಗುತ್ತಿರುವುದಕ್ಕೆ ಸಾಕ್ಷಿಗಳನ್ನು ಈ ಸಂಕಲನವು ಒದಗಿಸುತ್ತದೆ.

ಅಮೃತ ಮತ್ತು ಗರುಡ : ಡಿ. ಆರ್. ನಾಗರಾಜ್.

ಸಮಕಾಲೀನ ಕನ್ನಡ ವಿಮರ್ಶೆಯ ಸಂದರ್ಭದಲ್ಲಿ ಅತ್ಯಂತ ಭರವಸೆ ಹುಟ್ಟಿಸುವ ಲೇಖಕರಲ್ಲಿ ಒಬ್ಬರಾದ ಡಿ. ಆರ್. ನಾಗರಾಜ್ ಅವರ ಮೊದಲ ಕೃತಿಯು, ಬೇಂದ್ರೆಯವರ ಕವಿತೆಯ ಬಗ್ಗೆ ಮಾಸ್ತಿಯವರು ಹೇಳಿದಂತೆ, ಕೇವಲ ಭರವಸೆ ಮಾತ್ರವಲ್ಲ. ಸಿದ್ಧಿಯೂ ಹೌದು. ಕನ್ನಡ ವಿಮರ್ಶೆಯು ಪಡೆದುಕೊಳ್ಳುತ್ತಿರುವ ಪ್ರಬುದ್ಧತೆಗೆ ಈ ಸಂಕಲನವು ಖಂಡಿತವಾದ ಸಾಕ್ಷಿಯಾಗಿದೆ.

ಈ ಸಂಕಲನವು 1975 ರಿಂದ 1983 ರವರೆಗಿನ ಅವಧಿಯಲ್ಲಿ ಬರೆದ ಹದಿನಾರು ಲೇಖನಗಳನ್ನು ಒಳಗೊಂಡಿದೆ. (191 ಪುಟಗಳು). ಬೆಂಗಳೂರು ವಿಶ್ವವಿದ್ಯಾಲಯವು ಪ್ರತಿವರ್ಷವೂ ಪ್ರಕಟಿಸುವ 'ಸಾಹಿತ್ಯವಾರ್ಷಿಕ'ದಲ್ಲಿ ಮಾಡಿದ ಪುಸ್ತಕ ವಿಮರ್ಶೆಗಳ ಪರಿಷ್ಕೃತ ಬರವಣಿಗೆಯು ಸಂಕಲನದ ಅತಿ ದೊಡ್ಡ ಲೇಖನ. (48 ಪುಟಗಳು). ಮೂರು ನಾಟಕಗಳ ರಂಗ ಪ್ರಯೋಗಗಳನ್ನು ವಿಮರ್ಶಿಸುವ ಲೇಖನಗಳು ಎರಡನೆಯ ಭಾಗದಲ್ಲಿವೆ. ದ. ರಾ. ಬೇಂದ್ರೆ, ಚಂದ್ರಶೇಖರ ಕಂಬಾರ ಮತ್ತು ಎಚ್. ಎಸ್ ಶಿವಪ್ರಕಾಶ್ ಅವರ ಬಿಡಿಕವನಗಳ ಪ್ರಾಯೋಗಿಕ ವಿಮರ್ಶೆಯು ಕೊನೆಯ ಭಾಗದಲ್ಲಿದೆ. ಜಿ. ಎಸ್. ಶಿವರುದ್ರಪ್ಪನವರ ಸಮಗ್ರ ಕಾವ್ಯದ ಸಮೀಕ್ಷೆ ಮತ್ತೊಂದು ಲೇಖನದಲ್ಲಿದೆ. ಒಂದು, ಅನಂತಮೂರ್ತಿಯವರೊಡನೆ ನಡೆಸಿದ ಸಂದರ್ಶನ. ಜಾನಪದ ರಂಗಭೂಮಿ ಹಾಗೂ ಜಾನಪದಕ್ಕೆ ಸಂಬಂಧಿಸಿದ ಲೇಖನಗಳು ಎರಡು, ಕುವೆಂಪು, ಕಾರಂತ ಮತ್ತು ಮಾಸ್ತಿಯವರ ಸೃಜನಾತ್ಮಕ ಬರವಣಿಗೆಯ ಕೆಲವು ನೆಲೆಗಳನ್ನು ಅತ್ಯಂತ ಸಮರ್ಥವಾಗಿ ಚರ್ಚಿಸುವ ಲೇಖನಗಳು ಮೂರು. 'ಸಾಹಿತ್ಯ ಮತ್ತು ತತ್ವಜ್ಞಾನ' ಹಾಗೂ 'ಆಧುನಿಕ ಕನ್ನಡ ಸಾಹಿತ್ಯ ಮತ್ತು ಸಾಮಾನ್ಯ ಮನುಷ್ಯ' ಎಂಬ ಲೇಖನಗಳು ಸೈದ್ಧಾಂತಿಕವಾದ ನೆಲೆಗಳನ್ನು ಶೋಧಿಸುವ ಆಸಕ್ತಿಯನ್ನು ತಳೆದಿವೆ. ಎಲ್ಲ ಲೇಖನಗಳ ಹಿಂದಿರುವ

ಮೂಲಭೂತ ಆಶಯವೆಂದರೆ ಸಾಹಿತ್ಯ ಕೃತಿಯ ಅನನ್ಯತೆಯನ್ನು ನಿರಾಕರಿಸದೆ, ಅದನ್ನು ಸಾಂಸ್ಕೃತಿಕ ಸಂದರ್ಭದಲ್ಲಿಟ್ಟು ಮೌಲ್ಯಮಾಪನ ಮಾಡಬೇಕೆನ್ನುವುದು. ಸಮಕಾಲೀನ ವಿಮರ್ಶೆಯು ಬದ್ಧತೆ ಮತ್ತು ರೂಪನಿಷ್ಠ ವಿಮರ್ಶೆಗಳೆಂಬ ವಿರುದ್ಧ ಧ್ರುವಗಳಲ್ಲಿ ರಮಿಸುವ ಅಪಾಯವು ಮೂರ್ತವಾಗಿರುವ ಇಂದಿನ ದಿನಗಳಲ್ಲಿ, ಈ ರೀತಿಯ ಸಂಯೋಜನೆಯ ಪ್ರಯತ್ನವೊಂದೇ ಮೌಲಿಕವಾದ ಪರಿಹಾರವಾಗ ಬಲ್ಲುದು.

ಡಿ. ಆರ್. ನಾಗರಾಜ್ ಅವರ ಬೆಳವಣಿಗೆಯಲ್ಲಿ ಎರಡು ಮುಖ್ಯವಾದ ಹಂತಗಳನ್ನು ಗುರುತಿಸಬಹುದು. ಮೊದಲನೆಯದು, ಅವರು ಬಂಡಾಯ ಸಾಹಿತ್ಯದ ಅತಿ ಪ್ರಮುಖ ವಿಮರ್ಶಕರಾಗಿದ್ದು ಅದರ ಧೋರಣೆಗಳನ್ನು ಪ್ರತಿಪಾದಿಸುತ್ತಿದ್ದ ಹಂತ. ಎರಡನೆಯದು, ಬಂಡಾಯದ ಮೂಲನೆಲೆಯಾದ ಸಾಮಾಜಿಕ ಕಳಕಳಿಯನ್ನು ಉಳಿಸಿಕೊಂಡು, ಸಾಹಿತ್ಯಕೃತಿಯ ಅನನ್ಯತೆಯನ್ನು ಒಪ್ಪಿಕೊಂಡಿರುವ ಈಗಿನ ಹಂತ. ಈ ಸಂಕಲನದಲ್ಲಿ ಮೊದಲ ಗುಂಪಿಗೆ ಸೇರಿದ ಲೇಖನಗಳು ಕಡಿಮೆ. ಈ ಬಗೆಯ ವಿಕಸನಶೀಲತೆ ಮತ್ತು ವಿಕಾಸವಾಗಿರುವ ದಿಕ್ಕುಗಳು ಬಹಳ ಆರೋಗ್ಯಕರವೆಂದು ನನ್ನ ಅಭಿಪ್ರಾಯ. ಈ ಬರಹಗಳ ನಡುವೆ ಕಂಡು ಬರುವ ಪರಸ್ಪರ ವಿರೋಧಗಳನ್ನು ಸಂಕಲನದ ಹಂತದಲ್ಲಿ ತೆಗೆದುಹಾಕಬಹುದಿತ್ತೇನೋ. ಉದಾಹರಣೆಗೆ ಗಮನಿಸಿ :

1. "ಸಮಷ್ಟಿಯ ಜೀವನ ಕ್ರಮವನ್ನು ಅರ್ಥಪೂರ್ಣವಾಗಿ ಅದರ ಎಲ್ಲ ಬಣ್ಣ, ದುಕ್ಕದುಮ್ಮಾನದೊಂದಿಗೆ ಬರೆಯಬಲ್ಲ ಇತರ ಶಕ್ತಿಶಾಲೀ ಬರಹಗಾರರು ಶ್ರೀಕೃಷ್ಣ ಆಲನಹಳ್ಳಿ, ಡಾ॥ ಬೆಸಗರಹಳ್ಳಿ ರಾಮಣ್ಣ, ಬರಗೂರು ರಾಮಚಂದ್ರಪ್ಪ. ಈ ಬರಹಗಾರರಲ್ಲಿ ಚಾರಿತ್ರಿಕವಾಗಿ ಅನಿವಾರ್ಯವಾದ ಹೊಸ ಅಭಿವ್ಯಕ್ತಿಗಳು ರೂಪುಗೊಳ್ಳುತ್ತವೆ" (ಪುಟ 47 ; 1975)

2. ...ತಾತ್ವಿಕ ನಿಲುವು ಅನುಕೂಲಕರವಾಗಿದ್ದೂ ವಸ್ತುವಿನ ಎಲ್ಲ ಮೂಲೆಗಳ ಶೋಧನೆ ಸಾಧ್ಯವಾಗದೇ ಹೋಗಿ ಪೇಲವ ಕೃತಿಗಳು ಹುಟ್ಟಿದ ಕಥೆ. ಎರಡನೆಯದು ತಾತ್ವಿಕ ನಿಲುವು ಬಿನ್ನವಾಗಿದ್ದರೂ ಅನನ್ಯ ರೀತಿಯಲ್ಲಿ ಸತ್ಯಾನ್ವೇಷಣೆಯಾಗಿ ಎತ್ತರದ ಸಾಹಿತ್ಯಕೃತಿಗಳು ಹುಟ್ಟಿದ ಕಥೆ...ಜೀವವೇ ಇಲ್ಲದ ಕಾರ್ಡ್‌ಬೋರ್ಡ್ ಪಾತ್ರಗಳ ಬರಗೂರು ರಾಮಚಂದ್ರಪ್ಪನವರ ಪಾತ್ರಗಳು ಮೊದಲನೆಯದಕ್ಕೆ ಸಮರ್ಥ ಉದಾಹರಣೆ. ಎರಡನೆಯದಕ್ಕೆ ಕುವೆಂಪು, ಕಾರಂತ, ತೇಜಸ್ವಿ, ಲಂಕೇಶ್, ಅನಂತಮೂರ್ತಿ ಮುಂತಾದ ಮಹತ್ವದ ಲೇಖಕರ ಸಾಲೇ ಇದೆ. (ಪುಟ 10; 1981) ಒಬ್ಬ ವಿಮರ್ಶಕನು ಅತ್ಯಲ್ಪ ಅವಧಿಯಲ್ಲೇ, ತನ್ನ ಆಲೋಚನೆಗಳ ಪರಿಧಿಯನ್ನು ಹೀಗೆ ವಿಸ್ತರಿಸಿಕೊಳ್ಳುತ್ತಾ ಹೋಗುವುದು ಆರೋಗ್ಯಕರವೆಂದು ನನಗೆ ತೋರುತ್ತದೆ.

ನಾಗರಾಜ್ ಅವರ ಪ್ರತಿಭೆಯ ಮೂಲಗುಣವೆಂದರೆ ಸಾಹಿತ್ಯದ ಸಮಸ್ಯೆಯೊಂದರ, ಸಾಹಿತ್ಯೇತರ ಆಯಾಮಗಳೆಲ್ಲವನ್ನೂ ಒಂದೇ ಏಟಿಗೆ ಗ್ರಹಿಸಿ, ಆ ಗ್ರಹಿಕೆಯ ಆಧಾರದ ಮೇಲೆ ಮಹತ್ವದ, ಸ್ವಂತದ ಒಳನೋಟಗಳನ್ನು ಕೊಡುವ ಶಕ್ತಿ. ಅವರ ಎಲ್ಲ ಲೇಖನಗಳ ಹಿನ್ನೆಲೆಯಲ್ಲಿಯೂ ವ್ಯಾಪಿಸಿರುವುದು ಸಾಹಿತ್ಯದ ಸಾಂಸ್ಕೃತಿಕ ಮಹತ್ವ ಮತ್ತು ಜೀವಂತತೆಗಳನ್ನು ಕೇಂದ್ರವಾಗಿಟ್ಟುಕೊಂಡ ವೈಚಾರಿಕತೆ. ಸಾಹಿತ್ಯ ಸೃಷ್ಟಿಯ ಹಿಂದಿರುವ ಪ್ರೇರಣೆಗಳನ್ನು ರೂಪಿಸಿಕೊಡುವಾಗ, ಸೃಷ್ಟಿಕ್ರಿಯೆಯ ಐತಿಹಾಸಿಕ, ಸಾಮೂಹಿಕ ಮೂಲಗಳನ್ನು ಅವರು ಅನಾವರಣ ಮಾಡುತ್ತಾರೆ. ಈ ಕೆಲಸ, ಈ ಪ್ರಮಾಣದಲ್ಲಿ ಇದುವರೆಗೆ ನಡೆದಿರಲಿಲ್ಲ. ಇಲ್ಲಿ ಸಾಹಿತ್ಯಸೃಷ್ಟಿ ಮತ್ತು ಸಾಮಾಜಿಕ ವಾಸ್ತವತೆಗಳ ನಡುವಿನ ಸಂಬಂಧಕ್ಕೆ ದೊರೆತಿರುವ ಮಹತ್ವವು ಸಾಹಿತ್ಯದ ಸಂವಹನದ ಪ್ರಕ್ರಿಯೆಗೆ ದೊರೆತಿಲ್ಲವೆನ್ನುವುದು ಗಮನಿಸಬೇಕಾದ ಅಂಶ.

ಇನ್ನು ಮುಂದೆ ಈ ಗ್ರಂಥದ ಕೆಲವು ಲೇಖನಗಳನ್ನಾದರೂ ಸಂಕ್ಷಿಪ್ತವಾಗಿ ಪರಿಶೀಲಿಸಬಹುದು.

ಸಾಹಿತ್ಯ ಮತ್ತು ತತ್ವಜ್ಞಾನಗಳ ನಡುವೆ ಇರುವ ಸಂಬಂಧವನ್ನು ಪರಿಶೀಲಿಸುವ ಮೊದಲ ಲೇಖನ ಕೇವಲ ವಿವರಣೆಗಳ ನಿರೂಪಣೆಯಿಂದ ತೃಪ್ತವಾಗದೆ, ಸ್ವಂತ ತೀರ್ಮಾನಗಳನ್ನು ಹೇಳುತ್ತದೆ. ಆಕೃತಿಯ ಒಡಲಿನಿಂದಲೇ ತತ್ವವು ರೂಪಿತವಾಗುವ ಬಗೆ ತಮಗೆ ಸಮ್ಮತವೆನ್ನುತ್ತಾರೆ. "ಆದ್ದರಿಂದ ವಸ್ತುವಿನ ತರ್ಕ ಮತ್ತು ಆಕೃತಿಯ ನಿರ್ಮಾಣ ಇವೆರಡರ ನಡುವೆ ಅತ್ಯಂತ ಸೂಕ್ಷ್ಮ ಸಂಬಂಧವಿದ್ದು, ಲೇಖಕನ ಸಾಂದ್ರತೆ, ಶಕ್ತಿಗೆ ತಕ್ಕಂತೆ ಆಕೃತಿ ರೂಪು ತಳೆಯುತ್ತಾ ಹೋಗುತ್ತದೆ. ಆದ್ದರಿಂದ ಅಂತಿಮವಾಗಿ ಸಾಹಿತ್ಯಕೃತಿಯೊಂದರ ಆಕೃತಿಯೇ ಎಲ್ಲ ಚಾರಿತ್ರಿಕ, ರಾಜಕೀಯ ಸ್ಥಿತಿಗಳ ಘನೀಕೃತ ರೂಪವಾಗಿರುತ್ತದೆ. ಆದ್ದರಿಂದ ಆಕೃತಿಯಲ್ಲಿ ತನ್ನೆಲ್ಲ ಗಾಢಸಿದ್ಧತೆಯೊಂದಿಗೆ ತೊಡಗಿಕೊಳ್ಳುವ ವಿಮರ್ಶಕ ಆಳದಲ್ಲಿ ಸಾಮಾಜಿಕ, ರಾಜಕೀಯ ವಿಮರ್ಶಕನೂ ಆಗಿರುತ್ತಾನೆ". (ಪುಟ 12)

ಈ ಮಾತುಗಳನ್ನೆಲ್ಲ ಒಪ್ಪಬಹುದು. ಆದರೆ 'ಆಕೃತಿ' ಎನ್ನುವ ಪಾರಿಭಾಷಿಕ ಪದವನ್ನು ಇವರು ಅರ್ಥೈಸುವ ಬಗೆ ಹೇಗೆನ್ನುವುದು ಸ್ಪಷ್ಟವಾಗುವುದಿಲ್ಲ. ಅದು ನಿರ್ದಿಷ್ಟ ಸಾಹಿತ್ಯಪ್ರಕಾರದ ಅಂತರ್ನಿಯಮಗಳ ಪರಿಪಾಲನೆ ಮತ್ತು ವಿಸ್ತರಣೆಗಳ ಮೂಲಕ ರೂಪಿತವಾಗುವ ನಿರ್ದಿಷ್ಟ ಸಾಹಿತ್ಯಕೃತಿಯ ಭಾಷಿಕ ರೂಪವೇ ಅಥವಾ ಸಾಂಸ್ಕೃತಿಕ ಒತ್ತಡಗಳ ಮೂಲಕ ಸಾಹಿತ್ಯಕೃತಿಗಳ ಒಟ್ಟು ಸ್ವರೂಪದಲ್ಲಿ ಆಗುವ ಪರಿವರ್ತನೆಯ ಫಲವೇ ? ಉತ್ತರ ಸ್ಪಷ್ಟವಾಗುವುದಿಲ್ಲ. ನಾಗರಾಜರ ಪ್ರಾಯೋಗಿಕ ವಿಮರ್ಶೆಯಲ್ಲಿ ಈ ಪ್ರಶ್ನೆಗೆ ದೊರೆಯುವ ಉತ್ತರಗಳು ಅಸ್ಪಷ್ಟ.

ಕುವೆಂಪು, ಕಾರಂತ ಮತ್ತು ಮಾಸ್ತಿಯವರನ್ನು ಕುರಿತ ಲೇಖನಗಳು ಈ ಸಂಕಲನದ ಮಹತ್ವದ ಭಾಗವಾಗಿದ್ದು ಆಧುನಿಕ ಕನ್ನಡ ವಿಮರ್ಶೆಗೆ ಅನನ್ಯ ಕಾಣಿಕೆ ನೀಡಿವೆ. ಮೂರೂ ಲೇಖನಗಳು ಸಾಹಿತ್ಯಕೃತಿಯೊಂದರೊಂದಿಗೆ ನೇರ ವಾದ ಮುಖಾಮುಖಿ ನಡೆಸದೆ, ಮಹತ್ವದ ಸಾಹಿತಿಗಳ ಬರವಣಿಗೆಯ ಬೇರೆಬೇರೆ ಆಯಾಮಗಳನ್ನು ಪರಿಶೀಲಿಸಹೊರಡುತ್ತವೆ. "ವಸಾಹತುಗಳ ಸ್ವಾತಂತ್ರ್ಯ ಹೋರಾಟದ ಸಂದರ್ಭಗಳಲ್ಲಿ ತಮ್ಮ ಸೃಜನಶೀಲ ಜೀವನ ಪ್ರಾರಂಭಿಸಿದ" ಹಿರಿಯ ಸಾಹಿತಿಗಳ ಬದುಕು-ಬರೆಹಗಳ ನಡುವಿನ ಎಳೆಗಳನ್ನು ನಿರ್ಭೀತವಾಗಿ ಹುಡುಕ ಹೊರಡುವುದು ಇಲ್ಲಿನ ಉದ್ದೇಶ.

ಕುವೆಂಪುರವರ ಕೃತಿಗಳಲ್ಲಿ ಬ್ರಾಹ್ಮಣೇತರ ಎಂಬ ಸಂಘರ್ಷ ಮುಖ್ಯ ವಾಯಿತೇ ವಿನಾ, "ಜಾತಿಪದ್ಧತಿಯ ಎಲ್ಲ ನೆಲೆಗಳ, ಎಲ್ಲ ಆಯಾಮಗಳ ವಿರುದ್ಧ ಕುವೆಂಪು ಬಂಡಾಯವೆದ್ದಿಲ್ಲ" ಎಂಬ ತೀರ್ಮಾನವನ್ನು ತಲುಪುವ ನಾಗರಾಜ್ ಅವರು, "ಅವರ ಯಾವ ಕೃತಿಗಳನ್ನು ನಾವು ಜಾತಿಪದ್ಧತಿಯ ವಿರುದ್ಧ ಬಂಡಾಯದ ಕೃತಿಗಳು ಎಂದು ಕರೆಯುತ್ತೇವೆಯೋ ಆ ಕೃತಿಗಳಲ್ಲಿಯೇ ಆಳವಾದ ಹಿಂದೂಮನ ಸ್ಸನ್ನು ಕಾಣುತ್ತೇವೆ". ಎನ್ನುತ್ತಾರೆ. ಇಷ್ಟಕ್ಕೆ ನಿಲ್ಲದೆ, ಕುವೆಂಪುರವರ ಧೋರಣೆಯನ್ನು ಹಳೆಯ ಮೈಸೂರಿನ ಬ್ರಾಹ್ಮಣೇತರ ಚಳುವಳಿಯ "ಸಾಮಾಜಿಕ ಅನುಭವ"ದ ಹಿನ್ನೆಲೆಯಲ್ಲಿ ವಿವರಿಸುತ್ತಾರೆ, ಇದೆಲ್ಲ ತರ್ಕಬದ್ಧವಾದರೂ "ಹಿಂದೂಧರ್ಮದ ಸಂವಿಧಾನದ ಚೌಕಟ್ಟಿನಲ್ಲೇ ಒಳಗಿನ ಬಂಡಾಯಗಾರರಾಗಿ" ಕುವೆಂಪು ಉಳಿದರೆಂಬ ಸತ್ಯವನ್ನೂ ಲೇಖಕರು ಮರೆಯುವುದಿಲ್ಲ. ಹಾಗೆಯೇ ಕುವೆಂಪುರವರ ಕಾದಂಬರಿಗಳಲ್ಲಿ ಸಂಘಟಿತವಾದ ವರ್ಗಪ್ರಜ್ಞೆ ಇರದಿದ್ದರೂ, "ಭೂಮಾಲಿಕರ ಮತ್ತು ಕೆಳವರ್ಗದವರ ನಡುವಿನ ಘರ್ಷಣೆ", "ಅಶಾಂತಿಯ, ಮೌನ ಸಂಘರ್ಷದ ಜ್ವಾಲಾಮುಖಿಗಳು" ಸ್ಪಷ್ಟವಾಗಿ ಧ್ವನಿತವಾಗಿರುವುದನ್ನು ಗುರುತಿಸು ತ್ತಾರೆ. ಮಾನವತಾವಾದದ ಕೇಂದ್ರಕಾಳಜಿಗಳು ಕುವೆಂಪುರವರ ಕಾಳಜಿಗಳೂ ಹೌದೆಂಬುದನ್ನು ತೋರಿಸಿಕೊಡುತ್ತಾರೆ.

"ಕನ್ನಡ ಕಾದಂಬರಿ ಪರಂಪರೆ ಮತ್ತು ಕಾರಂತರು" ಎಂಬ ಲೇಖನವು, ಕಾರಂತರನ್ನು ವಿಶ್ಲೇಷಣಾತ್ಮಕ ವಾಸ್ತವತಾವಾದಿಯಾಗಿ (Critical realist) ಆಗಿ ಗುರುತಿಸುತ್ತದೆ; ಕಾರಂತರ ಬಗ್ಗೆ ನಾಗರಾಜರು ವ್ಯಕ್ತಪಡಿಸುವ ಅಭಿ ಪ್ರಾಯಗಳಲ್ಲಿ ಸ್ವಲ್ಪ ಬೀಸುಮಾತುಗಳನ್ನು ಕಾಣಬಹುದು.

"ಹೀಗಾಗಿ ಕಾರಂತರ ಭವಿಷ್ಯದರ್ಶಿ ಪ್ರತಿಭೆ ಮುಂದೆ ನಮ್ಮ ರಾಷ್ಟ್ರಜೀವನ ಕಂಡ ದುರಂತಗಳನ್ನೆಲ್ಲ ಕಂಡರಿಸತೊಡಗಿತ್ತು. ತನ್ಮಯತೆಯ ಬದಲಾಗಿ ಸಂದೇಹ, ಸಂಭ್ರಮತೆಯ ಬದಲಾಗಿ ಸಿನಿಕತೆ ಕಾರಂತರ ಸಾಮಾಜಿಕದರ್ಶನದಲ್ಲಿ ದಟ್ಟವಾಗ

ತೊಡಗಿತ್ತು. ನಮ್ಮ ರಾಜಕಾರಣಿಗಳ ಭ್ರಷ್ಟತೆ, ತತ್ವಹೀನ ರಾಜಕಾರಣ, ಅಭದ್ರ ವ್ಯಕ್ತಿತ್ವಗಳಿಗೆ ಕಾರಂತರು ರಾಹುಗನ್ನಡಿ ಹಿಡಿದು ತೋರಿಸತೊಡಗಿದ್ದರು. ಹೊಸ ಸಂಭ್ರಮದ ಒಳಗೆ ಮೊಳೆಯುತೊಡಗಿದ್ದ ರೋಗಗ್ರಸ್ತಜಂತುಗಳು ಅವರಿಗೆ ಕಾಣ ತೊಡಗಿತ್ತು". (ಪುಟ 28 ; 1982).

ಈ ಮಾತುಗಳನ್ನು ಒಪ್ಪಿಕೊಂಡರೆ, ಸ್ವಾತಂತ್ರ್ಯೋತ್ತರ ಬದುಕನ್ನು ಚಿತ್ರಿಸುವ ಕಾದಂಬರಿಗಳಲ್ಲಿ, "1947 ರಿಂದೀಚಿನ ರಾಜಕೀಯ ಸಾಮಾಜಿಕ ಜೀವನ, ಜಾತಿ, ವರ್ಗ, ಪ್ರಭುತ್ವ ಮುಂತಾದವುಗಳ ಸೂಕ್ಷ್ಮ ಬೆಳವಣಿಗೆಗಳ ವಾಸ್ತವ ಗ್ರಹಿಕೆಯನ್ನು" (ಪುಟ 11; 1981) ಕಾಣಲಾಗುವುದಿಲ್ಲವೆಂಬ ಮಾತನ್ನು ಹೇಗೆ ಅರ್ಥಮಾಡಿಕೊಳ್ಳಬೇಕು ? ಇಲ್ಲಿ ದೋಷ ಇರುವುದು ವಿಚಾರದಲ್ಲಿ ಅಲ್ಲ ಅದರ ಮಂಡನೆಯ ಬಗೆಯಲ್ಲಿ.

ಕಾರಂತರ ಸಾಧನೆ ಮತ್ತು ಪರಿಮಿತಿಗಳೆರಡನ್ನೂ ಬಹಳ ಸಮರ್ಥವಾಗಿ ಆದರೆ ಸಂಕ್ಷಿಪ್ತವಾಗಿ ಸೂಚಿಸಿ ಸುಮ್ಮನಾಗುವ ಈ ಲೇಖನವು ಇನ್ನಷ್ಟು ವಿವರವಾಗಿ ಇರಬೇಕಿತ್ತೆಂಬ ಕೊರಗು ಓದುಗರ ಮನಸ್ಸಿನಲ್ಲಿ ಉಳಿಯುತ್ತದೆ.

ಮಾಸ್ತಿಯವರನ್ನು ಕುರಿತ ಲೇಖನವು, ಈ ಪುಸ್ತಕದ ಉತ್ತಮ ಲೇಖನಗಳಲ್ಲಿ ಒಂದು. ಅವರ ಸೃಜನೇತರ ಬರಹಗಳಲ್ಲಿ ಸ್ಪಷ್ಟವಾಗಿಯೇ ವ್ಯಕ್ತವಾಗುವ ಸಂಪ್ರದಾಯವಾದೀ ನಿಲುವುಗಳನ್ನು, ಸೃಜನಶೀಲ ಕೃತಿಗಳಲ್ಲಿಯೂ ಹುಡುಕುವ ಕೆಲಸವನ್ನು ಈ ಲೇಖನ ಯಶಸ್ವಿಯಾಗಿ ನಿರ್ವಹಿಸಿದೆ. ಹಾಗಾಗಲು ಇರುವ ಕಾರಣಗಳನ್ನು ಮಾಸ್ತಿಯವರ ಸಾಂಸ್ಕೃತಿಕ ಹಿನ್ನೆಲೆಯಲ್ಲಿ ಹುಡುಕುವ ಲೇಖಕರು, ಹಾಗಾಗಿದೆಯೆನ್ನುವುದನ್ನು ಮಾಸ್ತಿಯವರ ಕಥೆಗಳ ವಿಶ್ಲೇಷಣೆಯಿಂದ ತೋರಿಸಿ ಕೊಟ್ಟಿದ್ದಾರೆ.

ಜಾನಪದ ಸಾಹಿತ್ಯವನ್ನು ಕುರಿತ ಲೇಖನಗಳೆರಡೂ ಆಯಾ ವಿಷಯಗಳ ಬಗ್ಗೆ ಕೆಲವು ಮಹತ್ವದ ಒಳನೋಟಗಳನ್ನು ನೀಡುತ್ತವೆ.

ನಾಟಕಗಳ ರಂಗ ಪ್ರಯೋಗಗಳ ವಿಮರ್ಶೆಯಾಗಿ ಬರೆದಿರುವ ಮೂರು ನಾಟಕಗಳು ಕೇವಲ ಆ ಪ್ರಯೋಗದ ವಿಮರ್ಶೆಯಾಗಿ ಉಳಿಯದೆ, ನಾಟಕ, ರಂಗಭೂಮಿ ಮತ್ತು ಸಾಹಿತ್ಯದ ಬಗ್ಗೆ ಮಹತ್ವದ ಮಾತುಗಳನ್ನು ಹೇಳುವುದರಿಂದ ಇಲ್ಲಿ ಅವುಗಳ ಆಯ್ಕೆಯು ಸಮರ್ಥನೀಯವಾಗಿದೆ.

ಕಾವ್ಯಕ್ಕೆ ಸಂಬಂಧಪಟ್ಟ ಹಾಗೆ ಈ ಗ್ರಂಥದಲ್ಲಿ ಎರಡು ಲೇಖನಗಳಿವೆ. ಜಿ ಎಸ್. ಶಿವರುದ್ರಪ್ಪನವರ ಕಾವ್ಯದ ವಿವಿಧಹಂತಗಳನ್ನು ಗುರುತಿಸುವ ಲೇಖನವು ಕಾವ್ಯ ಶೋಧನೆಯ ಬಗೆಗೆ ಮಾದರಿಯಾಗಿದೆ. ಕನ್ನಡದಲ್ಲಿ ಇನ್ನೂ

ಹುಟ್ಟಬೇಕಾಗಿರುವ ಕ್ರಾಂತಿಕಾರೀ ರೊಮ್ಯಾಂಟಿಕ್ ಕಾವ್ಯವನ್ನು ರಚಿಸಲು ಅಗತ್ಯವಾದ ಪೂರ್ವ ಸಿದ್ಧತೆಗಳೆಲ್ಲ ಶಿವರುದ್ರಪ್ಪನವರಿಗೆ ಇದೆಯೆಂದು ಹೇಳುವ ಡಿ. ಆರ್. ನಾಗರಾಜ್, ಕನ್ನಡ ಕಾವ್ಯ ಹಿಡಿಯಬಹುದಾದ ಹೊಸ ಹಾದಿಯೊಂದನ್ನು ಸೂಚಿಸಿದ್ದಾರೆ.

'ಇತ್ತೀಚಿನ ಕಾವ್ಯ' ಎಂಬ ಲೇಖನವು ಇಪ್ಪತ್ತಾರು ಕವನ ಸಂಕಲನಗಳ ಸ್ಥೂಲ ವಿಮರ್ಶೆ. ಇವುಗಳನ್ನು ಬರೆದಿದ್ದು ಆರು ವರ್ಷಗಳ ಅವಧಿಯಲ್ಲಿ. ಬೇಂದ್ರೆ, ಅಡಿಗ, ಕಣವಿ, ಜಿ.ಎಸ್.ಎಸ್., ನಿಸಾರ್, ಕಂಬಾರ, ವೆಂಕಟೇಶ ಮೂರ್ತಿ, ಶಿವಪ್ರಕಾಶ್, ಸಿದ್ದಲಿಂಗಯ್ಯ ಹೀಗೆಯೇ ಹಲವು ಮಹತ್ವದ ಕವಿಗಳು ಇಲ್ಲಿ ಚರ್ಚಿತರಾಗಿದ್ದಾರೆ. ಈ ಚರ್ಚೆಗೆ ಹಿನ್ನೆಲೆಯಾಗಿ ಕಾವ್ಯವನ್ನು ಕುರಿತ ಕೆಲವು ಮಹತ್ವದ ಮಾತುಗಳಿವೆ. ಇವುಗಳನ್ನು ಸಂಗ್ರಹಿಸಿ ಹೇಳುವುದು ಸಾಧ್ಯವೇ ಇಲ್ಲವಾದ್ದರಿಂದ, ಆ ಭಾಗವನ್ನು ಪ್ರತಿಯೊಬ್ಬ ಕಾವ್ಯಾಸಕ್ತನೂ ಓದಲೇಬೇಕೆಂದು ಮಾತ್ರ ಇಲ್ಲಿ ಸೂಚಿಸಬಹುದು. ಚರ್ಚಿಸಲಾಗಿರುವ ಪ್ರತಿಯೊಬ್ಬ ಕವಿಯನ್ನು ಕುರಿತೂ ಇಲ್ಲಿ ಮುಖ್ಯವಾದ ಒಳನೋಟಗಳಿವೆ. ಸಾಮಾನ್ಯ ವಿಮರ್ಶಕನೊಬ್ಬ ಹತ್ತು ಪುಟಗಳಲ್ಲಿ ಹೇಳದೆ ಇರುವುದನ್ನು ಇಲ್ಲಿನ ಒಂದು ವಾಕ್ಯವು ಹೇಳುತ್ತದೆ.

ಈ ಸಂಕಲನದ ಪ್ರಾಯೋಗಿಕ ವಿಮರ್ಶೆಗಳನ್ನು ನಾನು ಅತ್ಯಂತ ಆಸಕ್ತಿಯಿಂದ ಓದಿದ್ದೇನೆ. ಏಕೆಂದರೆ ಸಾಹಿತ್ಯದ ಆಕೃತಿಯ ಮಹತ್ವದ ಬಗ್ಗೆ ಇವರು ಹೇಳುವ ಮಾತುಗಳ ಅಗ್ನಿಪರೀಕ್ಷೆಯಾಗುವುದು ಅಲ್ಲಿಯೇ. ಕವನದ ಆಳದಲ್ಲಿ ಹುದುಗಿರುವ ಸಂಗತಿಗಳನ್ನು ಪ್ರತಿಭೆಯ ಬಲದಿಂದ ಗ್ರಹಿಸಿ ಅನಾವರಣ ಮಾಡುವ ಪರಿ ಒಂದು. ಕವನದ ಘಟಕಗಳನ್ನು ಬಿಡಿ ಬಿಡಿಯಾಗಿ ಪರಿಶೀಲಿಸಿ ಅವುಗಳ ನಡುವಿನ ಸಂಬಂಧಗಳ ಅಧ್ಯಯನದಿಂದಲೇ ಕವನವನ್ನು ಅರ್ಥೈಸುವ ಪರಿ ಮತ್ತೊಂದು. "ದೊಡ್ಡ ಕಲೆಯ ಅರ್ಥ ಬಿಚ್ಚಿಕೊಳ್ಳುವುದು ನಿರ್ದಿಷ್ಟ ಸಂಸ್ಕೃತಿಯ ಬಿಕ್ಕಟ್ಟಿನಲ್ಲೇ" ಎಂದು ನಂಬುವ ಲೇಖಕರು ಮೇಲೆ ಹೇಳಿದ ಎರಡು ಮಾರ್ಗಗಳನ್ನು ತಮ್ಮದಾಗಿಸಿಕೊಂಡು ಪ್ರಾಯೋಗಿಕ ವಿಮರ್ಶೆಯಲ್ಲಿ ತೊಡಗಿದ್ದಾರೆ. ಮೂರೂ ಕವನಗಳ ಭಾಷಿಕ ಶರೀರಕ್ಕೆ ಇನ್ನಷ್ಟು ಮಹತ್ವಕೊಡಬಹುದಿತ್ತು. ಅಗತ್ಯವೆನಿಸಿದ ವಿವರಗಳನ್ನು ಕೊಟ್ಟು, ತಮ್ಮ ವ್ಯಾಖ್ಯಾನದ ಧಾಟಿಗೆ ಹೊಂದಿಕೊಳ್ಳದ ವಿವರಗಳನ್ನು ನಿರ್ಲಕ್ಷಿಸುವ ಧೋರಣೆ ವಿರಳವಾಗಿ ಕಂಡುಬರುತ್ತದೆ. ಆದರೂ ವಿಮರ್ಶಕರು ಒದಗಿಸಿರುವ ಒಳನೋಟಗಳು ಅಮೂಲ್ಯವಾದವು.

ಇದುವರೆಗೆ ಹೇಳಿರುವ ಮಾತುಗಳಿಂದ ಈ ಸಂಕಲನದ ಮಹತ್ವವು ಸ್ಪಷ್ಟವಾಗಿರಬೇಕು. ಇನ್ನು ಮುಂದೆ ನನಗೆ ಮೂಡಿರುವ ಅನುಮಾನಗಳನ್ನು ಮಂಡಿಸುತ್ತೇನೆ.

1) ಸಾಹಿತ್ಯ ಕೃತಿಯು, ಬಂಧ ಅಥವಾ ಆಕೃತಿಯ ಬಗ್ಗೆ ತೋರಿಸುವ ಗಾಢವಾದ ಆಸಕ್ತಿ, ಡಿ. ಆರ್. ಎನ್. ಅವರ ಘೋಷಿತ ನಿಲುವು. ಆದರೆ ಅವರ ಬಹುಪಾಲು ಲೇಖನಗಳು ಕಥೆ, ಕಾದಂಬರಿ ಅಥವಾ ಕವಿತೆಯ ಆಕೃತಿಯ ಸಂಗಡ ಇಂತಹ ಮುಖಾಮುಖಿಯನ್ನು ನಡೆಸುವುದಿಲ್ಲ. ಆ ಕೃತಿಗಳ ಬಗ್ಗೆ ಅವರು ತಲುಪುವ ತೀರ್ಮಾನಗಳು ಎಷ್ಟೇ ಮೌಲಿಕವಾಗಿದ್ದರೂ, ಅವು ಕೃತಿಯ ಬಂಧದಿಂದಲೇ ಮೂಡಿವೆಯೆನ್ನುವುದಕ್ಕೆ ಪುರಾವೆಗಳು ದೊರೆಯುವುದಿಲ್ಲ. ಕವಿತೆ ಮತ್ತು ಕಥಾ ಸಾಹಿತ್ಯದ, ರಾಚನಿಕ ವಿಶ್ಲೇಷಣೆಗೆ ಅಗತ್ಯವಾದ ಶಾಸ್ತ್ರಜ್ಞಾನವನ್ನು ಸಂಪಾದಿಸಿಕೊಳ್ಳಲು ಡಿ ಆರ್. ಎನ್. ಅವರು ಪ್ರಯತ್ನಿಸದಿರುವುದು ಇದಕ್ಕೆ ಕಾರಣವೆಂದು ನನಗೆ ತೋರುತ್ತದೆ. ಶೈಲಿಶಾಸ್ತ್ರ, ಛಂದಸ್ಸು, ಕಾವ್ಯಮೀಮಾಂಸೆಗಳ ತಿಳಿವಳಿಕೆಯು ಅವರು ಪರಿಪೂರ್ಣ ವಿಮರ್ಶಕರಾಗಿ ಮಾಡಬಲ್ಲದು. ಇದು ಅವರ ಆಸಕ್ತಿಯ ಪರಿಮಿತಿಯೇ ಹೊರತು ಸಾಮರ್ಥ್ಯದ ಪರಿಮಿತಿಯಲ್ಲ. ಸಾಹಿತ್ಯ ಕೃತಿಯ ಅನನ್ಯತೆಯು ಕೊನೆಗೂ ತೀರ್ಮಾನವಾಗುವುದು ಭಾಷೆಯ ವಿಶೇಷ ಉಪಯೋಗ ಮತ್ತು ಅನುಭವದ ಪುನಸ್ಸಂಯೋಜನೆಯಿಂದಲೇ ಅಲ್ಲವೆ ?

2) ಕನ್ನಡ ವಿಮರ್ಶೆಗೆ ತನ್ನದೇ ಆದ ಒಂದು ಪರಂಪರೆಯಿದೆಯೆಂಬ ಸಂಗತಿಯನ್ನು ಇನ್ನಷ್ಟು ಜಾಗರೂಕತೆಯಿಂದ ಗಮನಿಸಬಹುದಾಗಿತ್ತು. ಡಿ.ಆರ್.ಎನ್. ಅವರ ಪ್ರತಿಭೆಯು ಪ್ರತಿಯೊಂದು ಸಂಗತಿಯನ್ನೂ ಹೊಸದೃಷ್ಟಿಕೋನದಿಂದಲೇ ನೋಡುವ ಶಕ್ತಿ ಹೊಂದಿರಬಹುದು. ಆದರೆ ಇದೇ ಗ್ರಂಥದಲ್ಲಿ ಇತರರ ವಿಮರ್ಶೆಯ ಪ್ರಸ್ತಾಪ ಇಲ್ಲವೇ ಇಲ್ಲವೆನ್ನುವಷ್ಟು ಕಡಿಮೆಯೆಂಬುದನ್ನು ಗಮನಿಸಿದಾಗ, ಒಂದು ಬಗೆಯ ವಿಷಾದವಾಗುತ್ತದೆ. ಏಕೆಂದರೆ ಯಾವುದೇ ವಾಗ್ವಾದದ ಸಮರ್ಥ ಮುಂದುವರಿಕೆಯನ್ನು ನಡೆಸಲು ಕೇವಲ ಪಾಶ್ಚಾತ್ಯ ವಿಮರ್ಶಾಕೃತಿಗಳ ಅಧ್ಯಯನ ಸಾಕಾಗುವುದಿಲ್ಲ.

3) ಲೇಖಕರು ಪಾಶ್ಚಾತ್ಯ ವಿಮರ್ಶಕರು, ಸಾಹಿತ್ಯ ಕೃತಿಗಳು ಮತ್ತು ತತ್ವಶಾಸ್ತ್ರಜ್ಞರನ್ನು ಬಳಸಿಕೊಂಡಿರುವ ಬಗೆಯನ್ನು ಕುರಿತು ಒಂದೆರಡು ಮಾತುಗಳು. ಅವರ ಓದು ಮತ್ತು ಆಸಕ್ತಿಗಳ ವ್ಯಾಪ್ತಿಯು ಸೋಜಿಗ ಮೂಡಿಸುವಂತಹುದು. ಅವರು ಅದನ್ನು ಬಳಸಿಕೊಂಡಿರುವ ಬಗೆಯು ಎರಡು ರೀತಿಯದಾಗಿದೆ. ಕನ್ನಡದ ಸಂದರ್ಭಕ್ಕೆ ಅನ್ವಯವಾಗುವಂತಹ ನಿದರ್ಶನಗಳನ್ನು ಪಾಶ್ಚಾತ್ಯ ಸೃಜನಶೀಲ ಕೃತಿಗಳಿಂದ ತೆಗೆದುಕೊಡುವುದು. ಪಾಶ್ಚಾತ್ಯ ಚಿಂತಕರ ಅಭಿಪ್ರಾಯಗಳನ್ನು ಸ್ಪಷ್ಟವಾಗಿ ಉಲ್ಲೇಖಿಸಿ, ಅವನ್ನು ತನ್ನ ವಿಶ್ಲೇಷಣೆಗೆ ಬಳಸಿಕೊಳ್ಳುವುದು. ಕೆಲವು ಬಾರಿ ಪಾಶ್ಚಾತ್ಯರನ್ನು ಅಗತ್ಯವಿಲ್ಲದಿದ್ದರೂ ಎಳೆದು ತಂದಿರುವರೇನೋ ಎಂಬ ಭಾವನೆ ನಮ್ಮ ಮನಸ್ಸಿನಲ್ಲಿ ಮೂಡುತ್ತದೆ. ಅನ್ಯ ವಿಮರ್ಶಕನೊಬ್ಬನು ಬೇರೊಂದು ಸಂದರ್ಭದಲ್ಲಿ ಬಳಸಿಕೊಂಡಿರುವ ವಿಶ್ಲೇಷಣಾ

ವಿಧಾನವನ್ನು, ಅಲ್ಪ ಬದಲಾವಣೆಗಳೊಂದಿಗೆ ಕನ್ನಡ ಲೇಖಕರೊಬ್ಬರ ಬಗ್ಗೆ ಮಾತನಾಡುವಾಗ ಬಳಸಿಕೊಳ್ಳುವುದು. (ಮಾಸ್ತಿ ಮತ್ತು ಕಾರಂತರ ಬರವಣಿಗೆಯನ್ನು ಅಧ್ಯಯನ ಮಾಡುವಾಗ ಜಾರ್ಜ್ ಲುಕಾಚ್ಸ್‌ನ ಅಭಿಪ್ರಾಯಗಳನ್ನು ಬಳಸಿಕೊಳ್ಳುವುದು). ಪಾಂಡಿತ್ಯವು ರಕ್ತನಾಳಗಳಲ್ಲಿ ಹರಿಯುವ ಜೀವದ್ರವವಾಗದೆ ತೊಟ್ಟುಕೊಂಡ ಒಡವೆಯಾಗಬಾರದು.

3) ನಿಜವಾಗಿಯೂ ಮೌಲಿಕವಾದ ವಿಮರ್ಶೆಯು ಮೈದಳೆಯುವುದು ಪ್ರತಿಭೆ, ಪಾಂಡಿತ್ಯ ಮತ್ತು ಶಿಸ್ತುಗಳು ಸಂಯೋಗ ಹೊಂದಿದಾಗ. ಈ ಮೂರರಲ್ಲಿ ಅತಿ ಮುಖ್ಯವಾದ ಪ್ರತಿಭೆ ಡಿ. ಆರ್. ಎನ್. ಅವರಲ್ಲಿ ಹೇರಳವಾಗಿದೆ. ಅವರ ಆಸಕ್ತಿಯ ಕ್ಷೇತ್ರಗಳಲ್ಲಿ ಅಪಾರವಾದ ಪಾಂಡಿತ್ಯವೂ ಅವರಿಗಿದೆ. ಆದರೆ ಪ್ರತಿಭೆಗೆ ಸಹಜವಾದ ಅಸಹನೆಯ ಪರಿಣಾಮವಾಗಿಯೋ ಏನೊ, ಕ್ರಮಬದ್ಧತೆ ಮತ್ತು ಎಚ್ಚರಗಳ ಕೊರತೆಗಳು ಅಲ್ಲಲ್ಲಿ ಕಂಡುಬರುತ್ತವೆ. ವಿವರಗಳನ್ನು ಕುರಿತಾದ ನಿರ್ಲಕ್ಷ್ಯ, ಉಲ್ಲೇಖಗಳ ಮೂಲಗಳನ್ನು ನಿಖರವಾಗಿ ಸೂಚಿಸದಿರುವುದು ಮುಂತಾದ ಲೋಪಗಳನ್ನು ಸರಿಪಡಿಸಿಕೊಳ್ಳುವುದು ಅವರ ಬರವಣಿಗೆಯನ್ನು ಇನ್ನಷ್ಟು ಪ್ರಬುದ್ಧವಾಗಿಸಬಹುದು. ವಿಮರ್ಶಕನ ವಿಚಾರಗಳು ಸೃಜನಕ್ರಿಯೆಯ ಸ್ವರೂಪವನ್ನು ನಿರ್ದೇಶಿಸಬಹುದೆಂಬ ಅತಿ ಉತ್ಸಾಹದ ನಿಲುವುಗಳು ಅಲ್ಲಲ್ಲಿ ಹಣಿಕಿ ಹಾಕಿದರೂ ಒಟ್ಟಂದದಲ್ಲಿ ಸಾಹಿತ್ಯದ ಬಗ್ಗೆ ಅವರಿಗೆ ಪ್ರೀತಿ ಗೌರವಗಳಿವೆ.

4) ಇಂದು ಬರೆಯುತ್ತಿರುವ ವಿಮರ್ಶಕರಲ್ಲಿ ಅತ್ಯಂತ ಶಕ್ತಿಶಾಲಿಯಾದ, ಆಕರ್ಷಕವಾದ ಶೈಲಿ ಡಿ.ಆರ್.ಎನ್. ಅವರಿಗೆ ಸಿದ್ಧಿಸಿದೆ. ಅದು ಬಹುಬೇಗ ಕಾವ್ಯದ ಸ್ಪರ್ಶ ಪಡೆಯುತ್ತದೆ. ತಾವು ಪ್ರೀತಿಸುವ ಕವಿತೆಯ ಸಾಲುಗಳನ್ನು ವಿಮರ್ಶೆಯ ಭಾಷೆಯ ಭಾಗವಾಗಿ ಬಳಸಿಕೊಂಡಿರುವ ಬಗೆ ಅನನ್ಯವಾದುದು. ಅವರದು ಅಪಾರದರ್ಶಕವಾದ, ಓದುಗರ ಗಮನವನ್ನು ತನ್ನ ಕಡೆಗೆ ಸೆಳೆಯುವ ಶೈಲಿಯಾಗಿರುವುದರಿಂದ, ಅವರು ಮಾತುಗಾರಿಕೆಯ ಓಘಕೆ ಸಿಲುಕಿ, ತರ್ಕದ ದಾರಿ ತಪ್ಪದಂತೆ ಎಚ್ಚರವಹಿಸಬೇಕಾಗುತ್ತದೆ.

ಏನೇ ಆದರೂ, ಕನ್ನಡ ವಿಮರ್ಶಾಕ್ಷೇತ್ರವು ಅತ್ಯಂತ ಮಹತ್ವದ ಕಲಾವಿದನೊಬ್ಬನನ್ನು ಈ ಮೂಲಕ ಪಡೆದುಕೊಂಡಿದೆ. ಅನಂತಮೂರ್ತಿ ಮತ್ತು ಎಂ.ಜಿ.ಕೆ. ಯವರ ಮೊದಲ ವಿಮರ್ಶಾಕೃತಿಗಳ ನಂತರ, 'ಅಮೃತ ಮತ್ತು ಗರುಡ'ದ ಪ್ರಕಟಣೆಯೇ ಅತ್ಯಂತ ಮಹತ್ವದ ಘಟನೆ. ಇನ್ನೂ ಪುಸ್ತಕರೂಪದಲ್ಲಿ ಪ್ರಕಟವಾಗದ, ಕೆ. ವಿ. ನಾರಾಯಣರ ಬರವಣಿಗೆ ಮಾತ್ರ ಇದೇ ಪ್ರಮಾಣದ ಆಳ-ಅಗಲಗಳನ್ನು ಪಡೆದಿದೆಯೆನ್ನುವುದು ನನ್ನ ಅಭಿಪ್ರಾಯ. ನಾಗರಾಜ್ ಅವರ ಬರಲಿರುವ ಬರವಣಿಗೆಯು ಕನ್ನಡ ವಿಮರ್ಶೆಗೆ ಇನ್ನಷ್ಟು ಆಯಾಮಗಳನ್ನು ದೊರಕಿಸಿಕೊಡುವುದೆಂಬ ಆಶಾವಾದದೊಂದಿಗೆ ಮುಕ್ತಾಯ ಮಾಡಬಹುದು.

ಪ್ರತಿಪಾದನೆ: ಮನಜ

ಇದು ಮ. ನ. ಜವರಯ್ಯನವರ ಏಳು ವಿಮರ್ಶಾ ಲೇಖನಗಳ ಸಂಕಲನ. ಸಾಹಿತ್ಯ ಮತ್ತು ಸಮಾಜದ ನಡುವೆ ಇರಬಹುದಾದ ಸಂಬಂಧವನ್ನು ಕುರಿತಂತೆ ಹೊಸನಿಲುವುಗಳನ್ನು ಪ್ರಾಮಾಣಿಕವಾಗಿ ನಂಬಿರುವ ಇವರ ಬರವಣಿಗೆಯ ಸಾಕಷ್ಟು ಭಾಗ ಗಂಭೀರ ಗಮನಕ್ಕೆ ಅರ್ಹವಾಗಿದೆ. ಇಂಗ್ಲಿಷ್ ಭಾಷೆಯ ಅರಿವು ಮತ್ತು ಅಧ್ಯಯನ ಮಾತ್ರ ಒದಗಿಸಬಲ್ಲ ವಿಮರ್ಶಾಪರಿಕರ ಮತ್ತು ಸಿದ್ಧಾಂತಗಳಿಂದ ಇಂತಹ ವಿಮರ್ಶಕರು ವಂಚಿತರಾಗಿದ್ದಾರೆನ್ನುವುದೂ ಕೂಡ, ನಮ್ಮ ಸಾಮಾಜಿಕ ಸನ್ನಿವೇಶದಲ್ಲಿ ಅಂತರ್ಗತವಾಗಿರುವ ಕ್ರೌರ್ಯಕ್ಕೆ/ಅಸಮಾನತೆಗೆ ನಿದರ್ಶನವಾಗುತ್ತದೆ.

ಇಲ್ಲಿನ ನಾಲ್ಕು ಲೇಖನಗಳು ಪ್ರಾಚೀನ ಕನ್ನಡ ಸಾಹಿತ್ಯವನ್ನು ಕುರಿತಂತೆ ಇರುವುದು ಮಹತ್ವದ ಸಂಗತಿ. ಏಕೆಂದರೆ ವರ್ತಮಾನ ಸಂಮುಖವಾದ ಸದ್ಯದ ಧೋರಣೆಗಳು, ಹಳೆಯ ಸಾಹಿತ್ಯವನ್ನು ಓದಿ ಅರ್ಥಮಾಡಿಕೊಳ್ಳತೊಡಗುವುದು ಅಪರೂಪವಾಗಿದೆ.

ಕನಕದಾಸರನ್ನು ಕುರಿತ ಲೇಖನವು, ಅವರು ಅನುಭವಿಸಿರಬಹುದಾದ ಅವಮಾನ ಮತ್ತು ನೋವಿನ ಹಿನ್ನೆಲೆಯಲ್ಲಿ ಅವರ ಬರವಣಿಗೆಯ ಬೆಲೆಕಟ್ಟುವ ಸೂಕ್ತ ಕೆಲಸವನ್ನು ಮಾಡುತ್ತದೆ. ಅವರು ಮಾಧ್ವರೋ ಎನ್ನುವಂತಹ ಚರ್ಚೆಯ ಬಾಲಿಶತೆಯನ್ನು ಬಯಲಿಗೆಳೆಯುತ್ತದೆ. ಇತರ ಜಾತಿಗಳಿಂದ ಬಂದ ಸಂತರನ್ನು ಕುರಿತಂತೆ ವಚನಕಾರರ ಮತ್ತು ಹರಿದಾಸರ ಧೋರಣೆಗಳ ನಡುವಿನ ವ್ಯತ್ಯಾಸ ಮತ್ತು ಪರಿಣಾಮವನ್ನು ಚೆನ್ನಾಗಿ ಗುರುತಿಸಲಾಗಿದೆ. ಆದರೆ 'ಕನಕದಾಸ ಕಂಡ ಸಮಾಜ' ಎಂಬ ಹೆಸರು ಲೇಖನದಲ್ಲಿ ಸಾರ್ಥಕವಾಗುವುದಿಲ್ಲ.

ಕನ್ನಡ ಕಾದಂಬರಿ ಕಂಡಿರುವ ಹರಿಜನ ಸಮಾಜದ ಸ್ವರೂಪವನ್ನು ಗುರುತಿಸಲೆಂದು ಐದುಜನ ಕಾದಂಬರಿಕಾರರನ್ನು ಆರಿಸಿಕೊಂಡಿದ್ದಾರೆ. ಕೆಲವರ ಬಗೆಗಿನ ಮಾತುಗಳು ಮತ್ತು ನಿರೂಪಣೆಯ ಧಾಟಿಯು ಕಟುವಾಯಿತೆಂದು ಒಪ್ಪಿಕೊಂಡರೂ, ಈ ಲೇಖಕರು ಗುರುತಿಸಿರುವ ಕೆಲವು ಸತ್ಯಗಳನ್ನು ಅಲ್ಲಗಳೆಯಲಾಗುವುದಿಲ್ಲ. ಚೋಮನ ದುಡಿಯನ್ನು ಕುರಿತಾದ ಆಕ್ಷೇಪಣೆ ಕೊಂಚ ಅಸ್ಪಷ್ಟವಾಗಿದೆ. ಗೊರೂರು, ಕಟ್ಟೀಮನಿ ಮತ್ತು ಭೈರಪ್ಪನವರು ಮಾಡಿರುವ ಹರಿಜನ ಸಮಾಜದ ಚಿತ್ರಣವು ಅಸಮರ್ಪಕವೆಂಬುದನ್ನು ಸರಿಯಾಗಿಯೇ ತೋರಿಸಲಾಗಿದೆ. ಇಲ್ಲಿಯೂ ಕೂಡ ಆಯಾ ಲೇಖಕರು ಬರೆಯುತ್ತಿರುವ ಸಾಮಾಜಿಕ, ಸಾಹಿತ್ಯಿಕ ಸನ್ನಿವೇಶಗಳನ್ನು ಟೀಕಿಸಲಾಗಿದೆಯೇ ಹೊರತು ಸಾಹಿತಿಗಳ ವೈಯಕ್ತಿಕ ನಿಂದೆಯು ಉದ್ದೇಶಿತವಾಗಿಲ್ಲ. ಅನಂತಮೂರ್ತಿಯವರ ಕಾದಂಬರಿಗಳನ್ನು ಕುರಿತ ಮಾತುಗಳು, ಸತ್ಯವನ್ನು

ಅಪ್ರಿಯವಾಗಿ ಹೇಳುತ್ತವೆ. ಆದರೆ ಇಲ್ಲಿಲ್ಲ ಮುಖ್ಯವಾಗುವುದು, ಹರಿಜನ ಸಮಾಜದ ಹೊರಗಿನಿಂದಲೇ ಬರಿಯುವ ಹರಿಜನರಲ್ಲದ ಸಾಹಿತಿಗಳು, ಆ ವರ್ಗದ ಜನರ ಅನುಭವದ ಆಳಗಳನ್ನು ನಿಜವಾಗಿಯೂ ತಿಳಿಯಬಲ್ಲರೇ ಎನ್ನುವುದು. ಏಕೆಂದರೆ ಇದು ಕೇವಲ ಸಹಾನುಭೂತಿಯಿಂದಲೇ ಸಾಧ್ಯವಾಗುವ ಸಂಗತಿಯಲ್ಲ. ಈ ಲೇಖನವು ಸಾಹಿತಿಗಳನ್ನು ಗುರಿಮಾಡಿಕೊಂಡಂತೆ ಕಂಡರೂ, ಇಲ್ಲಿರುವುದು ಸಾಹಿತ್ಯಕ ಸಾಧ್ಯತೆಗಳ ಪ್ರಶ್ನೆ. ವಚನಕಾರರನ್ನು ಕುರಿತಂತೆ ಡಿ. ಎಲ್. ಎನ್. ಅಭಿಪ್ರಾಯಗಳನ್ನು ಪರಿಶೀಲಿಸುವ ಲೇಖನವು ಯಾವ ಸಂದರ್ಭದಲ್ಲಿ ರಚಿತ ವಾಗಿದೆಯೋ ತಿಳಿಯದು. ಆದರೆ ಇಲ್ಲಿ ಡಿ. ಎಲ್. ಎನ್. ಅವರು ಕೇವಲ ನೆಪವಾಗಿದ್ದಾರೆ. ವಚನ ಸಾಹಿತ್ಯ ಮತ್ತು ಅವರ ಕಾಲದ ಸಾಮಾಜಿಕ ಸನ್ನಿವೇಶಗಳ ನಡುವಿನ ಕೆಲವು ಮಹತ್ವ ಪೂರ್ಣಸಂಬಂಧಗಳನ್ನು ಹುಡುಕುವುದು ಈ ಲೇಖನದ ಗುರಿ. ಡಿ. ಎಲ್. ಎನ್. ವಚನ ಸಾಹಿತ್ಯವು, ಒಂದು ಚಳುವಳಿಯ ಅಂಗವಾಗಿ ಮೂಡಿತೆಂಬ ಸಂಗತಿಯನ್ನು ಗಮನಿಸಿಲ್ಲವೆನ್ನುವುದು ಅವರ ಮೇಲಿನ ಆಕ್ಷೇಪಣೆ. ವಚನಕಾರರಲ್ಲಿ ಕೆಲವರಿಗೆ ಪಾಂಡಿತ್ಯವಿರಬಹುದು; ಹಲವರಿಗೆ ಇಲ್ಲದಿರಬಹುದು. ಆದರೆ ಕವಿಯಾಗಲು ಅಥವಾ ಶರಣನಾಗಲು ಪಾಂಡಿತ್ಯವು ಅನಿವಾರ್ಯವೇನೂ ಅಲ್ಲ.

ಲಂಕೇಶರ 'ಅವ್ವ' ಕವನವನ್ನು ಕುರಿತ ಲೇಖನವು ಒಂದು ಆರಕ್ಕೆ ಏರದ, ಮೂರಕ್ಕೆ ಇಳಿಯದ ಪ್ರಾಯೋಗಿಕ ವಿಮರ್ಶೆ. River of blood ಎನ್ನುವುದು, ಕ್ರಾಂತಿಯ ತಾತ್ಕಾಲಿಕ ವಿಫಲತೆಯನ್ನೇ ವಸ್ತುವಾಗಿ ಹೊಂದಿರುವ ತಮಿಳು ಕಾದಂಬರಿಯೊಂದರ ಸಂಗ್ರಹವಿಮರ್ಶೆ.

ಹರಿಹರನ, 'ಮಾದರ ಚನ್ನಯ್ಯನ ರಗಳೆ'ಯನ್ನು ಕುರಿತಾದ ಲೇಖನವು ಮುಖ್ಯವಾದುದು. ಹರಿಹರ ಮತ್ತು ರಾಘವಾಂಕರು ಶೈವರಾದರೂ ಜಾತಿಪದ್ಧತಿಯ ತಳಹದಿಯಾದ ಮೇಲು-ಕೀಳು ಎಂಬುದನ್ನು ಒಪ್ಪಿದವರಾಗಿದ್ದರೆಂಬ ಸಂಗತಿಯು ಸವಿವರವಾಗಿ, ಸಮರ್ಥವಾಗಿ ಪ್ರತಿಪಾದಿತವಾಗಿದೆ. ಸ್ವತಃ ಚನ್ನಯ್ಯನ ವರ್ಣನೆ ಯಲ್ಲೇ ಇರಬಹುದಾದ ಪರಸ್ಪರ ವಿರೋಧವನ್ನೂ ಈ ಲೇಖನ ಶೋಧಿಸುತ್ತದೆ ಇದೊಂದು ಗಂಭೀರ ಪ್ರಯತ್ನ.

ಪಂಪನ ಆದಿಪುರಾಣದ,ಪ್ರಸಿದ್ಧ ಪದ್ಯವೊಂದರ ಪ್ರಾಯೋಗಿಕ ವಿಮರ್ಶೆಯು ಮತ್ತೊಂದು ಲೇಖನದ ವಸ್ತು. ಇಲ್ಲಿ ಆ ಪದ್ಯದ ನಿಜವಾದ 'ಪಾಠ' ಯಾವುದೆಂಬುದನ್ನು ಸುದೀರ್ಘವಾಗಿ ಚರ್ಚಿಸಿ, ಕೊನೆಗೆ ಎಲ್. ಬಸವರಾಜು ಅವರ ಪಾಠವನ್ನು ಸಂಪೂರ್ಣವಾಗಿ ಒಪ್ಪಿಕೊಂಡಿದ್ದಾರೆ. ಆದರೂ ಇತರರ ಅಭಿಪ್ರಾಯಗಳನ್ನು ಅವರು ಇನ್ನಷ್ಟು ತಾಳ್ಮೆಯಿಂದ ಪರೀಕ್ಷಿಸಬಹುದಾಗಿತ್ತು. ಪದ್ಯಕ್ಕೆ ಅವರು ಕೊಡುವ ಅರ್ಥವೂ ಅತೃಪ್ತಿಕರವಾಗಿಯೇ ಇದೆ.

ಒಟ್ಟಿನಲ್ಲಿ ತರುಣ ವಿಮರ್ಶಕನೊಬ್ಬನ ಪ್ರಥಮ ಪ್ರಯತ್ನವಾಗಿ ಇದು ಸಾಕಷ್ಟು ವೈಚಾರಿಕ ಉತ್ತಮಿಕೆಯನ್ನು ಹೊಂದಿರುವ ಕೃತಿ. ಆದರೆ ಸಾಹಿತ್ಯ ಕೃತಿಯು ಏಕೆ, ಹೇಗೆ ವಿಶಿಷ್ಟವಾಗುತ್ತದೆ ಎಂಬ ಪ್ರಶ್ನೆಯನ್ನು ಕುರಿತು ನಿಜವಾಗಿ ಆಲೋಚಿಸಿದಾಗ ಮತ್ತು ವಿಮರ್ಶೆಯ ಪರಿಕರಗಳನ್ನು ಸಂಪಾದಿಸಿದಾಗ ಮಾತ್ರ ಇವರ ವಿಮರ್ಶೆಯು ಇನ್ನಷ್ಟು ಮಹತ್ವದ ಆಯಾಮಗಳನ್ನು ಪಡೆಯಬಲ್ಲುದು.

ಸಿಂಗಾರ ತಾಳ್ತಜೆ ವಸಂತಕುಮಾರ

ಕನ್ನಡ ಸಾಹಿತ್ಯದ ಅಧ್ಯಯನ ಮತ್ತು ಅಧ್ಯಾಪನಗಳ ನೆಲೆಯಲ್ಲಿಯೇ, ವಿಮರ್ಶೆಯ ಕಾರ್ಯವೂ ಅಂತರ್ಗತವಾಗಿರುವುದರಿಂದ, ಪ್ರತಿಯೊಬ್ಬ ಅಧ್ಯಾಪಕನೂ ವಿಮರ್ಶಕನಾಗುವ ಹಂಬಲ ಅಥವಾ ಪ್ರಯತ್ನಗಳಿಂದ ಮುಕ್ತನಾಗಿರುವುದಿಲ್ಲ. ಆದರೆ ವೃತ್ತಿಪರ ವಿಮರ್ಶಕನಾಗಲು ಅಗತ್ಯವಾದ ಜ್ಞಾನ ಮತ್ತು ಪರಿಕರಗಳ ಸಂಪಾದನೆಯು ಸಂತತವಾಗಿ ನಡೆಯಬೇಕಾದ ಕ್ರಿಯೆ. ಇಂತಹ ಸಂಪಾದನೆಯಲ್ಲಿ ಆಸಕ್ತಿವಹಿಸದ ಅಧ್ಯಾಪಕರ ಬರವಣಿಗೆಯು ಕೇವಲ ಸ್ವಂತ ಬುದ್ಧಿವಂತಿಕೆಯನ್ನೇ ಅವಲಂಬಿಸಿರುವುದರಿಂದ, ಆ ಬುದ್ಧಿಶಕ್ತಿಯ ಪರಿಮಿತಿಗಳಿಂದಲೇ ಬದ್ಧವಾಗಿರು ತ್ತದೆ. ಅದರಲ್ಲಿಯೂ ಸಾಂದರ್ಭಿಕ ಲೇಖನಗಳಿಗೆ ಸೀಮಿತವಾದ ವಿಮರ್ಶಾಕೃತಿಯು ವಿಮರ್ಶಕನಿಗೆ ಬೇಕಾದ ತಾತ್ವಿಕ ಹಿನ್ನೆಲೆಯನ್ನಾಗಲೀ, ವಿಶಿಷ್ಟ ವಿಧಾನಗಳ ಬಳಕೆ ಯನ್ನಾಗಲೀ ಒಳಗೊಂಡಿರುವುದಿಲ್ಲ.

'ಸಿಂಗಾರ' ಕೃತಿಯು ಲೇಖಕರ ಪ್ರಾಮಾಣಿಕತೆ, ಧೈರ್ಯ, ಸಹೃದಯತೆ ಮುಂತಾದ ಗುಣಗಳು ಸ್ಪಷ್ಟವಾಗಿಯೇ ಇವೆ. ಈ ಕೃತಿಯ ಬೇರೆ ಬೇರೆ ಲೇಖನಗಳು ವಿಮರ್ಶೆಯು ಮಾಡಬಹುದಾದ ಬೇರೆ ಬೇರೆ ಕೆಲಸಗಳಲ್ಲಿ ತೊಡಗುವುದರಿಂದ ಇಡೀ ಕೃತಿಯ ಬಗ್ಗೆ ಸಾಮಾನ್ಯೀಕೃತ ಮಾತುಗಳನ್ನು ಹೇಳಲಾಗುವುದಿಲ್ಲ. ಮುದ್ದಣನನ್ನು ಕುರಿತ ಲೇಖನ ಸಂಶೋಧನೆಯ ಸ್ಪರ್ಶವನ್ನು ಪಡೆದಿರುವ ಸಂಗ್ರಹ. ಕವಿಯ ಸಮಕಾಲೀನರು ಅವನ ಬಗ್ಗೆ ಹೇಳಿರುವ ಮಾತುಗಳ ಹಿನ್ನೆಲೆಯಲ್ಲಿ ಅವನ ವ್ಯಕ್ತಿತ್ವ ವನ್ನು ಕಟ್ಟಿಕೊಡುವ ಈ ಪ್ರಯತ್ನವು ವಿಪುಲ ವಿವರಗಳಿಂದ ಕೂಡಿದೆ; ಬೇರೆಯವರು ಹೇಳಿದ ಮಾತುಗಳನ್ನೆಲ್ಲ ಒಪ್ಪಿಕೊಳ್ಳದೆ ಪ್ರಶ್ನಿಸುವ ಧೋರಣೆ ಸ್ವಾಗತಾರ್ಹ. 'ಕನ್ನಡ ಕವಿಗಳು ಕಂಡ ಬೇಸಿಗೆ', ಜನಪ್ರಿಯ ಪತ್ರಿಕೆಯೊಂದಕ್ಕೆ ಬರೆದ ಸಾಮಾನ್ಯ ಲೇಖನ. ನಿದರ್ಶನಗಳನ್ನು ಓದಿ ಮೆಚ್ಚಬಹುದು ಅಷ್ಟೆ. 'ಕಡೆಂಗೋಡ್ಲು ಅವರ ಕಾವ್ಯದೃಷ್ಟಿ' ಎಂಬ ಲೇಖನವು ಕಾವ್ಯದೃಷ್ಟಿ ಎಂಬ ಪದವನ್ನು ಸರಿಯಾಗಿ ಅರ್ಥೈಸಿಕೊಳ್ಳುವ ಪ್ರಯತ್ನವನ್ನೇ ಮಾಡದಿರುವುದರಿಂದ, ವರ್ಣನೆ, ಪ್ರಶಂಸೆ ಗಳಲ್ಲಿಯೇ ಮುಳುಗಿದೆ. ದೇವರಾಜೆಯವರ 'ರಾಮಚರಿತಾಮೃತವನ್ನು' ಕುರಿತ ಬರವಣಿಗೆಯು ಪಶ್ಚಿಮ ಕರ್ನಾಟಕದ ಮೇಲಿನ ಅಭಿಮಾನದಿಂದ ಮಾತ್ರ ಮೂಡಿರ ಬಹುದು.

'ಸಿಂಗಾರ'ದ ಪ್ರಮುಖ ಲೇಖನಗಳೆಂದರೆ ಭಾರತೀಸುತ ಮತ್ತು ಕಾರಂತರ ಬಗ್ಗೆ ಇರುವಂತಹುವು. ಭಾರತೀಸುತರನ್ನು ಕುರಿತ ಲೇಖನದ ಮೊದಲ ಭಾಗವು ವಿಮರ್ಶಕರ ದೃಷ್ಟಿಕೋನದ ವಿವರ ನಿರೂಪಣೆಯನ್ನು ಒಳಗೊಂಡಿದೆ. ಅನಂತ ದೈಹಿಕ ಕಾಮನೆಗಳನ್ನು ತೃಪ್ತಿಪಡಿಸುವ ಹಂಬಲವು, ಪಶುಪ್ರವೃತ್ತಿಗೆ ಸಾಕ್ಷಿಯೆಂಬ ನೀತಿಪರವಾದಿಯ (Moralist) ನಿಲುವುಗಳಿಂದಲೇ ಹೊರಡುವ ವಿಮರ್ಶಕರು 'ಚಿಗುರು ಹಾಸಿಗೆ' ಕಾದಂಬರಿಯ ನಾಯಕಿ ಲಕ್ಷ್ಮಿಯಲ್ಲಿ ಸ್ವೈರದ, ಅನೈತಿಕತೆಯ ಅಂಶಗಳನ್ನು ಕಾಣುವುದು ಸಹಜವೇ ಆಗಿದೆ. ಆದರೆ ತಮ್ಮದಕ್ಕಿಂತ ಭಿನ್ನವಾದ ಪ್ರಜ್ಞೆಯ ಸ್ತರಗಳನ್ನು ಗುರುತಿಸಲಾಗದ, ಗುರುತಿಸಿದರೂ ಅಸಹನೆಯಿಂದ ಕಾಣುವ ಈ ಮನೋಧರ್ಮವು ವಾಸ್ತವತೆಗೆ ಮುಕ್ತವಾಗಿರುವುದಿಲ್ಲ. ಆದರೂ ಈ ಲೇಖನ ಯೋಚನೆ ಮಾಡುತ್ತದೆ; ಯೋಚನೆ ಮಾಡಿಸುತ್ತದೆ.

'ಕಾರಂತರ ನಾಟಕಗಳು' ಮತ್ತು 'ಯಕ್ಷಗಾನಕ್ಕೆ ಕಾರಂತರ ಕೊಡುಗೆ' ಎಂಬ ಲೇಖನಗಳು ಗಂಭೀರ ಪ್ರಯತ್ನಗಳು. ರಂಗಪ್ರಯೋಗಗಳ ಯಶಸ್ಸೇ ಕಾರಂತರ ಗುರಿಯಾದರೂ, ಅವುಗಳ ರಂಗಪ್ರಯೋಗಗಳು ಅಷ್ಟೇನು ಜನಪ್ರಿಯವಾಗಿಲ್ಲವೆಂಬ ವಿಚಿತ್ರ ಸತ್ಯವನ್ನು ವಿಚಾರದ ಮೊದಲ ಬಿಂದುವಾಗಿ ಇಟ್ಟುಕೊಂಡಿರುವ ಸಮೀಕ್ಷೆಯು ಇನ್ನಷ್ಟು ಆಳ-ಅಗಲಗಳನ್ನು ಪಡೆದುಕೊಳ್ಳಬಹುದಾಗಿತ್ತು. ನಾಟಕಗಳಿಗೆ ಸಂಬಂಧಿಸಿದ ಹಾಗೆ ಕಾರಂತರ ಹಲವು ಅಭಿಪ್ರಾಯಗಳನ್ನು ವಿವರವಾಗಿ ಪ್ರಸ್ತಾಪಿಸಿದರೂ, ನಾಟಕಗಳನ್ನು ಕುರಿತೇ ಬರೆದಾಗ ಮಾಮೂಲಿನ ಭಾಷೆ, ವಸ್ತು ಮುಂತಾದ ಸಂಗತಿಗಳ ಚರ್ಚೆ ಮಾತ್ರ ದೊರೆಯುತ್ತದೆ. ಆದ್ದರಿಂದಲೇ ಮೊದಲು ಎತ್ತಿದ ಪ್ರಶ್ನೆಯು ಕೊನೆಗೂ ಪ್ರಶ್ನೆಯಾಗಿಯೇ ಉಳಿಯುತ್ತದೆ. ಯಕ್ಷಗಾನದ ಪ್ರಯೋಗ ಮತ್ತು ಶಾಸ್ತ್ರೀಯ ಅಧ್ಯಯನಕ್ಕೆ ಸಂಬಂಧಿಸಿದ ಕಾರಂತರ ಸಾಧನೆಗಳನ್ನು ವಿವರಿಸುತ್ತಾ ಹೋಗುವ ಕೊನೆಯ ಲೇಖನವು, ತೆಂಕುತಿಟ್ಟಿನ ಬಗ್ಗೆ ಕಾರಂತರು ಹೊಂದಿರುವ ಧೋರಣೆಗಳನ್ನು ಮಾತ್ರ ಒಪ್ಪಿಕೊಳ್ಳುವುದಿಲ್ಲ. ಸಂಶೋಧಕನಿಗಿರಬೇಕಾದ ಪ್ರಾಮಾಣಿಕತೆ ಮತ್ತು ಹೃದಯ ವೈಶಾಲ್ಯಗಳು ಕಾರಂತರಲ್ಲಿ ಇಲ್ಲವೇನೋ ಎಂದು ಸಂಶಯಪಡುವ ವಿಮರ್ಶಕರು ತಮ್ಮ ಅಡಿಟಿಪ್ಪಣಿಯಲ್ಲಿ ತೆಂಕುತಿಟ್ಟನ್ನು ಸಮರ್ಥಿಸುವ ಸಂಗತಿಗಳನ್ನೇನೂ ಹೇಳುವುದಿಲ್ಲ.

ವಿಮರ್ಶೆ ಮಾಡುವ ಕೃತಿಗಳನ್ನು ಅಧ್ಯಯನ ಮಾಡುವುದರ ಜೊತೆಗೆ, ವಿಮರ್ಶೆಯ ತತ್ವ, ವಿಧಾನ ಮತ್ತು ಪರಿಭಾಷೆಗಳಿಗೆ ಸಂಬಂಧಿಸಿದಂತೆ ಇನ್ನಷ್ಟು ಓದಿದಾಗ ತಾಳ್ಮೆಜೆಯವರು ನಿಜವಾಗಿಯೂ ಬೆಳೆಯುವ ಸಾಧ್ಯತೆಗಳಿವೆ.

ಪರ್ವ-ಒಂದು ಸಮೀಕ್ಷೆ : ಸಂ. ವಿಜಯಾ

ಒಂದು ಸಾಹಿತ್ಯಕೃತಿಯನ್ನು ಕುರಿತ ಲೇಖನಗಳ ಸಂಕಲನವು ಕನ್ನಡದಲ್ಲಿ ಅಪರೂಪ. ಅಂತಹ ಲೇಖನಗಳು, ವಿಚಾರ ಸಂಕಿರಣವೊಂದರಲ್ಲಿ ಮಂಡಿತವಾದಾಗ

ಲಂತೂ ವಿಭಿನ್ನ ಧೋರಣೆಗಳ ನಡುವಿನ ಆರೋಗ್ಯಕರ ವಾಗ್ವಾದಕ್ಕೆ ಒಳ್ಳೆಯ ಅವಕಾಶ ದೊರೆಯುತ್ತದೆ. ಈಚಿನ ದಿನಗಳಲ್ಲಿ ಅಪಾರವಾದ ಚರ್ಚೆ ಮತ್ತು ಆಸಕ್ತಿಗಳನ್ನು ಕೆರಳಿಸಿರುವ ಎಸ್. ಎಲ್. ಭೈರಪ್ಪನವರ 'ಪರ್ವ' ಕಾದಂಬರಿಯನ್ನು ಕುರಿತ ಎಂಟು ಪ್ರಬಂಧಗಳು ಮತ್ತು ಎರಡು ಅಧ್ಯಕ್ಷ ಭಾಷಣಗಳನ್ನು ಇಲ್ಲಿ ಕೊಡಲಾಗಿದೆ.

ಈ ಕೃತಿಯಲ್ಲಿ ಕೀರ್ತಿನಾಥ ಕುರ್ತಕೋಟಿ ಮತ್ತು ಬನ್ನಂಜೆ ಗೋವಿಂದ ಚಾರ್ಯರು ಚರ್ಚೆಯ ಒಂದು ಧೋರಣೆಯನ್ನು ಪ್ರತಿಪಾದಿಸಿದರೆ, ಕೆ.ವಿ. ನಾರಾಯಣ ಅವರು ಮತ್ತೊಂದು ವಾದಸರಣಿಯ ನಿರೂಪಕರಾಗಿದ್ದಾರೆ. ಪರ್ವದಂತಹ ಕೃತಿಯನ್ನು ಅದರ ಮೂಲವಾದ ವ್ಯಾಸಭಾರತದೊಂದಿಗೆ ಹೋಲಿಸದೆ ಓದಲಾಗುವು ದಿಲ್ಲ, ಓದಬಾರದು ಎನ್ನುವುದು ಮೊದಲ ಇಬ್ಬರ ನಿಲುವು. ಮೂಲ ಭಾರತದ 'ಪಾಠ' ಯಾವುದೆಂದು ಖಚಿತವಾಗಿ ತಿಳಿಯದಿರುವುದರಿಂದ, ಪಂಪ, ಕುಮಾರವ್ಯಾಸ ಮುಂತಾದ ಹಲವು ಕವಿಗಳು ಈಗಾಗಲೇ ಭಾರತ ಕಥೆಯನ್ನು ತಮ್ಮದೇ ಆದ ರೀತಿಯಲ್ಲಿ ಅನಾವರಣ ಮಾಡಿರುವುದರಿಂದ, 'ಪರ್ವ' ದಂತಹ ಪ್ರಯತ್ನಗಳ ಪರಂಪರೆಯೇ ಕನ್ನಡಕ್ಕೆ ಇದೆಯೆಂದು ನಾರಾಯಣ ಅವರು ವಾದಿಸಿದ್ದಾರೆ. "ಒಂದು ಪೌರಾಣಿಕ ಸಂಗತಿಯು ಪೌರಾಣಿಕತೆಯನ್ನು ಕಳೆದರೆ ಅದಕ್ಕೆ ವಾಸ್ತವದ ಬೆಲೆ ಕೂಡ ಉಳಿಯುವುದಿಲ್ಲ" (ಪು. 13) ಎಂದು ಕುರ್ತಕೋಟಿಯವರು ಹೇಳಿದ್ದಾರೆ. ಈ ಸಂಗತಿಯನ್ನು ವಿವರವಾಗಿ, ಮೌಲಿಕವಾಗಿ ಚರ್ಚಿಸಿರುವ ನಾರಾಯಣ ಅವರು, ಕಾದಂಬರಿಯಲ್ಲಿ ನಡೆದಿರುವುದು ಭೂತಕಾಲದ ಪುನಾರಚನೆ ಮಾತ್ರವಲ್ಲ, ಭೂತ ಕಾಲವು ವರ್ತಮಾನದ ಬದುಕಿನಲ್ಲಿ ಹೊಂದಿರಬಹುದಾದ ಹೊರಚಾಚುಗಳನ್ನು ಗ್ರಹಿಸುವ ಪ್ರಯತ್ನವೆಂದು ಹೇಳುತ್ತಾರೆ. ಇಲ್ಲಿ ಪುರಾಣಭಂಜನೆಯ ಪ್ರಯತ್ನ ವಿರುವ ಬದಲು, ವಾಸ್ತವೀಕರಣಗೊಂಡ ಬದುಕಿನ ವಿವರಗಳ ಒಡಲಿನಿಂದಲೇ, ಹೊಸದೊಂದು ಪುರಾಣವು ರೂಪಿತವಾಗುತ್ತದೆಯೆಂದು ಅವರು ಹೇಳುತ್ತಾರೆ. ಈ ಲೇಖನವು 'ಪರ್ವ'ದ ಬಗ್ಗೆ ಅನೇಕ ಮಹತ್ವದ ಒಳನೋಟಗಳನ್ನು ಕೊಡುತ್ತದೆ. ಭೈರಪ್ಪನವರನ್ನು ಪ್ರತಿಗಾಮೀ ಲೇಖಕರೆಂದು ಕರೆಯುತ್ತಿದ್ದವರು ಮತ್ತು ಅವರು ಹಿಂದೂ ಪುನರುಜ್ಜೀವನದ ಸಮರ್ಥಕರೆಂದು ಪ್ರಶಂಸುತ್ತಿದ್ದವರು ಇಬ್ಬರ ಮನಸ್ಸಿ ನಲ್ಲೂ 'ಪರ್ವ'ವು ಮೂಡಿಸಿರುವ ಗೊಂದಲಗಳನ್ನು ಇವರು ವಿವರಿಸುತ್ತಾರೆ. 'ಪರ್ವ'ದ ಸಮಸ್ಯೆಗಳ ಹಿಂದೆ, ಕಾದಂಬರಿಕಾರರ ವೈಯಕ್ತಿಕ ಸಮಸ್ಯೆಗಳನ್ನು ಗುರುತಿಸಿ ಹೊರಡುವ ಬನ್ನಂಜೆಯವರ ಪ್ರಯತ್ನವು ಆರೋಗ್ಯಕರವಲ್ಲವೆಂದು ಹೇಳಬೇಕು.

ಸಂಕಲನದ ಇತರ ಲೇಖನಗಳು ಮೇಲೆ ಹೇಳಿರುವ ಎರಡು ವಾದಸರಣಿಗಳಲ್ಲಿ ಒಂದರ ಮುಂದುವರಿಕೆಗಳಾಗಿವೆ ಅಥವಾ ಕಾದಂಬರಿಗೆ ಸಂಬಂಧಿಸಿದ ಬಿಡಿ ಸಮಸ್ಯೆ

ಯನ್ನು ಅಧ್ಯಯನ ಮಾಡುವ ಪ್ರಯತ್ನಗಳಾಗಿವೆ. "ಪರ್ವದಲ್ಲಿ ನಮ್ಮ ಬದುಕಿನ ಸಾಧ್ಯತೆಗಳೆಲ್ಲವೂ ಹಸಿ-ಬಿಸಿ ಸೂಕ್ಷ್ಮಗಳೆಲ್ಲವೂ ರೂಪತಾಳಿವೆ. ಆದುದರಿಂದ ಮಾನವೀಯ ವಾಸ್ತವತೆಯೇ ಪರ್ವದ ತಳಪಾಯವೂ ಅಲ್ಲದೆ ಕಟ್ಟಡವೂ ಆಗಿದೆ" ಎಂದು ಕ. ವೆಂ. ರಾಜಗೋಪಾಲರು ಹೇಳುತ್ತಾರೆ. ನರಹಳ್ಳಿ ಬಾಲಸುಬ್ರಹ್ಮಣ್ಯ ಅವರು 'ಪರ್ವ'ವು ತನ್ನ 'demythification' ಮೂಲಕ ಪಡೆದುಕೊಂಡಿರುವು ದೆಷ್ಟು? ಎಂಬ ಪ್ರಶ್ನೆಯನ್ನು ಕೇಳಿಕೊಳ್ಳುವುದರ ಜೊತೆಗೆ, ಪರ್ವದ ಬೇರೆ ಕೆಲವು ವೈಚಾರಿಕ ನೆಲೆಗಳನ್ನೂ ಗುರುತಿಸುತ್ತಾರೆ.

ರಾಮದಾಸ್, ವೈ. ಎಸ್. ರಮಾಮಣಿ, ಹೇಮಲತಾ ಮಹಿಷಿ ಮತ್ತು ಎನ್. ಗುರುರಾಜ ಅವರು ಇಡೀ ಕಾದಂಬರಿಯನ್ನು ಕುರಿತಂತೆ ವಿವೇಚನೆ ನಡೆಸ ಹೊರಡುವುದಿಲ್ಲ. ಅದರೂ ಅನೇಕ ಗಂಭೀರವಾದ ವಿಚಾರಗಳನ್ನು, ಕುತೂಹಲ ಹುಟ್ಟಿಸುವ ಧಾಟಿಯಲ್ಲಿ ಹೇಳುವ ಪ್ರಯತ್ನವನ್ನು ಎಲ್ಲ ಲೇಖನಗಳಲ್ಲಿಯೂ ಗುರುತಿಸಬಹುದು.

ಒಟ್ಟಿನಲ್ಲಿ ಈ ಸಂಕಲನವು ಮಹತ್ವದ ಕಾದಂಬರಿಯೊಂದರ ಚರ್ಚೆಗೆ ಅಗತ್ಯ ವಾದ ನೆಲೆಗಳನ್ನು ರೂಪಿಸಿಕೊಡುವುದರ ಜೊತೆಗೆ, ಇಂದಿನ ವಿಮರ್ಶಾಪರಿಸರದ ಚಲನಶೀಲವೂ, ಮುಕ್ತವೂ ಆದ ಸ್ವರೂಪದ ಕಡೆಗೆ ನಮ್ಮ ಗಮನ ಸೆಳೆಯುವುದರಲ್ಲಿ ಯಶಸ್ವಿಯಾಗುತ್ತದೆ. ಇದೊಂದು ಸ್ವಾಗತಾರ್ಹವಾದ ಪ್ರಯತ್ನ.

ಸಾಹಿತ್ಯಪ್ರಭ : ಕೆ. ವೆಂಕಟರಾಯಾಚಾರ್ಯ

ಸಮಕಾಲೀನ ಸಾಹಿತ್ಯವಿಮರ್ಶೆಯ ವಲಯದಿಂದ ಹೊರಗುಳಿದು, ವಿಧಾನ, ಪರಿಕರ ಮತ್ತು ಭಾಷೆಗಳ ದೃಷ್ಟಿಯಿಂದ ಕೊಂಚ ಹಳಬರೆನ್ನಬಹುದಾದ ಪಂಡಿತ ವಿಮರ್ಶಕರ ಸಂಖ್ಯೆಯು ದಕ್ಷಿಣಕನ್ನಡ ಜಿಲ್ಲೆಯಲ್ಲಿ ಜಾಸ್ತಿಯಾಗಿರುವುದಕ್ಕೆ ಸಾಂಸ್ಕೃತಿಕ ಕಾರಣಗಳಿರಬಹು. ಪ್ರಸ್ತುತ ಕೃತಿಯ ಲೇಖಕರೂ ಹೀಗೆಯೇ ಹತ್ತಾರು ಕೃತಿಗಳನ್ನು ಪ್ರಕಟಿಸಿರುವವರು. ಸಾಹಿತ್ಯ ; ಯಕ್ಷಗಾನ ; ಧರ್ಮ ಹೀಗೆಯೇ ಹತ್ತು ಹಲವು ವಿಷಯಗಳಲ್ಲಿ ಸದಾಮಗ್ನರಾಗಿರುವ ಇವರ ಉತ್ಸಾಹ, ಪಾಂಡಿತ್ಯ ಗಳನ್ನು ಮೆಚ್ಚಬಹುದು. ಆದರೆ ಇಲ್ಲಿ ಶಕ್ತಿಯ ಅಪವ್ಯಯವಾಗಿದೆಯೆನ್ನದೆ ವಿಧಿಯಿಲ್ಲ.

ಹಳೆಗನ್ನಡದ ಪದ್ಯಭಾಗಗಳ ಅರ್ಥಗ್ರಹಣದಲ್ಲಿ ಇಂತಹ ಪಾಂಡಿತ್ಯ ನೆರವಾಗ ಬಹುದಾದರೂ ಅದು ನೀರಸವೇ. ಉದಾಹರಣೆಗೆ ಪಂಪನ ಪದ್ಯಕ್ಕೆ ಇವರು ಕೊಡುವ ಅರ್ಥವೂ ಸಮರ್ಪಕವೆಂದು ತೋರುವುದಿಲ್ಲ. (ಬದ್ದೆಗನಲ್ಲಿರುವ ಆನೆ, ಕುದುರೆಗಳ ಸಂಖ್ಯೆಗೂ, ಅವನ ದಾನಶೀಲನೆಗೂ ಮತ್ತು ಇಂದ್ರನ ಐರಾವತ, ಸೂರ್ಯನ ಕುದುರೆಗಳಿಗೂ ಏನು ಸಂಬಂಧವೆಂಬ ಅಂಶವನ್ನು ಇವರ ವಿವರಣೆಯು ॥

ಹೇಳುವುದಿಲ್ಲ). ಹೀಗೆಯೇ ಹಲವು ಚಿಕ್ಕಪುಟ್ಟ ಸಂಗತಿಗಳನ್ನು ತೆಗೆದುಕೊಂಡು, ಅವುಗಳ ಬಗ್ಗೆ ತಮ್ಮ ಅಭಿಪ್ರಾಯ ಹೇಳುವ ಇಂತಹ ಲೇಖನಗಳನ್ನು ಸಂಶೋಧನ ಬಿಂದುಗಳೆಂದು ಕರೆಯಬಹುದೇನೋ, ಬೇರೆ ಹಲವು ಕೇವಲ ವಿವರಣಾತ್ಮಕವಾದ ಸಂಗ್ರಾಹಕವಾದ ಬರೆಹಗಳು. ಹೊಸಗನ್ನಡ, ಹಳಗನ್ನಡ, ಶಾಸ್ತ್ರಗ್ರಂಥ, ಕಾವ್ಯ, ನಾಟಕ, ದೇವತಾಕ್ಷೇತ್ರ, ರಾಘವೇಂದ್ರ ಸ್ವಾಮಿಗಳು, ಡಾ॥ ರಘುವೀರ-ಎಲ್ಲವನ್ನೂ ಕುರಿತ ಪರಿಚಯಮಾತ್ರವಾದ ಅನೇಕ ಲೇಖನಗಳು ಗಂಭೀರ ಚರ್ಚೆಗೆ ದಾರಿಮಾಡಿ ಕೊಡುವುದರಲ್ಲಿ ಅಥವಾ ಉತ್ಸಾಹ ಹುಟ್ಟಿಸುವುದರಲ್ಲಿ ವಿಫಲವಾಗುತ್ತವೆ.

ನೂರು ಮರ ನೂರು ಸ್ವರ : ಎಚ್. ಎಸ್. ವೆಂಕಟೇಶಮೂರ್ತಿ

ಸೃಜನಶೀಲ ಲೇಖಕರೊಬ್ಬರ ವಿಮರ್ಶಾತ್ಮಕ ಬರೆಹಗಳಲ್ಲಿ, ಉಳಿದವರಲ್ಲಿ ಇಲ್ಲದ ಕೆಲವು ಒಳನೋಟಗಳನ್ನು ನಿರೀಕ್ಷಿಸಲಾಗುತ್ತದೆ. ಸೃಜನಕ್ರಿಯೆಯ ಸ್ವರೂಪದ ಮೇಲೆ ಅವರು ಬೆಳಕಂಚೆಲ್ಲಬಹುದೆಂದು ನಿರೀಕ್ಷೆ. ಕುವೆಂಪು, ಬೇಂದ್ರೆ ಪು.ತಿ.ನ., ಜಿ. ಎಸ್. ಶಿವರುದ್ರಪ್ಪ, ಯಶವಂತಚಿತ್ತಾಲ ಮುಂತಾದ ಹಲವು ಲೇಖಕರ ಬರವಣಿಗೆಯು ಈ ಬಗೆಯ ಗಮನ ಸಳೆದಿದೆ. ಈ ಕಾಲದ ಸಂಪತ್ತದ ಕವಿಗಳಲ್ಲಿ ಒಬ್ಬರಾದ ಎಚ್. ಎಸ್. ವೆಂಕಟೇಶಮೂರ್ತಿಯವರ ಈ ಸಂಕಲನವು 137 ಪುಟಗಳ ವ್ಯಾಪ್ತಿಯಲ್ಲಿ ಹದಿನೆಂಟು ಲೇಖನಗಳನ್ನು ಒಳಗೊಂಡಿದೆ. ಎಲ್ಲವೂ ಹೊಸಗನ್ನಡ ಕಾವ್ಯದ ಹಲವು ಕವಿಗಳನ್ನು, ಕವಿತೆಗಳನ್ನು ಅಧ್ಯಯನಮಾಡುವ ಉದ್ದೇಶದಿಂದ ರಚಿತವಾದ ಈ ಲೇಖನಗಳು ದ. ರಾ. ಬೇಂದ್ರೆಯವರಿಂದ, ಎಂ. ಎನ್. ಜಯಪ್ರಕಾಶರವರೆಗೆ ತಮ್ಮ ಆಸಕ್ತಿಯನ್ನು ಹರಹಿಕೊಂಡಿವೆ. ಬಿಡಿಕವನಗಳ ಪ್ರಾಯೋಗಿಕ ವಿಮರ್ಶೆ (ಪು. 4), ಒಬ್ಬ ಕವಿಯ ಸಮಗ್ರ ಕಾವ್ಯದ ಸಮೀಕ್ಷೆ (ಪು. 5), ಒಂದು ಕಾವ್ಯ ಅಥವಾ ಕವಿಯ ಒಂದು ಆಯಾಮವನ್ನು ಕುರಿತ ಅನಿಸಿಕೆಗಳು (ಪು. 14), ಹೀಗೆಯೇ ಕಾವ್ಯ ವಿಮರ್ಶೆಯ ಹಲವು ಬಗೆಗಳನ್ನು ಇಲ್ಲಿ ಗಮನಿಸಬಹುದು.

ಆದರೆ ಇವೆಲ್ಲದರ ಹಿಂದೆ ಕೆಲಸಮಾಡುವುದು ಗುಣಗ್ರಾಹಿಯಾದ ಸಹೃದಯನೊಬ್ಬನ ಮನಸ್ಸು. ವಿಮರ್ಶೆಯ ತತ್ವ ಮತ್ತು ಪರಿಕರಗಳನ್ನು ರೂಢಿಸಿಕೊಂಡಿರುವ ವೃತ್ತಿಪರ ವಿಮರ್ಶಕನೊಬ್ಬನ ಬರವಣಿಗೆಯಿಂದ ಹಲವು ಅಂಶಗಳಲ್ಲಿ ಬೇರೆಯಾಗುವ ಈ ವಿಧಾನವು, ತಾನು ಮೆಚ್ಚುವ ಕಾವ್ಯದ ನೆಲೆಗಳನ್ನು ಗುರುತಿಸುವಾಗಲೇ ತನ್ನ ಸ್ವಂತ ಕಾವ್ಯದ ಸಮರ್ಥನೆಯನ್ನೂ ಕೂಡ ಮಾಡಿಕೊಳ್ಳುತ್ತದೆ. ನನ್ನ ಈ ಮಾತಿನಲ್ಲಿ ಆಕ್ಷೇಪಣೆಯೇನೂ ಇಲ್ಲ.

ವೆಂಕಟೇಶ ಮೂರ್ತಿಯವರ ಸಂದರ್ಭದಲ್ಲಿ ಹೇಳುವುದಾದರೆ, ಅವರ ಕಾವ್ಯವು ನವ್ಯದ ಹಲವು ಪರಿಕರಗಳನ್ನು ತನ್ನದಾಗಿಸಿಕೊಂಡರೂ ಕೂಡ, ನವೋದಯದ

ಮೂಲ ನೆಲೆಗಳನ್ನು ತ್ಯಜಿಸದೆ ಇರುವುದಕ್ಕೆ ಕಾರಣಗಳನ್ನು ಅವರ ವಿಮರ್ಶೆಯಲ್ಲಿ ನೋಡಬಹುದು. ರಾಮಾಯಣ ದರ್ಶನಂ, ಪು.ತಿ.ನ. ಅವರ ಕಾವ್ಯ, ಎಕ್ಕುಂಡಿಯವರ ಕವಿತೆಗಳು ಮುಂತಾದವನ್ನು ಸಮರ್ಥಿಸುವ, ಅವುಗಳಿಂದ ಉತ್ತಮಾಂಶಗಳನ್ನು ಪಡೆದುಕೊಳ್ಳಲು ಹಾತೊರೆಯುವ ಇವರ ಮನಸ್ಸು ಆರೋಗ್ಯಕರವಾದ ನಿಲುವುಗಳನ್ನು ಹೊಂದಿರುವುದೇ ಆಗಿದೆ. ಆದರೆ ಇಪ್ಪತ್ತನೆಯ ಶತಮಾನದ ಉತ್ತರಾರ್ಧವು ಒಡ್ಡುವ ಪ್ರಮುಖ ಸಾಮಾಜಿಕ ಸವಾಲುಗಳನ್ನು ಎದುರಿಸುವ ಅಥವಾ ಗುರುತಿಸುವ ಆಸಕ್ತಿಗಳು ಇಲ್ಲಿ ಢಾಳಾಗಿ ಕಾಣುವುದಿಲ್ಲ. ಸಾರ್ವಕಾಲಿಕವಾದುದರ ಜೊತೆಗೆ ತನ್ನನ್ನು ತಾನು ತೊಡಗಿಸಿಕೊಳ್ಳುವುದರಿಂದ, ತಕ್ಷಣದ ಏಕಾಂತ ಹಾಗೂ ಪ್ರಶ್ನೆಗಳಿಂದ ಬಿಡುಗಡೆ ಪಡೆಯಬಹುದೇನೋ. ಆದರೆ ತಕ್ಷಣ ಮತ್ತು ಸಾರ್ವಕಾಲಿಕಗಳ ನಡುವೆ ತಕ್ಷಣದ ನೆಲೆಯಲ್ಲಿಯೇ ಬೆಸುಗೆ ಹಾಕಲು ಪ್ರಯತ್ನಿಸದ ಯಾವುದೇ ಕಾವ್ಯ ವಿಮರ್ಶೆ ಮಹತ್ವಪೂರ್ಣವಾಗುವುದಿಲ್ಲ.

ಇಲ್ಲಿಯ ಕೆಲವು ಲೇಖನಗಳು ವಿಮರ್ಶಕರಿಗಿಂತ ಹಿಂದಿನ ತಲೆಮಾರುಗಳಿಗೆ ಸೇರಿದ ಕವಿಗಳನ್ನು ಕುರಿತವಾದರೆ, ಬೇರೆ ಕೆಲವು ತಮ್ಮದೇ ಪೀಳಿಗೆಯ ಕವಿಗಳನ್ನು ಕುರಿತು ಕವಿ-ವಿಮರ್ಶಕರು ನಡೆಸುವ ಆಲೋಚನೆಗಳಾಗಿವೆ. ಎರಡರಲ್ಲಿಯೂ ಎದ್ದು ಕಾಣುವ ಸಂಗತಿಯೆಂದರೆ ಗುಣಗಳನ್ನು ಮಾತ್ರ ಗ್ರಹಿಸುವ, ದೋಷಗಳನ್ನು ಗ್ರಹಿಸಲಾರದ, ಗ್ರಹಿಸಿದರೂ ಹೇಳಲಾರದ ಪ್ರವೃತ್ತಿ. ಆದ್ದರಿಂದಲೇ ಇಲ್ಲಿ ಮತ್ತೆ ಮತ್ತೆ ಕೇಳಿಬರುವುದು ಸಕಾರಣವಾದ, ತರ್ಕಬದ್ಧವಾದ ಪ್ರಶಂಸೆಯ ದನಿಯೇ ಹೊರತು ವಿಮರ್ಶೆಯದಲ್ಲ.

ಬೇಂದ್ರೆಯವರನ್ನು ಕುರಿತ ಲೇಖನವು ತನ್ನ ಮಹತ್ವಾಕಾಂಕ್ಷೆಗೆ ಅನುಗುಣವಾದ ಅಧ್ಯಯನದ ಹರಹನ್ನು ಪಡೆದಿಲ್ಲ. ಬೇಂದ್ರೆ ಕಾವ್ಯದ ಕೆಲವು ಪ್ರಮುಖ ಅಭೀಪ್ಸೆಗಳನ್ನು ಗುರುತಿಸಹೊರಡುವ ಲೇಖಕರು ವಿಮರ್ಶೆಯ ಪರಿಭಾಷೆಗೆ ಹೊರತಾದ ಇಂದ್ರಿಯ ತಿರಸ್ಕಾರ, ದ್ರವೀಕರಣ, ಲೀಲಾವಿಲಾಸ, ಸಖ್ಯಯೋಗ ಮುಂತಾದ ಪದಗಳನ್ನು ಬಳಸುತ್ತಾರೆ. ತಪ್ಪೇನಿಲ್ಲ. ಆದರೆ ಅವುಗಳಲ್ಲಿ ಒಂದೊಂದಕ್ಕೆ, ಒಂದು ಎರಡು ನಿದರ್ಶನಗಳನ್ನು ಕೊಟ್ಟು ತೃಪ್ತರಾಗುತ್ತಾರೆಯೇ ವಿನಾ, ಆ ಮಾತುಗಳನ್ನು probe ಮಾಡುವ ಗೊಡವೆಗೆ ಹೋಗುವುದಿಲ್ಲ. ಹೀಗಾಗಿ ಅವರ ಅನಿಸಿಕೆಗಳು ಊಹಾಕಲ್ಪನೆಗಳಾಗುತ್ತವೆಯೇ ವಿನಾ ಸಾಧಿತವಾದ ಪ್ರಮೇಯಗಳಾಗುವುದಿಲ್ಲ. ಈ ಮಾತನ್ನು ಅವರ ಹಲವು ಲೇಖನಗಳ ಸಂದರ್ಭದಲ್ಲಿ ಹೇಳಬಹುದು. ರಾಮಾಯಣ ದರ್ಶನಂ ಕಾವ್ಯದ ಯೋಗ್ಯತೆಯ ನೆಲೆಗಳನ್ನು ಇನ್ನಷ್ಟು ಖಚಿತವಾಗಿ ರೂಪಿಸಬಹುದಾಗಿದ್ದ ಲೇಖನವು ಕೇವಲ ಕೆಲವು ವಿಚಾರಗಳ ಮಂಡನೆಯೊಂದಿಗೆ ತೃಪ್ತವಾಗುತ್ತದೆ. ಬರವಣಿಗೆಯು, ಆಳವಾದ ಸಂಗತಿಗಳನ್ನು ಹೇಳಹೊರಡುವಷ್ಟರಲ್ಲಿ ಮುಗಿದು ಹೋಗುತ್ತದೆ. ಈ ಕೊರತೆಯು ಪರಿಹಾರವಾಗುವುದು ಬಿಡಿ

ಕವನಗಳನ್ನು ಕುರಿತು ಚರ್ಚಿಸುವಾಗ. 'ನೆನಪುಗಳೆ ಹಾಗೆ,' 'ಯದುಗಿರಿಯ ಮೌನ ವಿಕಾಸ', 'ತೆರೆದಬಾಗಿಲು'–ಮುಂತಾದ ಕವನಗಳನ್ನು ಕುರಿತ ಲೇಖನಗಳು ಸಾಕಷ್ಟು ವಿವರವಾಗಿದ್ದು ಒಳನೋಟಗಳನ್ನು ಕೊಡುತ್ತವೆ. 'ವರ್ಣಾಶ್ರಮ', 'ಸಂಜೆದಾರಿ' ಮುಂತಾದ ಕವನಗಳ ಬಗೆಗಿನ ಬರೆಹಗಳು ನಾಲ್ಕು ಪುಟಗಳ ವ್ಯಾಪ್ತಿಯನ್ನು ಮೀರದೆ ಅತೃಪ್ತಿಕೊಡುತ್ತವೆ.

ಈ ಪುಸ್ತಕದ ಕೆಲವು ಲೇಖನಗಳು, ನಿಜವಾದ ಕಾವ್ಯಾಸಕ್ತಿಯ ಫಲವಾಗಿ ಮೂಡಿಬಂದವು. ಈ ಕೃತಿಯ ಯಶಸ್ಸಿಗೆ ಅವು ಕಾರಣ. ಬೇರೆ ಅನೇಕ ಲೇಖನಗಳು ಸ್ನೇಹಭಾರದಿಂದಲೋ, ಸಾಹಿತ್ಯೇತರ ಪ್ರೇರಣೆಗಳಿಂದಲೋ ಮೈತಳೆದವು. ದಾಕ್ಷಿಣ್ಯದ ಧಾಟಿಯನ್ನು ಕೈಬಿಡಲಾರದವು. ಗಾಜಿನ ಮನೆಯಲ್ಲಿ ವಾಸಿಸುವವರು ಬೇರೆಯವರ ಮೇಲೆ ಕಲ್ಲೆಸೆಯಬಾರದು, ನಿಜ. ಆದರೆ ನಿರ್ಮಮತೆಯಿಲ್ಲದ ಬರವಣಿಗೆಯು ವಿಮರ್ಶೆಯಾಗಲಾರದೆನ್ನುವ ಮಾತೂ ಕೂಡ ಅಷ್ಟೇ ನಿಜ. ವೆಂಕಟೇಶಮೂರ್ತಿಯವರು, 'ನಿಜವಾಗಿಯೂ' ತಮ್ಮ ಆಸಕ್ತಿಯನ್ನು ಕೆರಳಿಸುವ ಸಂಗತಿಗಳನ್ನು ಆರಿಸಿಕೊಂಡು, ಸಂಗ್ರಹವಿಮರ್ಶೆಯ ದಾರಿಯನ್ನು ತೊರೆದು, ವಿಮರ್ಶೆಯ ಪರಿಕರಗಳನ್ನು ರೂಢಿಸಿಕೊಂಡರೆ, ಅವರು ಮಹತ್ವದ ವಿಮರ್ಶೆಯನ್ನು ಬರೆಯಬಹುದು. ಏಕೆಂದರೆ, ವಿಮರ್ಶೆಯು, ಕವಿಗೆ ಬಿಡುವು ದೊರೆತಾಗ ತೊಡಗುವ ಕಲಾವಿಲಾಸಿ ಪ್ರಕ್ರಿಯೆಯಲ್ಲ.

ಹೊಸಕಾವ್ಯದ ಮುನ್ನೆಲೆ–೨ : ಸಂ: ಎಚ್. ಎಸ್. ವೆಂಕಟೇಶಮೂರ್ತಿ ; ರಾಘವೇಂದ್ರ ಪಾಟೀಲ.

ಸಮಕಾಲೀನ ಕವಿಗಳಲ್ಲಿ ಕೆಲವರ ಒಟ್ಟು ಕಾವ್ಯದ ಅಧ್ಯಯನ ಸ್ಥೂಲವಾಗಿಯೂ ಕೂಡ ಆದಂತಿಲ್ಲ. ಈ ಕೊರತೆಯನ್ನು ತುಂಬಲೆನ್ನುವಂತೆ ಹೊಸ ಕಾವ್ಯದ ಮುನ್ನೆಲೆ ಎಂಬ ಗ್ರಂಥವು ಎರಡು ಭಾಗಗಳಲ್ಲಿ ಹೊರಬಂದಿದೆ. ಎರಡನೆಯ ಭಾಗವು ಪ್ರಸ್ತುತ ಸಮೀಕ್ಷೆಯ ವಸ್ತು. ಅರವತ್ತು ತಲುಪಿರುವ ಕ. ವೆಂ. ರಾಜಗೋಪಾಲರಿಂದ ಮೂವತ್ತರ ಸಮೀಪದಲ್ಲಿರುವ ಸಿದ್ದಲಿಂಗಯ್ಯನವರವರೆಗೆ ಈ ಸಮೀಕ್ಷೆಯ ವ್ಯಾಪ್ತಿ ಹರಡಿದೆ. ನವ್ಯ ಹಾಗೂ ಅದರ ಎರಡನೆಯ ಪೀಳಿಗೆಯ ಕವಿಗಳನ್ನು ಕುರಿತಂತೆ ಇರುವ ಈ ಸಂಕಲನದ ನಿಲುವುಗಳಿಗೆ ಸಿದ್ದಲಿಂಗಯ್ಯರೊಬ್ಬರೇ ಅಪವಾದವೆಂದು ತೋರುತ್ತದೆ. ಈ ಲೇಖನಗಳಲ್ಲಿ ವಿಮರ್ಶಿತರಾಗಿರುವ ಕೆಲವು ಕವಿಗಳೇ, ತಾವು ವಿಮರ್ಶಕರಾಗಿ ಇತರ ಕವಿಗಳ ಬಗ್ಗೆ ಬರೆದಿರುವುದರಿಂದ ಬರವಣಿಗೆಯ ಬಗೆ ಪಾರಸ್ಪರಿಕವಾಗಿದೆ. ಇಂತಹ ವಿಮರ್ಶೆಯು ಪ್ರಶಂಸೆಯ ನೆಲೆಯನ್ನು ಬಿಟ್ಟು ವಸ್ತುನಿಷ್ಠವಾಗದಿದ್ದರೆ ಅನಾರೋಗ್ಯಕರವಾಗುತ್ತದೆ. ವಸ್ತುನಿಷ್ಠವಾದರೆ, ಕವಿಗಳ ಮತ್ತು ಕನ್ನಡದ ಕವಿತೆಯ ಬೆಳವಣಿಗೆಗೆ ನೆರವಾಗುತ್ತದೆ.

ಪ್ರಸ್ತುತ ಸಂಕಲನದ ಮೊದಲ ಲೇಖನವನ್ನು ಅರವಿಂದ ನಾಡಕರ್ಣಿಯವರು ಬರೆದಿದ್ದಾರೆ. ವಿಮರ್ಶಿತ ಕವಿ ದೇಶ ಕುಲಕರ್ಣಿ. ಕಾವ್ಯ, ಕಾವ್ಯವಿಮರ್ಶೆ ಮತ್ತು ಸಾಮಾಜಿಕ ಸನ್ನಿವೇಶಗಳನ್ನು ಕುರಿತು ತಮ್ಮ ಅಭಿಪ್ರಾಯಗಳ ಕೋಟನ್ನು ನೇತು ಹಾಕಲು, ದೇಶ ಕುಲಕರ್ಣಿಯವರ ಕಾವ್ಯವನ್ನು ತೂಗುವೊಳೆಯಾಗಿ ಬಳಸುವ ವಿಮರ್ಶಕರು ಬರವಣಿಗೆಯ ಮೇಲೆ ಹಿಡಿತ ಹೊಂದಿಲ್ಲ. ಪದಗಳನ್ನು, ಗುಣವಾಚಕಗಳನ್ನು ಖಚಿತವಾಗಿ ಬಳಸಲಾರದ ವಿಮರ್ಶಕನು ಹೇಳಬೇಕೆನಿಸಿದ್ದನ್ನು ಹೇಳುವುದಿಲ್ಲ. ಬೇರೆ ಏನನ್ನೋ ಹೇಳಿರುತ್ತಾನೆ. ಸಿದ್ದಲಿಂಗ ಪಟ್ಟಣಶೆಟ್ಟಿರ ಕಾವ್ಯವನ್ನು ಕುರಿತ ಸುಮತೀಂದ್ರ ನಾಡಿಗರ ಲೇಖನವು ಕವಿಯ ಕೆಲವು ಸಾಧನೆ ಮತ್ತು ಪರಿಮಿತಿಗಳನ್ನು ಗುರುತಿಸುವ ಪ್ರಯತ್ನ ಮಾಡುತ್ತದೆ. 'ವ್ಯಾಕರಣ ನಿಯಮಗಳನ್ನು, ಶಬ್ದಕೋಶಗಳನ್ನು ಬದಿಗೊತ್ತುವ, ಶಿಲ್ಪನಾಸಾಮರ್ಥ್ಯದ ಅಭಾವ ಪಟ್ಟಣಶೆಟ್ಟರಲ್ಲಿ ಹೇರಳವಾಗಿದೆ' ಎನ್ನುವಂತಹ ಮಾತುಗಳನ್ನು ಶೈಲಿಶಾಸ್ತ್ರದ ಪರಿಕಲ್ಪನೆಗಳನ್ನು ಸರಿಯಾಗಿ ರಕ್ತಗತ ಮಾಡಿಕೊಳ್ಳದೆ ಮೂಡಿ ಬಂದಿದೆ. ಚಂದ್ರಶೇಖರ ಪಾಟೀಲರ ಕವಿತೆಯನ್ನು ಕುರಿತು ಬರೆದಿರುವ ವಿಮರ್ಶಕರು (ಟಿ. ಎಸ್. ರಘುನಾಥ್) ನವ್ಯ ವಿಮರ್ಶೆ ಕೊಡುವ ಸೂತ್ರಗಳ ಹಿನ್ನೆಲೆಯಲ್ಲಿ ಪಾಟೀಲರ ಬೆಲೆಕಟ್ಟುವ ಲಾಭದಾಯಕವಲ್ಲದ ಕೆಲಸದಲ್ಲಿ ತೊಡಗಿದ್ದಾರೆ. ಪಾಟೀಲರಂತೆ ವ್ಯಂಗ್ಯವನ್ನು ಬಳಸುವುದು ನಿಜವಾದ ಕಾವ್ಯದ ದಾರಿಯಲ್ಲವೆನ್ನುವಾಗ, ವ್ಯಂಗ್ಯದ ಹಿಂದಿನ ವಿಷಾದವನ್ನು ಗಮನಿಸುವಂತೆ ಕಾಣುವುದಿಲ್ಲ. ಪಾಟೀಲರ ವ್ಯಂಗ್ಯವು ಮೇಲುನೋಟಕ್ಕೆ ವ್ಯಕ್ತಿಗಳನ್ನು ಕುರಿತಂತೆ ಭಾಸವಾದರೂ, ವಾಸ್ತವದಲ್ಲಿ ಅದು ಆ ವ್ಯಕ್ತಿಗಳು ಪ್ರತಿನಿಧಿಸುವ ಸಂಗತಿಗಳನ್ನು, ಅವರನ್ನು ಸೃಜಿಸಿದ ಸನ್ನಿವೇಶವನ್ನು ಕುರಿತು ಇರುತ್ತದೆ. 'ಗಾಂಧೀ ಸ್ಮರಣೆ'ಯ ಮಹತ್ವವಿರುವುದು ಇಲ್ಲಿಯೇ.

ತಿರುಮಲೇಶರ ಕಾವ್ಯವನ್ನು ಕುರಿತ ಲಕ್ಷ್ಮೀನಾರಾಯಣಭಟ್ಟರ ಲೇಖನ ತುಂಬಾ ತಡವಾಗಿ ಪ್ರಕಟವಾಗುತ್ತಿದೆ. ಏಕೆಂದರೆ ಈ ಅವಧಿಯಲ್ಲಿ ಕವಿ, 'ಮಹಾಪ್ರಸ್ಥಾನ'ವನ್ನು ಮೀರಿ ಬೆಳೆದಿದ್ದಾರೆ. ಆದರೂ ತಿರುಮಲೇಶರ ಕಾವ್ಯವನ್ನು ಅವರ ಮೇಲೆ ಪ್ರಭಾವ ಬೀರಿದ, ಅವರಿಂದ ಪ್ರಭಾವಿತರಾದ ಇತರ ಕವಿಗಳ ನಡುವೆ ಇಟ್ಟು ನೋಡುವ ಈ ಲೇಖನವು ಸಾಕಷ್ಟು ಸಮಗ್ರವೂ ಸಮರ್ಥವೂ ಆಗಿದೆ. ಕವಿತೆಯ ವಸ್ತು, ರೂಪ, ಶೈಲಿಗಳೆಲ್ಲವನ್ನೂ ಸ್ಥೂಲವಾಗಿಯಾದರೂ ಈ ಪರಿಶೀಲನೆ ಒಳಗೊಳ್ಳುತ್ತದೆ.

ಎಚ್. ಎಸ್. ವೆಂಕಟೇಶಮೂರ್ತಿಯವರು 'ಸಿಂದಾಬಾದನ ಆತ್ಮಕಥೆ'ಯನ್ನು ಪ್ರಕಟಿಸುವವರೆಗಿನ ಕವನಗಳನ್ನು ಪರಿಶೀಲಿಸುವ ನರಹಳ್ಳಿ ಬಾಲಸುಬ್ರಹ್ಮಣ್ಯ ಅವರು, ತಮ್ಮ ಲೇಖನದ ಮೊದಲ ಭಾಗದಲ್ಲಿ ಕಾವ್ಯದ ಕೆಲವು ಬೀಸುಮಾತುಗಳನ್ನು ಹೇಳುತ್ತಾರೆ. "ಕಾವ್ಯ ಈಗ ಮತ್ತೆ ಸಮುದಾಯದ ದನಿಯಾಗಬೇಕೆನ್ನುವ

ಪರಿಸರ" ಈಗ ಸೃಷ್ಟಿಯಾಗಿದೆಯೆನ್ನುವ ವಿಮರ್ಶಕರು, ವೆಂಕಟೇಶಮೂರ್ತಿಯವರ ಕಾವ್ಯವು ಆ ಕೆಲಸವನ್ನು ಮಾಡುತ್ತಿದೆಯೇ ಎಂಬ ಪ್ರಶ್ನೆಯೊಂದಿಗೆ ಮುಖಾಮುಖಿ ಯಾಗುವುದಿಲ್ಲ. ಅದನ್ನು ಬಿಟ್ಟರೆ ಈ ಲೇಖನವು ಅಚ್ಚುಕಟ್ಟಾಗಿ ಮೂರ್ತಿಯವರ ಕಾವ್ಯದ ಹಲವು ನೆಲೆಗಳನ್ನು ಪರಿಶೀಲಿಸುತ್ತದೆ. ಯಾರ ಬಗ್ಗೆಯಾದರೂ ಮುಲಾಜಿಲ್ಲದೆ ತಮಗನ್ನಿಸಿದನ್ನು ಬರೆಯುವ ದೇಶಕುಲಕರ್ಣಿಯವರು, ಲಕ್ಷ್ಮಣ ರಾಯರನ್ನು ಕುರಿತ ಲೇಖನದಲ್ಲೂ ಅದೇ ಬಗೆಯ ಪ್ರಾಮಾಣಿಕತೆಯನ್ನು ತೋರಿಸಿದ್ದಾರೆ. ಆದರೆ ಕವಿಯ ಕೊರತೆಗಳನ್ನು ಚುರುಕಾಗಿ ಗುರುತಿಸಬಲ್ಲ ಇಂತಹ ಬರವಣಿಗೆಯೂ, ಆ ಕೊರತೆಗಳ ಕಾರಣಗಳನ್ನು, ಪರಿಹಾರದ ಬಗೆಗಳನ್ನು ಹುಡುಕುವ ರಚನಾತ್ಮಕ ಕೆಲಸದಲ್ಲಿ ತೊಡಗುವುದಿಲ್ಲ. ಎಂ. ಎನ್. ಜಯಪ್ರಕಾಶ್ ಮತ್ತು ಜಯಂತ ಕಾಯ್ಕಿಣಿಯವರ ಕಾವ್ಯವನ್ನು ಕುರಿತು ಬಂದಿರುವ ಲೇಖನಗಳು ಆ ಕವಿಗಳಿಗೆ ನ್ಯಾಯ ದೊರಕಿಸಿಕೊಡದ ಪ್ರಾಥಮಿಕ ಪ್ರಯತ್ನಗಳು. ಕಾವ್ಯ ವಿಮರ್ಶೆಯು ಕೇವಲ ಎರವಲು ಮಾತುಗಳ ಅಥವಾ ನಿರ್ದಶನಗಳ ಬಾಹುಳ್ಯದಿಂದ ಸಾಧ್ಯವಾಗುವ ಸಂಗತಿಯಲ್ಲ.

ಒಟ್ಟು ಸಂಕಲನದ ಕಾಲುಭಾಗದಷ್ಟಿರುವ ಕ. ವೆಂ. ರಾಜಗೋಪಾಲರ ಲೇಖನವು, ಸಂಕಲನದಲ್ಲಿಯೇ ಅತ್ಯುತ್ತಮವಾಗಿದೆ. ಜಯಸುದರ್ಶನ ಅವರ ಕಾವ್ಯದ ತಾತ್ವಿಕತೆ, ರೂಪ ಭಾಷೆ, ಬಂಧ ಇವೆಲ್ಲವನ್ನೂ ಬಹಳ ಸೂಕ್ಷ್ಮವಾಗಿ ಪರಿಶೀಲಿಸಿರುವ ಕವೆಂ. ಅವರು, ಕವಿಯೊಬ್ಬನ ಕಾವ್ಯದ ಸಮಗ್ರ ವಿಮರ್ಶೆ ಹೇಗಿರಬೇಕೆಂದು ತೋರಿಸಿಕೊಟ್ಟಿದ್ದಾರೆ. ಆದರೆ ವಾಕ್ಯಗಳ ನಡುವೆ ತರ್ಕಬದ್ಧ ಸಂಬಂಧವಿಲ್ಲದ, ನಿರ್ದಿಷ್ಟ ಹಂದರವಿಲ್ಲದ ಇವರ ಬರವಣಿಗೆಯ ರೀತಿಯು, ಲೇಖನದ ವಾಚನೀಯತೆಯನ್ನು ಸೊನ್ನೆ ಮಾಡುತ್ತದೆ. ನಮ್ಮ ಸಂದರ್ಭದ ಉತ್ತಮ ವಿಮರ್ಶಕರಲ್ಲಿ ಒಬ್ಬರಾಗಬಹುದಾಗಿದ್ದ ಕವೆಂ. ಅವರು ಹಾಗಾಗದಿರುವುದಕ್ಕೆ ಅವರದೇ ಪರಿಮಿತಿಗಳು ಕಾರಣ.

ಸಿದ್ಧಲಿಂಗಯ್ಯನವರ ಕಾವ್ಯವನ್ನು ಕುರಿತು ಲಿಂಗದೇವರು ಹಳೇಮನೆಯವರು ಬರೆದಿದ್ದಾರೆ. ಕವಿ ಮತ್ತು ವಿಮರ್ಶಕರಿಬ್ಬರೂ, ಬಂಡಾಯದ ಏಕೈಕ ಪ್ರತಿನಿಧಿ ಗಳಾಗಿ ಈ ಸಂಕಲನದಲ್ಲಿದ್ದಾರೆ. ದಲಿತ ಕಾವ್ಯದ ಸಂದರ್ಭ ಮತ್ತು ಈ ಕವಿಯ ವಿಶಿಷ್ಟತೆಗಳ ಚರ್ಚೆಯು ಇಲ್ಲಿ ಸಮರ್ಪಕವಾಗಿಯೇ ನಡೆದಿದೆ.

'ಹೊಸ ಕಾವ್ಯದ ಮುನ್ನೆಲೆ'ಯಂತಹ ಸಂಕಲನಗಳ ಉದ್ದೇಶ ಸ್ತುತ್ಯ ವಾದುದೇ. (ಅದು ಸ್ವವಿಮರ್ಶೆಗೆ ದಾರಿಮಾಡಿಕೊಟ್ಟಾಗ) ಆದರೆ ಸಮಕಾಲೀನ ಕಾವ್ಯದ ಬಗೆಗೆ ಅಭಿಪ್ರಾಯಗಳನ್ನು ರೂಪಿಸಬಯಸುವ 'ಮಿತ್ರಕೂಟ'ದ ರಚನೆಗೆ ಇಂತಹ ಸಂಕಲನಗಳಿಂದ ನೆರವಾಗಬಾರದು. ಕವಿ ಮತ್ತು ವಿಮರ್ಶಕರು ತಮ್ಮ ತಮ್ಮ ಕೆಲಸದಲ್ಲಿ ಸ್ವತಂತ್ರವಾಗಿ, ಏಕಾಂತದಲ್ಲಿ ಮಗ್ನರಾಗುವುದೇ ಹೆಚ್ಚು ಸೂಕ್ತ ವೆಂದು ನನಗೆ ತೋರುತ್ತದೆ.

**ಪರಿವೀಕ್ಷಣೆ : ಸಿ.ಪಿ.ಕೆ.**

ವಿಮರ್ಶಾಗ್ರಂಥಗಳ ರಚನೆಯಲ್ಲಿ ಹಲವು ದಾಖಲೆಗಳನ್ನು ಸ್ಥಾಪಿಸಿರುವ ಸಿ.ಪಿ.ಕೆ. ಯವರ 'ಪರಿವೀಕ್ಷಣೆ'ಯು ಅವರ ಇತರ ಕೃತಿಗಳು ಹಾಕಿ ಕೊಟ್ಟಿರುವ ಮಾರ್ಗವನ್ನೇ ಅನುಸರಿಸಿವೆ. ಇವರ ಲೇಖನಗಳು ಸ್ವಯಂಪೂರ್ಣವೇ ಹೊರತು ಪರಸ್ಪರ ಸಂಬಂಧಿತವಲ್ಲ. ಖಚಿತವಾದ ಮನೋಧರ್ಮ, ವಿಮರ್ಶಾವಿಧಾನ, ತಾಂತ್ರಿಕ ಉಪಕರಣಗಳು, ಪಾರಿಭಾಷಿಕವಾದ ಶೈಲಿ ಮುಂತಾದವನ್ನು ರೂಪಿಸಿ ಕೊಂಡಿರುವ ವಿಮರ್ಶಕನೊಬ್ಬನ ವ್ಯವಸ್ಥಿತ ವಿಚಾರಸರಣಿಯು ಇಲ್ಲಿ ಕಾಣಸಿಗುವು ದಿಲ್ಲ. ಅದರ ಬದಲು ಸಾಕಷ್ಟು ಓದಿಕೊಂಡ, ಆರಿಸಿಕೊಂಡ ವಿಷಯದ ಬಗ್ಗೆ ಸಹೃದಯರಾಗಿ ಆದರೆ ವಿಮರ್ಶಾತ್ಮಕವಾಗಿ ಚಿಂತಿಸುವ ಕಿರಿಯಾಳದ ಬರವಣಿಗೆ ಗಳು ಇಲ್ಲಿ ಹೇರಳವಾಗಿ ದೊರೆಯುತ್ತವೆ.

ಸಾಹಿತ್ಯಕೃತಿಯು, - ಅದರ ಆಶಯವೇನೇ ಇರಲಿ ಸಾಹಿತ್ಯಕವಾಗಿಯೇ ವಿಶಿಷ್ಟವಾಗುವುದೆಂಬ ಅಂಶದ ಕಡೆಗೆ ಇವರು ಅಷ್ಟು ಗಮನ ಕೊಡದೆ ಹೋಗು ವುದರಿಂದ, 'ಸಾಹಿತ್ಯ ಕೃತಿಯು ಏನು ಹೇಳುತ್ತದೆ' ? ಎನ್ನುವ ಪ್ರಶ್ನೆಗೆ ಉತ್ತರ ಕಂಡುಕೊಳ್ಳುವುದೇ ಇವರಿಗೆ ಮುಖ್ಯ ಆಸಕ್ತಿಯಾಗುತ್ತದೆ. ವಿಮರ್ಶಾತ್ಮಕ ಧೋರಣೆಯನ್ನು ಕುರಿತಂತೆ ಒಂದು ಅನುಮಾನ ಮೂಡುತ್ತದೆ. ಕೆಲವು ಮಹತ್ವದ ಕವಿಗಳ ಬಗ್ಗೆ ಮಾತನಾಡುವಾಗ (ಪಂಪ, ವಚನಕಾರರು, ಗೋವಿಂದ ಪೈ) ನ್ಯಾಯವಾಗಿಯೇ ವಿಮರ್ಶಾತ್ಮಕವಾಗುವ ಲೇಖಕರು, ಬೇರೆ ಕೆಲವರ ಬಗ್ಗೆ ಬರೆಯುವಾಗ ಕೇವಲ ಪ್ರಶಂಸೆಯ ಅಥವಾ ಸಮರ್ಥನೆಯ ಧಾಟಿಯನ್ನು ತಳೆಯು ತ್ತಾರೆ. (ಕು.ವೆಂ.ಪು., ಹಾ.ಮಾ. ನಾಯಕ, ಕನಕದಾಸರು) ಇದು ವಿಮರ್ಶಕರ ಪೂರ್ವಗ್ರಹವನ್ನಲ್ಲದಿದ್ದರೂ, ದಾಕ್ಷಿಣ್ಯವನ್ನಾದರೂ ತೋರಿಸುವುದೆಂದು ನನಗೆ ತೋರುತ್ತದೆ.

ಈ ಲೇಖನಗಳ ವಿಷಯ ವೈವಿಧ್ಯ ವಿಪುಲವಾದುದು. ಅರ್ಥನೇಮಿ ಪುರಾಣದಿಂದ ಹಿಡಿದು ಜನಪದ ಹಾಸ್ಯದವರೆಗೆ, ಕನಕದಾಸರ ಅನನ್ಯತೆಯಿಂದ 1982ರ ಕನ್ನಡ ಕಾವ್ಯದ ಸಮೀಕ್ಷೆಯವರೆಗೆ ಹರಡಿರುವ ಈ ಆಸಕ್ತಿವಲಯಗಳು ಇನ್ನಷ್ಟು ಸೀಮಿತವಾದರೆ, ಈ ಲೇಖಕರ ವಿಮರ್ಶೆಯು, ಹೊಸ ಆಳಗಳನ್ನು ಆಯಾಮಗಳನ್ನು ಕಂಡುಕೊಳ್ಳಬಹುದೆಂದು ನನಗೆ ತೋರುತ್ತದೆ. ಹಾಗಲ್ಲದೆ ಹೋದರೆ, ನಿಜವಾಗಿಯೂ ಮಹತ್ವದ ಒಳನೋಟಗಳೂ ಕೂಡ, ಹತ್ತರ ನಡುವೆ ಹನ್ನೊಂದಾಗಿ ಸೇರಿಕೊಂಡು ಸಮಕಾಲೀನ ವಿಮರ್ಶಾವಲಯಗಳ ಗಮನ ಸೆಳೆಯು ವುದರಲ್ಲಿ ವಿಫಲವಾಗುವ ಸಂಭವವಿದೆ.

ಕನ್ನಡ ಕಾವ್ಯಗಳಲ್ಲಿ ನವರಸಗಳು (ಸೋದಾಹರಣ ಸಂಗ್ರಹ) : ಮು. ನ. ಅನಂತ ರಾಮನ್

ಪಾಂಡಿತ್ಯ ಮತ್ತು ಸ್ವಂತಿಕೆಗಳನ್ನು ಸಮಪ್ರಮಾಣದಲ್ಲಿ ಅಪೇಕ್ಷಿಸುವ ಕ್ಷೇತ್ರ ವೊಂದರಲ್ಲಿ, ಪ್ರೊಫೆಷನಲ್ ಅಲ್ಲದ ಬರಹಗಾರರೊಬ್ಬರು ನಡೆಸಿರುವ ಪ್ರಾಥಮಿಕ ಪ್ರಯತ್ನವಾದ ಈ ಕೃತಿಯು ಕುತೂಹಲಕಾರಿಯಾಗಿದೆ. ಪು.ತಿ.ನ. ರವರಿಂದ 'ರಸಸಿದ್ಧಾಂತಕ್ಕೆ ಪ್ರವೇಶಿಕೆ'ಯೆಂಬ ಶಿಫಾರಸನ್ನು ಪಡೆದಿದ್ದರೂ ಪಾರಿಭಾಷಿಕ ಪದಗಳನ್ನು ಅರ್ಥಮಾಡಿಕೊಳ್ಳುವುದರಲ್ಲಿ ಅನುಭವಿಸಿರುವ ಸೋಲು ಮತ್ತು ಅದರ ಪರಿಣಾಮವಾದ ಗೊಂದಲಗಳು ಇಡೀ ಪುಸ್ತಕವನ್ನು ವ್ಯಾಪಿಸಿವೆ. ಅವ್ಯವಸ್ಥಿತವಾದ, ಜಾಳುಜಾಳಾದ ನಿರೂಪಣಾವಿಧಾನವು ಕೃತಿಯ ಸಂವಹನೀಯತೆ ಯನ್ನು ಕಡಿಮೆಮಾಡಿವೆ. ಪುಸ್ತಕದ ತುಂಬಾ ಬಂದಿರುವ ತಾಂತ್ರಿಕ ವಿವರಗಳು ಕೆಲವೊಮ್ಮೆ ಪಾಂಡಿತ್ಯದ ಭ್ರಮೆಯನ್ನು ಹುಟ್ಟಿಸಿದರೂ ಕೂಡ, ಇದು ಅವರಿವರಿಂದ ಆರಿಸಿಕೊಂಡ ಅಭಿಪ್ರಾಯಗಳ ಸಂತೆಯೆಂಬ ಸತ್ಯವು ಬಹುಬೇಗ ಗೋಚರವಾಗು ತ್ತದೆ.

ಪ್ರಾಚೀನ ಮತ್ತು ಅರ್ವಾಚೀನ ಕವಿತೆಗಳಲ್ಲಿ ನವರಸಗಳನ್ನು ಹುಡುಕುವ ಪ್ರಯತ್ನವು ಅನೇಕ ಸವಾಲುಗಳನ್ನು ಎದುರಿಸಬೇಕಾಗುತ್ತದೆ. ಗಣಪತಿಯ ಕಿರೀಟದ ಶ್ರೇಷ್ಠ ರತ್ನಗಳು ಶೃಂಗಾರರಸವನ್ನೂ, ಅವನ ಸೊಂಡಿಲಿನಿಂದ ಸಿಡಿಯುವ ತುಂತುರಹನಿಯು ಶಾಂತರಸವನ್ನೂ ಸೂಚಿಸುತ್ತವೆಂಬ ಮಾತಿಗೆ ಅಳಬೇಕೋ ನಗಬೇಕೋ ಗೊತ್ತಾಗುವುದಿಲ್ಲ. ಅಡಿಗರ 'ಭೂತ' ಕವನದ ಮುಖ್ಯಸಾಲುಗಳು ಭೀಭತ್ಸರಸಕ್ಕೆ ನಿದರ್ಶನವಾದಾಗ ಅಂತಹ ಪ್ರಯತ್ನದ ಔಚಿತ್ಯವು ಪ್ರಶ್ನಾರ್ಹ ವಾಗುತ್ತದೆ. ಹೊಸಗನ್ನಡದ ಕವಿತೆಗಳು ಪ್ರಾಚೀನ ಮೀಮಾಂಸಕರ ಅರ್ಥದಲ್ಲಿ ರಸಾನುಭವ ಕೊಡಬಲ್ಲವೆಂಬ ಅನಿಸಿಕೆಯೇ ಗ್ರಾಹ್ಯವಲ್ಲವೇನೋ ? ಇಂತಹ ಪ್ರಯತ್ನಗಳನ್ನು ಸಹಿಸಲು ಸಾಧ್ಯವಾಗುವುದು ಅಭಿವ್ಯಕ್ತಿ ಸ್ವಾತಂತ್ರ್ಯದ ಬಗ್ಗೆ ನಮಗಿರುವ ಗೌರವದಿಂದ ಮಾತ್ರ.

ವಿಮರ್ಶೆಯ ಪರಿಭಾಷೆ : ಓ ಎಲ್. ನಾಗಭೂಷಣಸ್ವಾಮಿ

1983 ರಲ್ಲಿ ತಮ್ಮ ಯೋಗ್ಯತೆಗೆ ಅನುಗುಣವಾದ ಪ್ರಶಂಸೆ ಮತ್ತು ಪ್ರಸಿದ್ಧಿಗಳನ್ನು ಪಡೆದ ಆಕರ ಗ್ರಂಥ/ವಿಮರ್ಶಾಕೃತಿಗಳಲ್ಲಿ ಇದೂ ಕೂಡ ಒಂದು. ಬುದ್ಧಿಶಕ್ತಿ ಮತ್ತು ಅಲ್ಪಸಿದ್ಧತೆಗಳ ಫಲವಾಗಿ ಮೂಡಿಬರುವ ಲೇಖನಗಳೇ ವಿಜೃಂಭಿಸಿರುವ ಇಂದಿನ ದಿನಗಳಲ್ಲಿ, ಹತ್ತು ವರ್ಷಗಳ ಅವಿರತ ಪರಿಶ್ರಮದ ಪರಿಣಾಮವಾದ ಈ ಗ್ರಂಥವು ಶಾಶ್ವತವಾದ ಮಹತ್ವವನ್ನು ಪಡೆಯಲಿದೆ. ತಾನು ನಿರೂಪಿಸುತ್ತಿರುವ ಪರಿಕಲ್ಪನೆಗಳನ್ನು ಕುರಿತು ಬಹುಶ್ರುತವಾದ ತಿಳಿವಳಿಕೆ,

ನಿದರ್ಶನಗಳ ಆಯ್ಕೆಯಲ್ಲಿ ತೋರಿಸಿರುವ ಪ್ರೌಢವಾದ ಸಾಹಿತ್ಯಾಭಿರುಚಿ ಮತ್ತು ಖಚಿತವಾದ, ನೇರವಾದ ನಿರೂಪಣಾ ಶೈಲಿಗಳು ಈ ಗ್ರಂಥದ ಮಹತ್ವವನ್ನು ಹೆಚ್ಚಿಸಿರುವ ಸಂಗತಿಗಳು. ಅನಂತಮೂರ್ತಿಯವರು ಮುನ್ನುಡಿಯಲ್ಲಿ ಹೇಳಿರುವಂತೆ, ಇದು "ತನ್ನ ರೂಪುರೇಷೆಗಳಲ್ಲಿ ಕನ್ನಡಕ್ಕೆ ಅನನ್ಯವಾದ" ಕೃತಿ; ಸಾಹಿತ್ಯ ವಿಮರ್ಶೆಯ ಕಾರ್ಯವನ್ನು ಇನ್ನಷ್ಟು ಮೌಲಿಕವೂ, ಜವಾಬ್ದಾರಿಯುತವೂ ಆಗಿಸುವ ಸಾಧ್ಯತೆಗಳನ್ನು ನಿಜವಾಗಿಸುವ ಸಾಧನೆ.

ಈ ಕೃತಿಯ ವಿವರವಾದ ವಿಮರ್ಶೆಗೆ ತೊಡಗುವ ಮೊದಲು ಇದರ ಉದ್ದೇಶ ಮತ್ತು ಸ್ವರೂಪಗಳನ್ನು ಲೇಖಕರ ಮಾತುಗಳಲ್ಲಿಯೇ ಸಂಗ್ರಹಿಸಬಹುದು.

" ಈ ಪುಸ್ತಕದಲ್ಲಿ ಸುಮಾರು ಮುನ್ನೂರು ಮುಖ್ಯ ಉಲ್ಲೇಖಗಳ ಅಡಿಯಲ್ಲಿ, ಕಿರು ಲೇಖನಗಳ ರೂಪದಲ್ಲಿ ಸಾವಿರಕ್ಕೂ ಹೆಚ್ಚು ಪಾರಿಭಾಷಿಕ ಪದಗಳ ಪರಿಚಯ, ಚರ್ಚೆಯನ್ನು ಕೊಟ್ಟಿದೆ. ಪ್ರತಿಯೊಂದು ಉಲ್ಲೇಖವೂ ಆಯಾಪದದ ಅರ್ಥ, ಬೆಳವಣಿಗೆ, ಇತಿಹಾಸ; ಅದಕ್ಕೆ ಸಂಬಂಧಪಟ್ಟಂತೆ ಸಾಹಿತ್ಯ ಕೃತಿಗಳಿಂದ ಆಯ್ದ ಉದಾಹರಣೆಗಳು; ಕನ್ನಡ ವಿಮರ್ಶೆಯಲ್ಲಿ ಆ ಪರಿಭಾಷಿಕ ಪದ ಬಳಕೆಯಾಗಿರುವ ಬಗ್ಗೆ ನಿದರ್ಶನ ಇವನ್ನೆಲ್ಲ ಸಾಧ್ಯವಾದ ಮಟ್ಟಿಗೂ ಒಳಗೊಂಡಿದೆ. ಮುಖ್ಯ ಉಲ್ಲೇಖಗಳನ್ನು ಕನ್ನಡದ ಅಕಾರಾದಿಯಲ್ಲಿ ಅಳವಡಿಸಿದೆ. ಒಂದೊಂದು ಮುಖ್ಯ ಶೀರ್ಷಿಕೆಯ ಅಡಿಯಲ್ಲಿ ಅದಕ್ಕೆ ಸಂಬಂಧಿಸಿದ ಇತರ ಪರಿಭಾಷಿಕಗಳನ್ನು ಚರ್ಚಿಸಿದೆ. ಉದಾ.ಗೆ 'ಪ್ಲಾಟ್' ಎಂಬ ಲೇಖನವು ಅದೇ ವಿಷಯಕ್ಕೆ ಸಂಬಂಧಿಸಿದ ಇನ್ನಿತರ ಸುಮಾರು ಇಪ್ಪತ್ತೈದು ಪದಗಳ ಚರ್ಚೆಯನ್ನು ಒಳಗೊಂಡಿದೆ. ಈ ಕ್ರಮದಿಂದ ಪಾರಿಭಾಷಿಕ ಪದಗಳ ಸಂಬಂಧ ವ್ಯತ್ಯಾಸಗಳು ಓದುಗರಿಗೆ ಸ್ಪಷ್ಟವಾಗಬಹುದು. ......ಪರಿಭಾಷಿಕವೊಂದು ಕನ್ನಡದಲ್ಲಿ ಬಳಕೆಯಾಗಿರುವ ನಿದರ್ಶನಗಳನ್ನು ನೀಡುವಾಗ, ಸಾಧ್ಯವಾದ ಮಟ್ಟಿಗೂ, ಕನ್ನಡದ ಕೃತಿಯೊಂದನ್ನು ಕುರಿತು ವಿಮರ್ಶಕರು ಆ ಪದವನ್ನು ಬಳಸಿಕೊಂಡು ನಿರ್ಣಯಾತ್ಮಕವಾಗಿ ಹೇಳುವ ಸಂದರ್ಭಗಳನ್ನೇ ಆಯ್ದುಕೊಳ್ಳಲಾಗಿದೆ. ಪ್ರತಿ ಉಲ್ಲೇಖದ ಕೊನೆಗೆ ಆಯಾ ವಿಷಯವನ್ನು ಕುರಿತು ಹೆಚ್ಚಿನ ಓದಿಗೆ ಸಹಾಯಕವಾಗುವ ಲೇಖನ, ಗ್ರಂಥಗಳ ಪಟ್ಟಿ ಇದೆ." (VII)

ಮೇಲಿನ ಮಾತುಗಳು ಈ ಗ್ರಂಥವು ಎಷ್ಟೊಂದು ಉಪಯುಕ್ತವೆಂಬ ಸಂಗತಿಯನ್ನು ಸ್ಪಷ್ಟಪಡಿಸುತ್ತವೆ. ಇದು ಪಾರಿಭಾಷಿಕ ಶಬ್ದಗಳಿಗೆ ಸಮಾನಾರ್ಥಕವಾದ ಪದಗಳನ್ನು ಕೊಡುವ ಕೋಶವಲ್ಲ. ಕೇವಲ ತಾಂತ್ರಿಕವಾದ ಮಾಹಿತಿಗಳನ್ನು ಮಾತ್ರ ಕೊಡುವುದರ ಮೂಲಕ ವೈಯಕ್ತಿಕತೆಯ ಸ್ಪರ್ಶವನ್ನು ಕಳೆದುಕೊಂಡಿರುವ ನೀರಸ ಬರವಣಿಗೆಯೂ ಅಲ್ಲ. ಕನ್ನಡ ವಿಮರ್ಶೆಯು ಕೇವಲ

ಪ್ರಶಂಸೆ ಮತ್ತು ವರ್ಣನೆಗಳಲ್ಲಿ ನಿರತವಾಗಿ, ಅಖಚಿತವಾದ ಗುಣವಾಚಕಗಳಲ್ಲಿ ವಿಜೃಂಭಿಸುವ ಚಾಳಿಯನ್ನು ಬಿಟ್ಟು ಸಾಕಷ್ಟು ಪ್ರೌಢವಾಗುತ್ತಿರುವ ಸಂಧಿ ಸಮಯದಲ್ಲಿ ಬಂದಿರುವ ಈ ಕೃತಿಯು ಐತಿಹಾಸಿಕ ಮಹತ್ವವನ್ನು ಹೊಂದಿದೆ.

ಯಾವುದಾದರೂ ಒಂದು ಪರಿಕಲ್ಪನೆಯನ್ನು ಪರಿಚಯಿಸುವಾಗ ಕೇವಲ ಅದರ ಅರ್ಥ ವಿವರಣೆಯಿಂದ ತೃಪ್ತವಾಗದೆ, ಕನ್ನಡದ ಸಂದರ್ಭದಲ್ಲಿ ಆ ಪದಕ್ಕೆ ಸಂಬಂಧಪಟ್ಟ ಹಾಗೆ ನಡೆದಿರುವ ವಾಗ್ವಾದಗಳನ್ನು ಕೂಡಾ ದಾಖಲೆ ಮಾಡುವುದು ಈ ಪುಸ್ತಕದ ಹೆಚ್ಚುಗಾರಿಕೆ. ಉದಾಹರಣೆಗೆ ಸಂಕೀರ್ಣತೆಯನ್ನು ಕುರಿತು ಬರೆಯು ವಾಗ, ಆ ಪರಿಕಲ್ಪನೆಯನ್ನು ಸಾಹಿತ್ಯ ವಿಮರ್ಶೆಯ ಮಾನದಂಡವಾಗಿ ಬಳಸುವ ಧೋರಣೆಯನ್ನು ಮುಂದಿಡುವುದರ ಜೊತೆಗೆ ಅದರ ಬಗ್ಗೆ ಮಾಡಲಾಗಿರುವ ಆಪಾದನೆಗಳನ್ನು ಕೂಡ ಪಟ್ಟಿ ಮಾಡುತ್ತಾರೆ. ಕೊನೆಗೆ ತಮ್ಮದೆ ಆದ ನಿರ್ಣಯ ವನ್ನು ಕೊಡುವ ಜವಾಬ್ದಾರಿಯನ್ನು ಕೂಡ ಹೊತ್ತುಕೊಳ್ಳುವುದರಿಂದ ಅವರ, ಸ್ವಂತ ವಿಮರ್ಶಾಸಿದ್ಧಾಂತಗಳ ಬಗ್ಗೆ ಹೊಳಹುಗಳನ್ನು ಒದಗಿಸಿ ಕೊಡುತ್ತಾರೆ. ಹೀಗೆ ಕೋಶಕಾರರ ತಾತ್ವಿಕ ಒಲವುಗಳು ಮತ್ತು ಸಾಹಿತ್ಯಕ ಅಭಿರುಚಿ ಎರಡಕ್ಕೂ ಇಲ್ಲಿ ಮುಕ್ತವಾದ ಅಭಿವ್ಯಕ್ತಿ ದೊರಕುತ್ತದೆ. ಹಾಗೆಂದ ಮಾತ್ರಕ್ಕೆ ಲೇಖಕರ ವಿರುದ್ಧ ಪಕ್ಷಪಾತದ ಆಪಾದನೆಯನ್ನು ಹೇರಲಾಗುವುದಿಲ್ಲ. ಒಂದೇ ಪಾರಿಭಾಷಿಕ ಪದವು ಒಂದಕ್ಕಿಂತ ಹೆಚ್ಚು ಅರ್ಥಗಳಲ್ಲಿ ಬಳಕೆಯಾಗಿದ್ದಾಗ ಅಥವಾ ಒಂದು ಪದಕ್ಕೆ ಸಾಮಾನ್ಯಾರ್ಥ, ವಿಶೇಷಾರ್ಥಗಳೆರಡೂ ಇದ್ದಾಗ ಅದಷ್ಟನ್ನೂ ಗುರುತಿಸಿ ಹೇಳಲಾಗಿದೆ. ಉದಾಹರಣೆಗೆ 'ವಸ್ತು' ಎಂಬ ಒಂದು ಪದಕ್ಕೆ ಐದು ಅರ್ಥ ಸಾಧ್ಯತೆಗಳನ್ನು ಸೂಚಿಸಲಾಗಿದೆ.

ಹೀಗೆ ಈ ಪುಸ್ತಕದ ಯೋಗ್ಯತೆ ಮತ್ತು ಉಪಯುಕ್ತತೆಗಳನ್ನು ನಿಸ್ಸಂದಿಗ್ಧ ವಾದ ಮಾತುಗಳಲ್ಲಿ ಹೇಳಿ, ಲೇಖಕರ ಏಕಾಂಗ ಸಾಹಸವನ್ನು ಮೆಚ್ಚಿಕೊಂಡ ನಂತರ ಒಂದೆರಡು ಅಂಶಗಳನ್ನು ಗಮನಿಸಬಹುದು.

ಇಲ್ಲಿ ಚರ್ಚಿತವಾಗಿರುವ ಮುನ್ನೂರಕ್ಕೂ ಹೆಚ್ಚು ಶೀರ್ಷಿಕೆಗಳಲ್ಲಿ ಕನಿಷ್ಠ ಪಕ್ಷ ಅರ್ಧದಷ್ಟಾದರೂ, ಇಂಗ್ಲಿಷ್ ಭಾಷೆಯ ಸಾಹಿತ್ಯವಿಮರ್ಶೆಯಲ್ಲಿ ವಿಪುಲವಾಗಿ ಬಳಕೆಯಾಗುವ ಪಾರಿಭಾಷಿಕ ಪದಗಳು. ಅಂತಹ ಪದಗಳಿಗೆ ಸಮಾನಾರ್ಥಗಳನ್ನು ಪ್ರಸ್ತುತ ಲೇಖಕರೇ ಸೃಷ್ಟಿಸಿಕೊಟ್ಟಿರಬಹುದು; ಅವುಗಳ ಅರ್ಥವನ್ನು ತಿಳಿದು ಕೊಳ್ಳುವುದು ಕನ್ನಡ ವಿಮರ್ಶಕನಿಗೆ ಅಗತ್ಯವೂ ಇರಬಹುದು. ಆದರೆ ಕನ್ನಡ ಸಾಹಿತ್ಯ ಮತ್ತು ಭಾಷೆಗಳ ಸಾಂಸ್ಕೃತಿಕ ಸಂದರ್ಭದಲ್ಲಿ, ನಮ್ಮ ವಿಮರ್ಶೆಯು ಆ ಪದಗಳನ್ನು ಪದೇ ಪದೇ ಉಪಯೋಗಿಸಬಲ್ಲದೇ/ಬೇಕೇ ಎಂಬ ಪ್ರಶ್ನೆಯನ್ನು ಕೇಳಿಕೊಂಡಾಗ ದೊರೆಯುವ ಉತ್ತರ ನಕಾರಾತ್ಮಕವೇ ಆಗುತ್ತದೆ. ಉದಾಹರಣೆಗೆ,

ನೆಗೆಟಿವ್ ಕೇಪಬಲಿಟಿ, ನೆರೇಟಿವ್, ನ್ಯೂಕ್ರಿಟಿಸಿಸಂ, ಪರ್ಸೊನ, ಪಾಯಿಂಟ್ ಆಫ್ ವ್ಯೂ, ಪ್ಯಾಥಟಿಕ್ ಫಾಲಸಿ, ಬಿಲೀಫ್, ಬರೋಕ್, ಬರ್ಲೆಸ್ಕ್, ಮಿರಕಲ್ ಪ್ಲೆ, ಯೂಫುಯಿಸಂ, ರಿಫ್ರೈನ್, ರೆಸ್ಟೊರೇಶನ್, ಸಿನೆಸ್ಥೀಷಿಯಂ, ಸೆಟಿಂಗ್–ಹೀಗೆ ನೂರಾರು ನಿದರ್ಶನಗಳನ್ನು ಕೊಡಬಹುದು. ಈ ಪದಗಳ ಅರ್ಥ ನಮಗೆ ಗೊತ್ತಾಗಬೇಕು, ನಿಜ ಆದರೆ ಇವು ಕನ್ನಡ ವಿಮರ್ಶೆಯಲ್ಲಿ ಪಾರಿಭಾಷಿಕ ಪದಗಳಾಗಿ ಪ್ರಯೋಗವಾಗುವುದು ಸಂಭವನೀಯವೇ, ಅಪೇಕ್ಷಣೀಯವೇ ಎಂಬ ಪ್ರಶ್ನೆಗಳ ಬಗ್ಗೆ ಯೋಚನೆಮಾಡುವುದು ಅಗತ್ಯವಾಗಿದೆ. ಎಂದರೆ ಮೂಲಭೂತವಾಗಿ ಈ ಕೃತಿಯು ಇಂಗ್ಲಿಷ್ ವಿಮರ್ಶೆಯ ಗರಡಿಮನೆಯಲ್ಲಿ ಸಾಮು ಮಾಡಿದವನೊಬ್ಬ ಅಲ್ಲಿಂದ ತಂದ ಪರಿಕರಗಳನ್ನು ಕನ್ನಡ ವಿಮರ್ಶೆಯ ಮೂಲವಸ್ತುಗಳಾಗಿ ಒದಗಿಸಿ ಕೊಡುವ ಪ್ರಯತ್ನವಾಗಿದೆ. ಎಂದರೆ ಈಗಾಗಲೇ ಉಪಯೋಗವಾಗುತ್ತಿರುವ, ಪದಗಳನ್ನು ಗುರುತಿಸಿ, ವಿವರಿಸುವುದಕ್ಕಿಂತ ಹೆಚ್ಚಾಗಿ, ಇನ್ನುಮೇಲೆ ಉಪಯೋಗಿಸ ಬಹುದಾದ/ಬೇಕಾದ ಪದಗಳನ್ನು ಪರಿಚಯ ಮಾಡಿಕೊಡುವ ಹಂಬಲವಿದೆ. ಹಾಗಿದ್ದರೆ ಇಂಗ್ಲಿಷ್ ಸಾಹಿತ್ಯ ಚರಿತ್ರೆಯ ಅಧ್ಯಯನಕ್ಕೆ ಮಾತ್ರ ನೆರವಾಗಬಹುದಾದ ಹಲವು ಪದಗಳ ಚರ್ಚೆಯನ್ನು ಕೈಬಿಡಬಹುದಾಗಿತ್ತು. ಗ್ರಂಥದ ಸಮಗ್ರ ಅಧ್ಯಯನದ ನಂತರ, ವಿಮರ್ಶಾಕ್ಷೇತ್ರದಲ್ಲಿ ನಡೆದಿರುವ ಕೆಲಸಕ್ಕೆ ಸಂಬಂಧಪಟ್ಟಹಾಗೆ ನಮ್ಮ ತಿಳಿವಳಿಕೆಯು ಖಂಡಿತವಾಗಿಯೂ ಹೆಚ್ಚುತ್ತದೆ, ಆದರೆ ವಿಮರ್ಶೆಯಲ್ಲಿ ನಾವು ಬಳಸ ಬಹುದಾದ ಪಾರಿಭಾಷಿಕ ಪದಗಳ ಸಂಖ್ಯೆಯಲ್ಲಿ ಅಂತಹ ಗಮನಾರ್ಹವಾದ ಹೆಚ್ಚಳವೇನೂ ಆಗುವುದಿಲ್ಲ.

ಕೆಲವು ಪಾರಿಭಾಷಿಕ ಪದಗಳ ಅರ್ಥವನ್ನು ವಿವರಿಸುವಾಗ ಅದನ್ನು ಕನ್ನಡ ವಿಮರ್ಶಕರು ಬಳಸಿರುವ ಒಂದೆರಡು ನಿದರ್ಶನಗಳನ್ನು ಕೊಡಲಾಗುತ್ತದೆ. ಆದರೆ ಕನ್ನಡ ವಿಮರ್ಶೆಯ ಸಂದರ್ಭದಲ್ಲಿ ಬಳಸಲಾಗುವ ಪದಪ್ರಯೋಗದಲ್ಲಿ ಸರ್ವ ಸಮ್ಮತವಾದ ನೆಲೆಗಳಿವೆಯೇ ಎನ್ನುವುದು ಸಂಶಯಾಸ್ಪದ. ಖಚಿತತೆಯ ಪ್ರಶ್ನೆ ಬಂದಾಗ ಒಬ್ಬನೇ ವಿಮರ್ಶಕನು ಬೇರೆ ಬೇರೆ ಸಂದರ್ಭಗಳಲ್ಲಿ ಒಂದೇ ಪದವನ್ನು ಬಳಸುವ ರೀತಿಯಲ್ಲಿಯೂ ಏಕರೂಪತೆ ಕಾಣದಿದ್ದರೂ ಆಶ್ಚರ್ಯವಿಲ್ಲ.

ಉದಾಹರಣೆಗೆ, ಐಡಿಯಲೈಸೇಷನ್ (Idealisation) ಎಂಬ ಪದವನ್ನು ತೆಗೆದು ಕೊಳ್ಳೋಣ. ಇದಕ್ಕೆ ಕೊಡಲಾಗಿರುವ ಸಮಾನಾರ್ಥಕ 'ಆದರ್ಶೀಕರಣ' ಎನ್ನುವುದು. ಇದಕ್ಕೆ ಪ್ರಸ್ತುತ ಲೇಖಕರು ಕೊಡುವ ವಿವರಣೆ ಹೀಗಿದೆ. ''ಸಮಾನ ಗುಣಗಳಿರುವ ಹಲವು ವ್ಯಕ್ತಿಗಳನ್ನು ಆಯ್ದುಕೊಂಡು ಅವರು ಯಾವ ಗುಣಗಳಿಗೆ ಉದಾಹರಣೆ ಯಂತಿರುತ್ತಾರೋ ಆ ಗುಣಗಳ ಪರಿಪೂರ್ಣ ಆದರ್ಶರೂಪವೊಂದನ್ನು ಸಾಮಾನ್ಯೀ ಕರಣದ ಮೂಲಕ, ಕಲೆಯಲ್ಲಿ ಸಾದಿಸುವ ವಿಧಾನ; ಬಾಹ್ಯ ಗುಣ ಲಕ್ಷಣಗಳನ್ನು ನಿರ್ಲಕ್ಷಿಸಿ, 'ನಿಜ'ವಾದ ವ್ಯಕ್ತಿತ್ವ, ಸ್ವಭಾವ, ಸತ್ವ ಮತ್ತು ರೂಪವನ್ನು ಅನ್ವೇಷಿಸು

ವುದು ಪರಿಪೂರ್ಣಗೊಂಡ ಅಂತಃಸತ್ವದ ಸಮರ್ಪಕ ಅಭಿವ್ಯಕ್ತಿಯನ್ನು ಅಸಮಗ್ರ ಭೌತಿಕ ವಿಶಿಷ್ಟತೆಗಳ ಮೂಲಕ ಸಾಧಿಸುವುದು ಆದರ್ಶೀಕರಣ ಎನಿಸಿಕೊಳ್ಳುತ್ತದೆ.'' (ಪು.99) ಆಮೇಲೆ ಡಿ. ಎಲ್. ನರಸಿಂಹಾಚಾರ್, ರಂ. ಶ್ರೀ. ಮುಗಳಿ ಮತ್ತು ಮಾಧವ ಕುಲಕರ್ಣಿಯವರಿಂದ ಮೂರು ಉಲ್ಲೇಖಗಳನ್ನು ಕೊಡಲಾಗಿದೆ. ಅವುಗಳಲ್ಲಿ ಕ್ರಮವಾಗಿ, 'ಆದರ್ಶೀಕರವಾಗಿ', 'ಆದರ್ಶೀಕರಣ' ಮತ್ತು 'ಆದರ್ಶ' ಎಂಬ ಪದಗಳ ಬಳಕೆಯಿದೆ. ಮೊದಲನೆಯದರ ಪ್ರಕಾರ ಆದರ್ಶೀಕರಣವು ಒಂದು ಗುಣವಾದರೆ, ಉಳಿದ ಇಬ್ಬರ ಪ್ರಕಾರ ಅದೊಂದು ದೋಷ. ಲೇಖಕರ ತೀರ್ಮಾನವೇನು ? ನಂತರ ಬರುವ ವಿಮರ್ಶಕರು ಅದನ್ನು ಪಾರಿಭಾಷಿಕ ಪದವೆಂದು ಖಚಿತವಾದ ಅರ್ಥದಲ್ಲಿ ಬಳಸುತ್ತಾರೆಯೇ ? ಇವು ಪ್ರಶ್ನೆಗಳಾಗಿಯೇ ಉಳಿಯುತ್ತವೆ.

ಅಧ್ಯಯನದ ಸಮಗ್ರತೆಯು ಇಂತಹ ಕೃತಿಗಳಲ್ಲಿ ನಿರೀಕ್ಷಿಸಬಾರದ ಸಂಗತಿ. ಆದರೂ ವಿ. ಕೃ. ಗೋಕಾಕ, ಬಿ. ಎಂ. ಶ್ರೀಕಂಠಯ್ಯ, ಎಸ್. ವಿ. ರಂಗಣ್ಣ, ಶಾಂತಿನಾಥ ದೇಸಾಯಿ, ಮಾಸ್ತಿ ಮುಂತಾದ ವಿಮರ್ಶಕರ ಬರವಣಿಗೆಯನ್ನು ಯುಗಧರ್ಮ ಮತ್ತು ಸಾಹಿತ್ಯ, ಜೀವನ ಸೌಂದರ್ಯ ಮತ್ತು ಸಾಹಿತ್ಯ, ವಿಮರ್ಶೆಯ ಪೂರ್ವ ಪಶ್ಚಿಮ, ವಿಭೂತಿ ಪೂಜೆಯಂತಹ ಕೃತಿಗಳನ್ನು ಗಮನಿಸದಿರುವುದಕ್ಕೆ ಸಮರ್ಥನೆಗಳಿರುವಂತೆ ಕಾಣುವುದಿಲ್ಲ. ಇದಲ್ಲದಕ್ಕೂ ಅಧ್ಯಯನಕ್ಷೇತ್ರವನ್ನು ಇಂಗ್ಲೀಷಿನ ನಿಟ್ಟಿನಿಂದ ಪ್ರವೇಶಿಸಿರುವುದೇ ಮುಖ್ಯಕಾರಣವೆಂದು ನನ್ನ ಅನಿಸಿಕೆ. ಇಲ್ಲವಾದರೆ ಬೇಂದ್ರೆಯವರ 'ಸಾಹಿತ್ಯದ ವಿರಾಟ್ ಸ್ವರೂಪ'ದಂತಹ ಕೃತಿ ಇವರ ಮೂಲ ಆಕರಗಳಲ್ಲಿ ಒಂದಾಗುತ್ತಿತ್ತು.

ಆತ್ಮವಿಮರ್ಶೆ ಮತ್ತು ವಿನಯಗಳು ಪ್ರಮುಖ ಲಕ್ಷಣವಾಗಿರುವ ಈ ಕೃತಿಗೆ ಸಂಬಂಧಪಟ್ಟಹಾಗೆ ಮೇಲೆ ಹೇಳಿದ ಒಂದೆರಡು ಕುಂದುಕೊರತೆಗಳನ್ನು ಹೇಳಿರುವುದು ಅದು ಇನ್ನಷ್ಟು 'ಸಮಗ್ರವೂ, ಪರಿಪೂರ್ಣವೂ' ಆಗಲೆಂಬ ಪ್ರೀತಿಯಿಂದಲೇ ಹೊರತು ಛಿದ್ರಾನ್ವೇಷಕ ಪ್ರವೃತ್ತಿಯಿಂದ ಅಲ್ಲ. ಈ ಬಗೆಯ ಕೋಶಕಾರರ ಸ್ವಾರ್ಥತ್ಯಾಗ ಅಪರೂಪವಾದುದು ಏಕೆಂದರೆ ಅವರು ಸ್ವತಃ ವಿಮರ್ಶೆಯ ಲೇಖನಗಳನ್ನು ಬರೆದಿದ್ದರೆ ಸುಲಭವಾಗಿ ದೊರಕಬಹುದಾದ ಕೀರ್ತಿಯನ್ನು ನಿರ್ಲಕ್ಷಿಸಿ, ಶ್ರಮವನ್ನು ಬಯಸುವ ಇಂತಹ ಕಾರ್ಯವನ್ನು ಆರಿಸಿಕೊಂಡಿರುತ್ತಾರೆ. ಅದರ ಫಲವಾಗಿಯೇ ತಕ್ಷಣ ವಿಮರ್ಶೆಯ ಸೀಮಿತಗಳಿಂದ ಮುಕ್ತವಾಗಿ ನೂರುಕಾಲ ನಿಲ್ಲುವ ಇಂತಹ ಕೃತಿಗಳು ಬರುತ್ತವೆ.

ಕಾವ್ಯಾರ್ಥ ಚಿಂತನ : ಜಿ. ಎಸ್. ಶಿವರುದ್ರಪ್ಪ

ಸಾಹಿತ್ಯತತ್ವವನ್ನು ಕುರಿತಾದ ಚಿಂತನೆಯು ಸಾಹಿತ್ಯ ವಿಮರ್ಶೆಯ ಸ್ವರೂಪ ಮತ್ತು ವಿಧಾನಗಳನ್ನು ನಿರ್ದೇಶಿಸುವ ಸಾಮರ್ಥ್ಯವನ್ನು ಪಡೆದಿರುತ್ತದೆ.

ಕನ್ನಡ ವಿಮರ್ಶೆಯ ಪ್ರಸ್ತುತ ಸಂದರ್ಭದಲ್ಲಿ ಭಾರತೀಯ ಕಾವ್ಯಮೀಮಾಂಸೆ ಮತ್ತು ಪಾಶ್ಚಾತ್ಯ ಕಾವ್ಯಚಿಂತನಗಳ ಅರ್ಥಪೂರ್ಣ ಸಂಯೋಜನೆಯು ತನ್ನದೇ ಆದ ಮಹತ್ವದ ನಿಯೋಗಗಳನ್ನು (Functions) ನಿರ್ವಹಿಸಬಲ್ಲುದು. ತಮ್ಮ ಪ್ರತಿಭೆ, ಆಲೋಚನೆ ಮತ್ತು ಅಧ್ಯಯನಗಳ ಬಲದಿಂದ ಶಿವರುದ್ರಪ್ಪನವರು ಈ ಕಾರ್ಯವನ್ನು ಮಾಡಬಲ್ಲ ಶಕ್ತಿಯನ್ನು ಪಡೆದಿದ್ದಾರೆ. ಕೇವಲ ಸಾಹಿತ್ಯ ತತ್ವದಲ್ಲಿ ಮಾತ್ರ ಆಸಕ್ತರಾಗದೆ ಸ್ವತಃ ಸೃಜನಶೀಲ ಕವಿಗಳೂ, ಮಹತ್ವದ ವಿಮರ್ಶಕರೂ ಆಗಿರುವುದರಿಂದ ಇವರ ಕೆಲಸವು ಹೊಸ ಆಯಾಮಗಳನ್ನು ಪಡೆದುಕೊಳ್ಳುತ್ತದೆ.

1963 ರಲ್ಲಿ ಪ್ರಕಟವಾದ ಸ್ಫೂರ್ತಿತತ್ವವನ್ನು ಕುರಿತ ಲೇಖನದ ನಂತರದ ಎರಡು ದಶಕಗಳಲ್ಲಿ ಲೇಖಕರು ನಡೆಸಿದ ಅಧ್ಯಯನ ಮತ್ತು ಚಿಂತನಗಳ ಫಲಿತವಾಗಿ ಈ ಕೃತಿಯು ಮೂಡಿಬಂದಿದೆ. ಇಲ್ಲಿರುವ ಲೇಖನಗಳ ರಚನೆಯ ಕಾಲವು ಬೇರೆ ಬೇರೆಯಾದರೂ ಎಲ್ಲ ಲೇಖನಗಳ ಪುನರವಲೋಕನ ಮತ್ತು ಹೊಸ ಸಾಮಗ್ರಿಗಳ ಸೇರ್ಪಡೆಯು ಕಳೆದ ಎರಡು ವರ್ಷಗಳ ಅವಧಿಯಲ್ಲಿ ನಡೆದಿದೆ. ಈ ಬಗೆಯ ಅಧ್ಯಯನಕ್ಕೆ ಪ್ರೇರಕವಾದ ಪಲವು ಸಂಗತಿಗಳನ್ನು ಶಿವರುದ್ರಪ್ಪನವರು ತಮ್ಮ ಮುನ್ನುಡಿಯಲ್ಲಿ ಪ್ರಸ್ತಾಪಿಸುತ್ತಾರೆ.

1) ಸಮಕಾಲೀನ ವಿಮರ್ಶೆಯಲ್ಲಿ ಪರಿಕಲ್ಪನೆಗಳು ಮತ್ತು ಪರಿಭಾಷೆಗೆ ಸಂಬಂಧಿಸಿದಂತೆ ಇರುವ ಗೊಂದಲಕ್ಕೆ, ಸಾಹಿತ್ಯ ವಿಮರ್ಶೆಯ ಬೇರು ಬುಡದಂತೆ ಇರುವ ಕಾವ್ಯಮೀಮಾಂಸೆಯ ಗಾಢವಾದ ತಿಳಿವಳಿಕೆಯು ಇಲ್ಲದಿರುವುದೇ ಕಾರಣ ವೆಂಬ ಅರಿವು ಮತ್ತು ಅದನ್ನು ಸರಿಪಡಿಸಬೇಕೆಂಬ ಹಂಬಲ.

2) ನಮ್ಮಲ್ಲಿ ಭಾರತೀಯ ಕಾವ್ಯಮೀಮಾಂಸೆ ಮತ್ತು ಪಾಶ್ಚಾತ್ಯ ಕಾವ್ಯ ತತ್ವಗಳನ್ನು ಕುರಿತಂತೆ ಪ್ರತ್ಯೇಕವಾದ ಅಧ್ಯಯನಗಳು ನಡೆದಿದ್ದರೂ, ಅವೆರಡರ ತುಲನಾತ್ಮಕವಾದ ಪರಿಶೀಲನೆಯಿಂದ ಹೊಸ ಸಂಗತಿಗಳು ಬೆಳಕಿಗೆ ಬರಬಹುದೆಂಬ ನಿರೀಕ್ಷೆ. ಒಂದು ಪ್ರಸ್ಥಾನವನ್ನು ಅರ್ಥಮಾಡಿಕೊಳ್ಳಲು ಮತ್ತೊಂದು ಪ್ರಸ್ಥಾನ ವನ್ನು ಉಪಯೋಗಿಸಿಕೊಳ್ಳುವ ಪ್ರಯತ್ನ.

3) "ಇದುವರೆಗೆ ಸುಸಮರ್ಥವಾಗಿ ನಿರೂಪಿತವಾಗಿರುವ ಸಂಗತಿಗಳನ್ನು ಸಾಧ್ಯವಾದಮಟ್ಟಿಗೆ ಪುನರಾವರ್ತಿಸದೆ, ಆದರೆ ಅವುಗಳನ್ನು ಇಲ್ಲಿಯ ವಿಷಯ ಪ್ರತಿಪಾದನೆಗೆ ಅಗತ್ಯವಾದೆಡೆಗೆ ಬಳಸಿಕೊಳ್ಳುತ್ತಾ, ಪೂರ್ವ ಮತ್ತು ಪಶ್ಚಿಮದ ಚಿಂತನೆಗಳಲ್ಲಿರುವ ಸಾಮ್ಯ ಹಾಗೂ ವೈಶಿಷ್ಟ್ಯಗಳನ್ನು ಗುರುತಿಸುತ್ತಾ, ಈ ತೌಲನಿಕ ವಿಧಾನದಿಂದ ಹೊರಡುವ ಕೆಲವು ಹೊಸ ಅಥವಾ ಬೇರೆಯೇ ಆದ ವಿಚಾರಗಳನ್ನು ಪ್ರಸ್ತಾಪಿಸುವ ಕಡೆಗೆ ನನ್ನ ಗಮನವನ್ನು ಕೇಂದ್ರೀಕರಿಸಿದ್ದೇನೆ. ಮುಖ್ಯವಾಗಿ ಈ ಕೃತಿ, ಈ ಕ್ಷೇತ್ರದಲ್ಲಿ ಇದುವರೆಗೂ ನಡೆದಿರುವ ಅಧ್ಯಯನಕ್ಕೆ ಪೂರಕವೂ

ಅಧ್ಯಯನದ ಮುಂದುವರಿಕೆಯೂ ಆಗುವುದರ ಜೊತೆಗೆ ಸ್ವರೂಪ ಹಾಗೂ ವೈಶಿಷ್ಟ್ಯಗಳಲ್ಲಿ ಬೇರೆಯಾದ ಆಗಬೇಕೆಂಬುದು ನನ್ನ ಉದ್ದೇಶ".

4) ತೌಲನಿಕ ಅಧ್ಯಯನದಿಂದ ಸಾಹಿತ್ಯದ ಅರ್ಥವಂತಿಕೆಗೆ ಅಗತ್ಯವಾದ ಸಮಗ್ರನಿಲುವೊಂದು ಪ್ರಾಪ್ತವಾಗಬಹುದೆಂಬ ಆಸೆ.

5) ಇದೆಲ್ಲ ಚಿಂತನೆಯ ಹಿಂದೆ ಸೃಜನಶೀಲ ಸಾಹಿತ್ಯ ಹಾಗೂ ಸಾಹಿತ್ಯ ಪರಂಪರೆಯೂ ಇದ್ದೇತೀರಬೇಕೆಂಬ ತಿಳಿವಳಿಕೆ.

ಈ ಉದ್ದೇಶಗಳ ಮೌಲಿಕತೆ ಮತ್ತು ಅವುಗಳನ್ನು ಕೃತಿರೂಪಕ್ಕೆ ಇಳಿಸುವುದರಲ್ಲಿ ವ್ಯಕ್ತವಾಗಿರುವ ಬಹುಶ್ರುತತ್ವ, ಒಳನೋಟಗಳು ಮತ್ತು ಸುವ್ಯವಸ್ಥಿತವಾದ ನಿರೂಪಣಾ ವಿಧಾನಗಳು ಈ ಕೃತಿಯ ಯಶಸ್ಸಿಗೆ ಕಾರಣವಾಗಿವೆ. ಇಂತಹ ಕೃತಿಯನ್ನು ರಚಿಸುವಾಗ ಎರಡು ಸಾಧ್ಯತೆಗಳಿವೆ. ಪುಸ್ತಕದ ವಸ್ತುವನ್ನು ಹಲವು ಅಧ್ಯಾಯಗಳಾಗಿ ವಿಂಗಡಿಸಿಕೊಂಡು, ಅಧ್ಯಾಯಗಳ ನಡುವೆ ತರ್ಕಬದ್ಧವಾದ ಸಂಬಂಧವಿರುವಂತೆ ನೋಡಿಕೊಳ್ಳುವುದು, ಮೊದಲನೆಯ ಸಾಧ್ಯತೆ. ಆಗ ಕೃತಿಗೆ ಒಟ್ಟಂದದ ಅಚ್ಚುಕಟ್ಟು ಮತ್ತು ಅನುಸ್ಯೂತವಾದ ಹರವು ಬರುತ್ತದೆ. ಆರಿಸಿಕೊಂಡ ಕ್ಷೇತ್ರಕ್ಕೆ ಸಂಬಂಧಪಟ್ಟ ಪ್ರಮುಖ ವಿಷಯಗಳನ್ನು ಕುರಿತ ಸುದೀರ್ಘವಾದ ಬಿಡಿ ಲೇಖನಗಳ ಸಂಯೋಜನೆಯು ಎರಡನೆಯ ವಿಧಾನ. ಈ ವಿಧಾನವನ್ನು ಬಳಸಿದಾಗ ಪ್ರತಿಯೊಂದು ಲೇಖನವೂ ಸ್ವಯಂ ಪೂರ್ಣವಾಗುತ್ತದೆ; ವಸ್ತುವಿನ ಆಳವಾದ ವಿಶ್ಲೇಷಣೆ ಸಾಧ್ಯವಾಗುತ್ತದೆ. ಆದರೆ ಹೀಗೆ ಮಾಡಿದಾಗ ಒಟ್ಟು ಗ್ರಂಥದಲ್ಲಿ ಕೆಲವು ಕಡೆ ಪುನರುಕ್ತಿಯು ಅನಿವಾರ್ಯವಾಗುತ್ತದೆ. ಕಾವ್ಯಾರ್ಥ ಚಿಂತನವು ಎರಡನೆಯ ದಾರಿಯನ್ನು ಆರಿಸಿಕೊಂಡಿದೆ.

ಈ ಗ್ರಂಥದಲ್ಲಿ ಒಟ್ಟು ಹದಿಮೂರು ಲೇಖನಗಳಿವೆ. ಪ್ರತಿಭೆ, ಸ್ಫೂರ್ತಿ, ವ್ಯುತ್ಪತ್ತಿ, ರೀತಿಯ ಸ್ವರೂಪ, ಮಾನಸಿಕ ದೂರ, ವಾಸ್ತವವಾದ ಮತ್ತು ಸ್ವಭಾವೋಕ್ತಿ, ಉಪಮೆ–ರೂಪಕ–ಪ್ರತಿಮೆ ಹಾಗೂ ರಸಾನುಭವ ಮತ್ತು ನೈತಿಕ ನಿಲುವುಗಳು ಎಂಬ ಲೇಖನಗಳು ಆಯಾ ವಿಷಯಗಳನ್ನು ಕುರಿತ ಭಾರತೀಯ ಮತ್ತು ಅವಕ್ಕೆ ಸಂವಾದಿಯಾದ ಪಾಶ್ಚಾತ್ಯ ನಿಲುವುಗಳನ್ನು ತಲಸ್ಪರ್ಶಿಯಾಗಿ ನಿರೂಪಿಸುತ್ತಲೇ ತಮ್ಮದೇ ಆದ ತೀರ್ಮಾನಗಳನ್ನು ತಲುಪುತ್ತವೆ. ಕವಿಸಮಯ, ಭರತನ–ರಸ ಸೂತ್ರ–ಒಂದು ವಿವರಣೆ, ಮತ್ತು ಅಸಂಭಾವ್ಯತೆ–ನಿಯಂತ್ರಿತ ನಿಯಮ ಸಾಹಿತ್ಯ ಎಂಬ ಲೇಖನಗಳು ತುಲನೆಯ ಗೊಡವೆಗೆ ಹೋಗದೆ, ಭಾರತೀಯ ಕಾವ್ಯ ಮೀಮಾಂಸೆಯ ಕೆಲವು ಹೊಸ ಪರಿಕಲ್ಪನೆಗಳ ಮೇಲೆ ಹೊಸ ಬೆಳಕನ್ನು ಚೆಲ್ಲುವ ಕಾರ್ಯವನ್ನು ನಿರ್ವಹಿಸುತ್ತವೆ. "ಭಾರತೀಯ ಕಾವ್ಯಮೀಮಾಂಸೆಯಲ್ಲಿ ಸಾಹಿತ್ಯ ವಿಮರ್ಶೆ" ಎಂಬ ಕೊನೆಯ ಲೇಖನವು, ನಮ್ಮ ಕಾವ್ಯಮೀಮಾಂಸೆಯ ಮೌಲಿಕ

ವಾದ ಸಾಹಿತ್ಯ ವಿಮರ್ಶೆಗೆ ಏಕೆ ಜನ್ಮ ಕೊಡಲಿಲ್ಲವೆಂಬ ಮಹತ್ವದ ಪ್ರಶ್ನೆಯನ್ನು ಎತ್ತಿಕೊಂಡು ಅದಕ್ಕೆ ಉತ್ತರಗಳನ್ನು ಅನ್ವೇಷಿಸುತ್ತದೆ. ಇನ್ನು ಮುಂದೆ ಕೆಲವು ಲೇಖನಗಳನ್ನು ಸಂಕ್ಷೇಪವಾಗಿ ಪರಿಶೀಲಿಸಬಹುದು.

ಮೊದಲನೆಯ ಲೇಖನವು ಭಾರತೀಯ ಕಾವ್ಯಮೀಮಾಂಸೆಯ ಶಕ್ತಿ, ಪ್ರತಿಭಾನ, ಕಲ್ಪನೆ ಮತ್ತು ಪ್ರತಿಭೆ ಎಂಬ ಪರಿಕಲ್ಪನೆಗಳನ್ನು ಕ್ರಮವಾಗಿ ಪಾಶ್ಚಾತ್ಯರ Genius, Intution, fancy ಮತ್ತು Imagination ಎಂಬ ಪರಿಕಲ್ಪನೆಗಳೊಂದಿಗೆ ಸಮೀಕರಿಸುವ ಪ್ರಯತ್ನ ಮಾಡುತ್ತದೆ. ಪಾಶ್ಚಾತ್ಯರ ಹೇಳಿಕೆಗಳಿಗೆ ಭಾರತೀಯ ಸಾಹಿತ್ಯದಿಂದ ನಿದರ್ಶನಗಳನ್ನು ಕೊಡುವ ಪ್ರಯತ್ನ ಕೂಡ ಇಲ್ಲಿ ನಡೆದಿದೆ. ನಮಗೆ ಎರಡೂ ಪ್ರಸ್ಥಾನಗಳಲ್ಲಿ ಈ ಸಂಗತಿಗಳನ್ನು ಕುರಿತ ವಿವರವಾದ, ಅಚ್ಚುಕಟ್ಟಾದ ಮಾಹಿತಿ ದೊರೆಯುತ್ತದೆ. ಆದರೆ ಈ ತುಲನೆಯಿಂದ ಮೂಡಿಬರುವ ಹೊಸ ಬೆಳಕು ಯಾವುದು ಎಂಬ ಪ್ರಶ್ನೆಯು ಹಾಗೆಯೇ ಉಳಿಯುತ್ತದೆ. ಸಾಹಿತ್ಯೇತರ ಕ್ಷೇತ್ರಗಳೂ ಸೇರಿದಂತೆ ಒಟ್ಟು ಸೃಜನಶೀಲತೆಯ ಮೂಲವನ್ನೇ ಕುರಿತಂತೆ ಮನಶ್ಶಾಸ್ತ್ರಜ್ಞರು ನಡೆಸಿರುವ ಹಲವಾರು ಸಂಶೋಧನೆಗಳು ಈ ಕ್ಷೇತ್ರದ ಮೇಲೆ ಬೆಳಕುಚೆಲ್ಲಬಲ್ಲದೆಂದು ನನ್ನ ಅಭಿಪ್ರಾಯ. ಎರಡನೆಯ ಲೇಖನವು ನಮ್ಮ ಸ್ಫೂರ್ತಿ ತತ್ವವನ್ನು ಪಾಶ್ಚಾತ್ಯರ Inspiration ಎಂಬ ಸಂಗತಿಯೊಂದಿಗೆ ಹೋಲಿಸಿ ನೋಡುತ್ತದೆ. ಸ್ಫೂರ್ತಿಯು ದೈವದತ್ತವೋ ಅಥವಾ ಮನುಷ್ಯ ಸಹಜವೋ ಎಂಬ ವಿಷಯದ ಬಗ್ಗೆ ವಿವರವಾದ ಚರ್ಚೆ ನಡೆದು, ಕೊನೆಗೆ, "ಅದು ಒಂದು ಚೈತನ್ಯ. ಅದು ಎಲ್ಲಿಂದ ಬರುವುದೋ ನಮಗೆ ತಿಳಿಯದು. ಅದು ನಮ್ಮ ಆಜ್ಞಾನುವರ್ತಿಯಾಗಿ ನುಡಿಯುವುದಲ್ಲ. ನುಡಿದರೂ ಅದು ನಮ್ಮ ಭಾಷೆಯಲ್ಲಿ ಅಲ್ಲ. ಅದು ನಮ್ಮ ಸೇವಕನಲ್ಲ ಪ್ರಭು" ಎಂಬ ತೀರ್ಮಾನದೊಂದಿಗೆ ಮುಕ್ತಾಯವಾಗುತ್ತದೆ. ಸ್ಫೂರ್ತಿ ಶಕ್ತಿಯು ದೈವದತ್ತವೂ, ವಿಧಿ–ನಿಯಂತ್ರಿತವೂ ಅಲ್ಲದಿದ್ದರೂ ಅಷ್ಟೇನಿಗೂಢವಾದ ಸುಪ್ತಪ್ರಜ್ಞೆಯಿಂದ ನಿಯಂತ್ರಿತವೆನ್ನುವುದು ಲೇಖಕರ ಅಭಿಮತ.

'ಉಪಮೆ–ರೂಪಕ–ಪ್ರತಿಮೆ' ಎಂಬುದು ಮತ್ತೊಂದು ಮಹತ್ವದ ಲೇಖನ. ಇಲ್ಲಿ ಭಾರತೀಯ ಮತ್ತು ಪಾಶ್ಚಾತ್ಯ ತತ್ವಗಳನ್ನು ಪರಸ್ಪರ ಅರ್ಥ ಮಾಡಿಕೊಳ್ಳಲು ಬಳಸಲಾಗಿದೆ. ಧ್ವನಿತತ್ವದ ಅಭಿದಾ, ಲಕ್ಷಣ ಮತ್ತು ವ್ಯಂಜನ ವ್ಯಾಪಾರಗಳನ್ನು ಕ್ರಮವಾಗಿ sign, symbol ಮತ್ತು Imageಗಳು ತಮ್ಮ ಕಾರ್ಯವನ್ನು ನಿರ್ವಹಿಸುವ ಬಗೆಗೆ ಸಂವಾದಿಯಾಗಿ ತೆಗೆದುಕೊಳ್ಳಬಹುದೆಂದು ಲೇಖಕರ ಅಭಿಪ್ರಾಯ. ಅನೇಕ ನಿದರ್ಶನಗಳನ್ನು ಕೊಡುವುದರ ಮೂಲಕ ಈ ಸಮೀಕರಣಗಳನ್ನು ಸಾಧಿಸುತ್ತಾರೆ. ಪೂರ್ಣೋಪಮೆಯು ಕ್ರಮೇಣ ತನ್ನ ಅಂಗ

ಗಳನ್ನು ಕಳೆದುಕೊಂಡು ಪ್ರತೀಕವಾಗಿ ಪರಿಣಮಿಸುತ್ತದೆನ್ನುವುದು ಅವರ ತೀರ್ಮಾನ. ಹಾಗೆಯೇ ಪ್ರಬಂಧಧ್ವನಿಯೆಂಬ ಭಾರತೀಯ ಪರಿಕಲ್ಪನೆಯ ಮೂಲಕ ಸಮಗ್ರ ಕಾವ್ಯ ಅಥವಾ ಅದರ ಭಾಗಗಳೇ ಪ್ರತಿಮೆಗಳಾಗಬಹುದೆಂಬ ತಥ್ಯವನ್ನು ನಿರೂಪಿಸಲಾಗಿದೆ. ಇದು ಪಾಂಡಿತ್ಯ ಮತ್ತು ಪ್ರತಿಭೆಗಳೆರಡೂ ಸೇರಿರುವ ಯಶಸ್ವೀ ಲೇಖನ.

ರೀತಿ ಮತ್ತು style ಎಂಬ ತತ್ವಗಳನ್ನು ಹೋಲಿಸ ಹೊರಡುವ ಲೇಖನವು ನಮ್ಮಲ್ಲಿ ರೀತಿ ತತ್ತ್ವವು ಕ್ರಮಾನುಗತವಾಗಿ ಪಡೆದುಕೊಂಡ ವಿವಿಧ ಅರ್ಥಗಳನ್ನು ಮನೋಜ್ಞವಾಗಿ ನಿರೂಪಿಸುತ್ತದೆ. ಯಥಾಪ್ರಕಾರ ಶೈಲಿಯನ್ನು ಕುರಿತ ಪಾಶ್ಚಾತ್ಯರ ಅಭಿಪ್ರಾಯಗಳನ್ನು ನಮ್ಮ ನಿದರ್ಶನಗಳಿಗೆ ಅನ್ವಯಿಸಿ ಪರಿಶೀಲಿಸುವಾಗ ಅನೇಕ ಒಳನೋಟಗಳನ್ನು ಪ್ರದರ್ಶಿಸಿದ್ದಾರೆ. ಸಿದ್ಧಶೈಲಿಯೊಂದರ ಪರಿಸರದಲ್ಲಿ ನಿಂತು ಬರೆಯುವ ಕವಿಯು ತನ್ನದೇ ಆದ ಶೈಲಿಯನ್ನು ಕಂಡುಕೊಳ್ಳುವ ಪ್ರಯತ್ನದ ವಿವರಗಳು ಇಂದಿನ ಸೃಜನಶೀಲ ಸಾಹಿತಿಗಳಿಗೂ ಮಾರ್ಗದರ್ಶಕವಾಗಿವೆ. "ಒಂದು ಸಾಹಿತ್ಯ ಪರಂಪರೆಯಲ್ಲಿ ಕಂಡುಬರುವ ವಿವಿಧಶೈಲಿಗಳು, ಅಂದಂದಿನ ಕವಿಗಳು, ಅಂದಂದಿನ ಭಾಷಾ ಸಾಮಗ್ರಿಯನ್ನು ತಮ್ಮ ಅಭಿವ್ಯಕ್ತಿಗೆ ಒಳಗುಪಡಿಸಿಕೊಂಡಿದ್ದರ ಪರಿಣಾಮವಾದುದರಿಂದ, ಭಾಷೆಯ ರೂಪು-ರಚನೆಗಳನ್ನು ಭಾಷಾ ಶಾಸ್ತ್ರದ ದೃಷ್ಟಿಯಿಂದ ಅಧ್ಯಯನ ಮಾಡುವವರ ಪಾಲಿಗೂ ಶೈಲಿಯ ಅಧ್ಯಯನ ಪ್ರತ್ಯೇಕವಸ್ತುವಾಗಬಲ್ಲದು. ಅಷ್ಟೇ ಅಲ್ಲ, ಸಾಹಿತ್ಯ ಚರಿತ್ರೆಯ ದೃಷ್ಟಿಯಿಂದ ನೋಡುವುದಾದರೆ ಯಾವುದೇ ಕಾಲದ ಶೈಲಿಯಲ್ಲಿ ಕಾಣಿಸಿಕೊಳ್ಳುವ ಬದಲಾವಣೆಗಳು, ಮೂಲತಹ ಆಯಾಕಾಲದ ಸಾಹಿತ್ಯದಲ್ಲಿ ಸಂಭವಿಸುವ ಬದಲಾವಣೆಗಳ ಸಂಕೇತವಾಗಿವೆ; ಮತ್ತು ಸಾಹಿತ್ಯದಲ್ಲಿ ಬದಲಾವಣೆ ಎಂದರೆ, ಅಂದಂದಿನ ಸಮರ್ಥ ಲೇಖಕರು ತಮ್ಮ ಪರಿಸರದ ಸಾಂಸ್ಕೃತಿಕ ಒತ್ತಡಗಳಿಗೆ ಹಾಗೂ ತಮ್ಮ ಹೊಸ ಸಂವೇದನೆಗಳಿಗೆ, ಹೊಸ ಅಭಿವ್ಯಕ್ತಿಯ ಸಾಧ್ಯತೆಗಳನ್ನು ಅನ್ವೇಷಿಸುವುದರ ಪರಿಣಾಮವಾಗಿದೆ" ಎನ್ನುವ ಮಾತುಗಳು ಮುಂದೆ ಕೆಲಸ ನಡೆಯಬೇಕಾಗಿರುವ ದಿಕ್ಕನ್ನು ಬಹಳ ಸಮರ್ಥವಾಗಿ ಸೂಚಿಸುತ್ತವೆ. ಈ ಲೇಖನವು ಮಹತ್ವದ ಅನುಬಂಧವೊಂದನ್ನು ಒಳಗೊಂಡಿದೆ. ಅದರಲ್ಲಿ ಕನ್ನಡ ಕವಿಗಳು ಎದುರಿಸಿದ ಶೈಲಿಯ ಸಮಸ್ಯೆಯನ್ನು ಪ್ರಸ್ತಾಪಿಸಲಾಗಿದೆ.

ಕಾವ್ಯಾರ್ಥ ಚಿಂತನದ ಕೊನೆಯ ಲೇಖನವು ಬಹಳ ಮಹತ್ವಪೂರ್ಣವಾದುದು. 'ಭಾರತೀಯ ಕಾವ್ಯಮೀಮಾಂಸೆಯಲ್ಲಿ ಸಾಹಿತ್ಯ ವಿಮರ್ಶೆ' ಎಂಬ ಲೇಖನವು ನಮ್ಮ ಅಲಂಕಾರದ ಪರಿಮಿತಿಗಳ ಚರ್ಚೆಗೆ ಮಹತ್ವ ಕೊಡುತ್ತದೆ. ಅಲಂಕಾರ ಶಾಸ್ತ್ರದ ಅಧ್ಯಯನ ಮಾರ್ಗವು ಅನ್ವಯಿತ ವಿಮರ್ಶೆಗೆ ನೆರವು ನೀಡುವುದಿಲ್ಲವೆಂಬ ಕಟುಸತ್ಯವನ್ನು ಒಪ್ಪಿಕೊಳ್ಳಲು ಲೇಖಕರು ಹಿಂಜರಿದಿಲ್ಲ. ಹೀಗಾಗಲು ಇರುವ

ಕಾರಣಗಳನ್ನು ಅವರು ಸಮರ್ಥವಾಗಿ ಮಂಡಿಸಿದ್ದಾರೆ. "ಭಾರತೀಯ ಕಾವ್ಯ ಮೀಮಾಂಸೆ, ತನ್ನ ಕಾವ್ಯಚರ್ಚೆಯನ್ನು ಕವಿಗಳಿಗಾಗಿ ಉದ್ದೇಶಿಸಿತೇ ಹೊರತು ಸಹೃದಯರಿಗಲ್ಲ. ಒಂದು ವೇಳೆ 'ಕಾವ್ಯಮೀಮಾಂಸೆ' ಸಹೃದಯರಿಗಾಗಿಯೂ ಉದ್ದೇಶಿತವಾದ 'ಸಾಹಿತ್ಯ ವಿಮರ್ಶೆ'ಯ ಅಂಶಗಳನ್ನು ಒಳಗೊಂಡಿದ್ದರೆ, ಅದು ಬಹುಶಃ ಸಾಹಿತ್ಯದ ಸ್ವರೂಪವನ್ನೇ ಬದಲಾಯಿಸಬಹುದಾಗಿತ್ತು ಎಂದು ಊಹಿಸುವುದರಲ್ಲಿ ತಪ್ಪೇನಿಲ್ಲ" ಎಂಬ ತೀರ್ಮಾನವು ಸರ್ವಸಮ್ಮತವಾಗುದು.

ಉಳಿದ ಲೇಖನಗಳನ್ನು ಹೀಗೆಯೇ ಸಂಗ್ರಹಿಸುವುದರ ಬದಲು, ಒಟ್ಟು ಕೃತಿಯ ಸಾಧನೆ ಮತ್ತು ಪರಿಮಿತಿಗಳನ್ನು ತಿಳಿಸುವ ಕೆಲವು ಗಮನೀಯ ಅಂಶ ಗಳನ್ನು ಇನ್ನುಮುಂದೆ ಹೇಳಲಾಗಿದೆ.

1. ತಾವು ಆರಿಸಿಕೊಂಡಿರುವ ವಿಷಯದ ಬಗ್ಗೆ ಅದುವರೆಗೆ ನಡೆದಿರುವ ಸಮಗ್ರ ಚರ್ಚೆಯನ್ನು ಈ ಲೇಖಕರು ಗಮನಿಸುತ್ತಾರೆ. ಯಾವುದೇ ವಿಷಯದ ಬಗ್ಗೆ ಬರೆಯುವಾಗ ತಾನೇ ಮೊದಲಿಗನೆಂಬಂತೆ ಬರೆಯುವುದೇ ವಾಡಿಕೆಯಾಗಿರುವ ಈ ದಿನಗಳಲ್ಲಿ ಇದು ಅಪರೂಪದ ಗುಣ. 250 ಪುಟಗಳ ಈ ಗ್ರಂಥದಲ್ಲಿ 342 ಉದ್ಧರಣೆಗಳಿವೆ (quotations) ಪ್ರತಿಯೊಂದಕ್ಕೂ ಮೂಲಗ್ರಂಥ ಮತ್ತು ಗ್ರಂಥ ಕರ್ತನನ್ನು ಬಿಡದೆ ಹೆಸರಿಸುತ್ತಾರೆ. ಈ ರೀತಿಯ ಉದ್ಧರಣೆಗಳ ಬಾಹುಳ್ಯದ ಬಗ್ಗೆ ಒಂದು ಮಾತು ಹೇಳಬೇಕು. ಅದೇ ಅಭಿಪ್ರಾಯಗಳನ್ನು ತಮ್ಮದೇ ಮಾತುಗಳಲ್ಲಿ ಹೇಳುವುದು ಲೇಖಕರಿಗೆ ಏನೇನೂ ಕಷ್ಟವಲ್ಲ. ಆದರೆ ತಮ್ಮ ಅನಿಸಿಕೆಗಳನ್ನು ನಿರೂಪಿಸುವಾಗಲೂ ಬೇರೆಯವರ ಮಾತುಗಳನ್ನು ಇಟ್ಟಿಗೆಗಳಂತೆ ಬಳಸುವುದು ಅವರ ಬರವಣಿಗೆಯ ಒಂದು ಲಕ್ಷಣ. ಅದು ಬರವಣಿಗೆಗೆ ಅಧಿಕೃತತೆಯನ್ನು ತಂದುಕೊಡುವುದರ ಜೊತೆಗೆ ಲೇಖಕರ ಬೌದ್ಧಿಕ ಪ್ರಾಮಾಣಿಕತೆಗೆ ಸಾಕ್ಷಿಯಾಗಿದೆ.

2. ಸಾಹಿತ್ಯ ತತ್ವವನ್ನು ಕುರಿತಾದ ಚರ್ಚೆಯು ಅತ್ಯಂತ ವೇಗವಾಗಿ ಬೆಳೆಯುತ್ತಿರುವ ಒಂದು ಕ್ಷೇತ್ರ. ಕಳೆದ ಇಪ್ಪತ್ತು ಮೂವತ್ತು ವರ್ಷಗಳಲ್ಲಿ ಭಾಷಾಶಾಸ್ತ್ರ, ಶೈಲಿವಿಜ್ಞಾನ ಮತ್ತು ಮನೋವಿಜ್ಞಾನಗಳ ಬಳಕೆಯಿಂದ, ಅದು ಹೊಸ ಆಯಾಮಗಳನ್ನು ಪಡೆದುಕೊಂಡಿದೆ. ಪ್ರಸ್ತುತ ಲೇಖಕರು, ಒಂದು ನಿರ್ದಿಷ್ಟ ಕಾಲಾವಧಿಯ ನಂತರ ಮತ್ತು ಕಾವ್ಯಮೀಮಾಂಸೆಗಿಂತ ಅನ್ಯವಾದ ಕ್ಷೇತ್ರ ಗಳಲ್ಲಿ ನಡೆದಿರುವ ಬೆಳವಣಿಗೆಯನ್ನು ತಮ್ಮ ಅಧ್ಯಯನದ ವ್ಯಾಪ್ತಿಯಲ್ಲಿ ತಂದು ಕೊಂಡಿಲ್ಲ. ಅಧ್ಯಯನದ ವಸ್ತುವಿನ ವಿಪುಲತೆಯ ದೃಷ್ಟಿಯಿಂದ ಇದು ತೀರ ಸಹಜವಾದ ಪರಿಮಿತಿ.

3. ಕಾವ್ಯಮೀಮಾಂಸೆಯಂತಹ ಸಾರ್ವಕಾಲಿಕವಾದ, ತಕ್ಷಣದ ವಿಮರ್ಶಾ ಸಂದರ್ಭದಿಂದ ಸೀಮಿತವಲ್ಲದ ವಿಷಯವನ್ನು ಕುರಿತು ಚರ್ಚಿಸುವಾಗಲೂ ಇವರ

ಬರವಣಿಗೆಯಲ್ಲಿ ಅನೇಕ ಪ್ರಸ್ತುತಕ್ಕೆ ಮೌಲಿಕವಾದ ಸಂಗತಿಗಳು ಅಭಿವ್ಯಕ್ತವಾಗುತ್ತವೆ. ಅನ್ವಯದ ಕೊರತೆಯಿಂದ ಇಂತಹ ಅಂಶಗಳು ತಕ್ಷಣ ಗಮನ ಸೆಳೆಯದಿರಬಹುದು. ಆದರೆ ಅನೇಕ ಆನ್ವಯಿಕ ವಿಮರ್ಶೆಗಳಿಗೆ ತಂದೆಯಾಗಬಲ್ಲ ತೂಕ ತಪ್ಪದ ಮಾತುಗಳನ್ನು ಅವರು ಆಡುತ್ತಾರೆ. ಪರಸ್ಪರ ವಿರುದ್ಧವೆನಿಸಬಹುದಾದ ಅಭಿಪ್ರಾಯಗಳನ್ನು, ಸಹಾನುಭೂತಿಯಿಂದ ಪರಿಶೀಲಿಸಿ ಸರಿದೂಗಿಸುವ ಸಾಮರ್ಥ್ಯ ಅವರಲ್ಲಿ ವಿಪುಲವಾಗಿದೆ.

4. ಪ್ರಸ್ತುತ ವಿಮರ್ಶೆಯ ಪರಿಭಾಷೆಯ ಮೇಲೆ ಅಸ್ಪಷ್ಟತೆ ಮತ್ತು ಕ್ಲಿಷ್ಟತೆಗಳ ಆಕ್ಷೇಪಣೆಯನ್ನು ಮತ್ತೆಮತ್ತೆ ಮಾಡಲಾಗುತ್ತಿದೆ. ಸಾಮಾನ್ಯ ಓದುಗರಿಗಿರಲಿ, ಸಾಹಿತ್ಯದ ವಿದ್ಯಾರ್ಥಿಗಳೂ ಅದನ್ನು ಅರ್ಥಮಾಡಿಕೊಳ್ಳುವುದು ಕಷ್ಟವೆನ್ನುತ್ತಾರೆ. ಈ ಕೃತಿಯು ನಿರೂಪಣಾವಿಧಾನ ಮತ್ತು ಶೈಲಿಗಳು ಮೇಲಿನ ಮಾತಿಗೆ ಅಪವಾದ. ಪ್ರತಿಯೊಂದು ಲೇಖನವನ್ನೂ ವಿಭಾಗಗಳಾಗಿ, ವಾಕ್ಯವೃಂದಗಳಾಗಿ ವಿಂಗಡಿಸಿರುವ ರೀತಿ, ಅನುಮಾನಕ್ಕೆ ಅವಕಾಶವೇ ಇಲ್ಲದಂತೆ ಬರೆಯುವ ಬಗೆ ಅನ್ಯಾದೃಶ್ಯವಾಗಿವೆ. ಇದು ಪ್ರೌಢವಾದರೂ ಸರಳವಾದ, ಶಾಸ್ತ್ರೋಚಿತವಾದರೂ ನೀರಸವಲ್ಲದ ಶೈಲಿ. ಶೈಲಿಯ ಸುಭಗತೆಯ ಜೊತೆಗೆ, ತೀವ್ರವಾದ ಸಾಂಸ್ಕೃತಿಕ ಕಾಳಜಿ ಹಾಗೂ ಮಾನವಪರವಾದ ನಿಲುವುಗಳನ್ನು ಗುರುತಿಸಬಹುದು. ಮಾತು ಆವೇಶಯುತವಾಗಿ ತೂಕತಪ್ಪುವ ಸಂದರ್ಭಗಳು ಇಲ್ಲವೇ ಇಲ್ಲ.

5. ಈ ಗ್ರಂಥದಲ್ಲಿ ಕೆಲಸ ಮಾಡದಿರುವುದು ಅತ್ಯುತ್ತಮವಾದ ಸಂಯೋಜಕ ಪ್ರತಿಭೆ, ಕಾವ್ಯಕ್ರಿಯೆಯನ್ನು ಕುರಿತಾದ ಮೂಲಭೂತ ಚಿಂತನೆಗಳನ್ನು ನಡೆಸಲು ಅಗತ್ಯವಾದ Launching pad ಆಗಿ ಇಂತಹ ಕೃತಿ ಅತ್ಯಗತ್ಯ. ಸ್ವತಃ ಈ ಲೇಖಕರು ಕೂಡ ಅಂತಹ ಲಂಘನವನ್ನು ನಡೆಸಲು ಅಗತ್ಯವಾದ ಪ್ರತಿಭೆಯನ್ನು ಹೊಂದಿರುವವರೇ. ಆದರೆ ಅಂತಹ ಪ್ರಯತ್ನಕ್ಕೆ ಈ ಕೃತಿಯಲ್ಲಿ ಒತ್ತು ಸಿಕ್ಕಿಲ್ಲ. ಅಂತಹ ಮಹತ್ವದ ಮಾತುಗಳು ಇರುವಾಗಲೂ, ಅವು ಸಂಗ್ರಹಿಸಿರುವ ಮಾಹಿತಿಗಳ ರಾಶಿಯಲ್ಲಿ ಮರೆಯಾಗಿಬಿಟ್ಟಿವೆ. ಹಾಗೆ ನೋಡಿದರೆ ಈ ಕೃತಿಯು ಅನೇಕ ಅಂಶಗಳಲ್ಲಿ ತೀ. ನಂ. ಶ್ರೀ. ಯವರ 'ಭಾರತೀಯ ಕಾವ್ಯಮೀಮಾಂಸೆ' ಯನ್ನು ಹೋಲುತ್ತದೆ. ಅಲ್ಲಿನಂತೆಯೇ ಇಲ್ಲಿಯೂ ಬರೆದವನ ವೈಯಕ್ತಿಕ ದೃಷ್ಟಿಕೋನವು ಗೌಣವಾಗಿ, ನಿರೂಪಿತ ವಿಷಯಕ್ಕೆ ಪ್ರಾಧಾನ್ಯ ದೊರೆಯುತ್ತದೆ. ಖಚಿತವಾದ ಗ್ರಹಿಕೆ, ಆಕರ್ಷಕವಾದ ಅಭಿವ್ಯಕ್ತಿ ಮತ್ತು ತಲಸ್ಪರ್ಶಿಯಾದ ನಿದರ್ಶನಗಳು ಕೃತಿಯ ಮೌಲಿಕತೆಯನ್ನು ಹೆಚ್ಚಿಸುತ್ತವೆ. ಆದರೆ ಚರ್ಚಿತವಾದ ವಿಷಯಕ್ಕೆ ಲೇಖಕರದೇ ಆದ ಹೊಸ ಆಯಾಮಗಳನ್ನು ಸೇರಿಸುವ ಪ್ರಯತ್ನವು ಬೇಕೆನಿಸುವಷ್ಟು ನಡೆಯುವುದಿಲ್ಲ.

6. ಪಾಶ್ಚಾತ್ಯ ವಿಚಾರಗಳನ್ನು ಸ್ವೀಕರಿಸಬಹುದಾದ ಬಗೆಗೆ ಈ ಕೃತಿಯು ಬಹಳ ಸರಿಯಾದ ಮಾನದಂಡಗಳನ್ನು ಹಾಕಿಕೊಡುತ್ತದೆ. ನಮ್ಮದೇ ಆದ ಒಂದು

ಪರಂಪರೆಯ ಅಸ್ತಿತ್ವವನ್ನು ಮರೆತು, ಅನ್ಯವಿಚಾರಗಳನ್ನು ಸಾರಾಸಗಟಾಗಿ ಸ್ವೀಕರಿಸುವ ಅತಿರೇಕಕ್ಕೆ ಇವರು ಹೋಗುವುದಿಲ್ಲ. ಹಾಗೆಯೇ ಪರಕೀಯ ವಿಚಾರಧಾರೆಗಳಿಂದ ನಾವು ಏನನ್ನೂ ಕಲಿಯಬೇಕಾಗಿಲ್ಲವೆಂದು ಹೇಳುವ ಪೂರ್ವಗ್ರಹಪೀಡಿತ ಮನೋಧರ್ಮವೂ ಇವರದಲ್ಲ. ಭಾರತೀಯ ಪರಂಪರೆಯಲ್ಲಿ ಭದ್ರವಾಗಿ ಬೇರೂರಿ, ಪಾಶ್ಚಾತ್ಯ ವಿಚಾರಗಳನ್ನು ಪ್ರೀತಿಯಿಂದ ಬರಮಾಡಿಕೊಂಡು, ಎರಡನ್ನೂ ವಿಮರ್ಶಾತ್ಮಕ ಸಂವಾದಕ್ಕೆ ಒಡ್ಡುವುದು ಇಲ್ಲಿನ ಮಾರ್ಗ,

7. ಕಾವ್ಯಾರ್ಥಚಿಂತನವನ್ನು ಬರೆದವರು ಮೂಲಭೂತವಾಗಿ ಕವಿ. ಆದ್ದರಿಂದ ಕಾವ್ಯತತ್ವಕ್ಕೆ ಸಂಬಂಧಿಸಿದ ಸಮಸ್ಯೆಗಳನ್ನು ಸೃಜನಶೀಲ ಲೇಖಕನೊಬ್ಬನ ದೃಷ್ಟಿಕೋನದಿಂದ ಪರಿಭಾವಿಸುವ ಅವಕಾಶ ಅವರದಾಗಿದೆ. ಪ್ರತಿಭೆ, ಸ್ಫೂರ್ತಿ, ಪ್ರತಿಮಾನಿರ್ಮಾಣ ಮುಂತಾದ ವಿಷಯಗಳನ್ನು ಕುರಿತು ಬರೆಯುವಾಗ ಅವರಿಗೆ ಸ್ವಾನುಭವದ ಹಿನ್ನೆಲೆಯಿರುತ್ತದೆ. ಅಲ್ಲದೆ ಅವರು ಕೊಡುವ ನಿದರ್ಶನಗಳು ಹೃದಯ ಸ್ಪರ್ಶಿಯಾಗಿರುತ್ತವೆ.

ಒಟ್ಟಿನಲ್ಲಿ ಕಾವ್ಯಾರ್ಥಚಿಂತನವು, ಕಾವ್ಯಮೀಮಾಂಸೆಯನ್ನು ಕುರಿತಾದ ಮಹತ್ವದ ಕೃತಿಗಳ ಗುಂಪಿಗೆ ನಿರ್ವಿವಾದವಾಗಿ ಸೇರುತ್ತದೆ. ತೌಲನಿಕ ಮೀಮಾಂಸೆಯ ಕ್ಷೇತ್ರದಲ್ಲಂತೂ ಅದು ಈವರೆಗೆ ಬಂದಿರುವ ಅತ್ಯುತ್ತಮ ಕನ್ನಡಗ್ರಂಥ.

ಬಿ. ಎಂ. ಶ್ರೀ : ಬದುಕು-ಬರೆಹ—ವಿ. ಎಂ. ಇನಾಂದಾರ್

ಕಳೆದ ಎರಡು ವರ್ಷಗಳು ಬಿ.ಎಂ.ಶ್ರೀ.ಯವರನ್ನು ಕುರಿತ ಸಾಂದರ್ಭಿಕ ಬರಹಗಳ ಸುಗ್ಗಿಯನ್ನೇ ಕಂಡಿವೆ. ಅವುಗಳ ಪೈಕಿ ಮೇಲಿನ ಪುಸ್ತಕವು ತನ್ನ ಸರಳ, ನೇರ ನಿರೂಪಣೆಯಿಂದ ಆಕರ್ಷಕವಾಗಿದೆ. ಆದರೆ ಮಹತ್ವಾಕಾಂಕ್ಷೆಯ ಅಭಾವವು ನಮ್ಮ ಜೀವನಚರಿತ್ರಕಾರರೆಲ್ಲರಿಗೂ ಸಮಾನವಾದ ಲಕ್ಷಣ. ಜೀವನಚರಿತ್ರೆಯ ಕೇಂದ್ರವ್ಯಕ್ತಿಯ ಗುಣಗಳ ವೈಭವೀಕರಣ ಮತ್ತು ಗುಣಗಳ ಬಗ್ಗೆ ತೋರಿಸುವ ಅವಜ್ಞತೆ/ಮೌನವು ಅಂತಹ ಪ್ರಶಂಸಾಪರ ಕೃತಿಗಳ ಬಹುಮುಖ್ಯ ಪರಿಮಿತಿಯಾಗಿಬಿಡುತ್ತದೆ. ಹಾಗೆ ನೋಡಿದರೆ ವಿ. ಎಂ. ಇನಾಂದಾರ್ ಅವರಿಗೆ ಶ್ರೀಯವರು ಬದುಕಿದ ಸಾಮಾಜಿಕ ಸನ್ನಿವೇಶ ಮತ್ತು ತಳೆದ ಧೋರಣೆಗಳು ಅಪರಿಚಿತವೇನೂ ಅಲ್ಲ. ಅವರು ಶ್ರೀಯವರ ಬದುಕಿನ ದ್ವಂದ್ವಗಳು ಮತ್ತು ಬರೆಹದ ಪರಿಮಿತಿಗಳನ್ನು ವಸ್ತುನಿಷ್ಠವಾಗಿ ಪರಿಶೀಲಿಸುವ ಪ್ರಯತ್ನ ಮಾಡಿದ್ದರೆ ಕೃತಿಗೆ ಹೊಸ ಆಯಾಮಗಳು ಪ್ರಾಪ್ತವಾಗುತ್ತಿದ್ದವು. ಅದರ ಬದಲು ಲೇಖಕರು ತಳೆದಿರುವ ಸಮರ್ಥನೆಯ ಧಾಟಿಯು, ಕೃತಿಯನ್ನು ಪಾಂಡಿತ್ಯಪೂರ್ಣ ಪರಿಚಯದ ನೆಲೆಯಲ್ಲಿಯೇ ನಿಲ್ಲಿಸಿಬಿಟ್ಟಿದೆ. ಈ ಸಂದರ್ಭದಲ್ಲಿ ಎ. ಎನ್. ಮೂರ್ತಿರಾಯರು

ಬರೆದಿರುವ ಬಿ.ಎಂ.ಶ್ರೀಯವರನ್ನು ಕುರಿತ ಗ್ರಂಥವು ಸವಾಲುಗಳನ್ನು ಸ್ವೀಕರಿಸುವುದರ ಮೂಲಕವೇ ಹೆಚ್ಚು ಮೌಲಿಕವಾಗಿರುವ ಸಂಗತಿಯನ್ನು ನೆನಪು ಮಾಡಿಕೊಳ್ಳಬಹುದು.

ಈ ಗ್ರಂಥವು ಬಿ.ಎಂ.ಶ್ರೀಯವರ ಸಾರ್ವಜನಿಕ ಜೀವನದ ಮಹತ್ವದ ಮಜಲುಗಳನ್ನು, ಸಾಹಿತ್ಯದ ಸಾಧನೆಗಳನ್ನು ಆತ್ಮೀಯವಾದ ಧಾಟಿಯಲ್ಲಿ ಪರಿಚಯ ಮಾಡಿಕೊಡುತ್ತದೆ. ಶ್ರೀಯವರ ಕೃತಿಗಳಿಗೆ ಸಂಬಂಧಪಟ್ಟಹಾಗೆ ಈಗಾಗಲೇ ಬಂದಿರುವ ಬರೆಹಗಳ ಪರಿಶೀಲನೆಯಾಗಲೀ, ಅಲ್ಲಿ ಉದ್ಭವವಾಗಿರುವ ಚರ್ಚೆಗಳ ಸಮರ್ಥ ಮುಂದುವರಿಕೆಯಾಗಲೀ ಇಲ್ಲಿ ನಡೆದಿರುವುದು ಅಂಶಿಕವಾಗಿ ಮಾತ್ರ. ಆದರೆ ಈ ಲೇಖಕರು ಶ್ರೀಯವರ ಕೃತಿಗಳನ್ನು ಕುರಿತ ತಮ್ಮದೇ ಆದ ಒಳನೋಟ ಗಳನ್ನು ಕೊಡುವುದರಲ್ಲಿ ಯಶಸ್ವಿಯಾಗುತ್ತಾರೆ. ಆದರೇನು ? ಇವರ ನಂತರ ಬರೆಯುವವರು ತಾವು ಮತ್ತೆ ಮೊದಲಿನಿಂದ ಬರೆಯುತ್ತಿರುವವರಂತೆ ಪ್ರಾರಂಭಿಸು ತ್ತಾರೆ. ವಿಮರ್ಶೆಯು ಇಡಿಯಾಗಿ, ತನ್ನದೇ ಆದ ಪಾರಂಪರಿಕ ಶಿಸ್ತಿನಿಂದ ಬದ್ಧವಾದ ಸಾಂಘಿಕ ಕ್ರಿಯೆಯಾಗುವ ಬದಲು, ನಿರ್ವಾತದಲ್ಲಿ ರಚಿತವಾಗುವ ಬಿಡಿ ಬರೆಹವಾಗಿಬಿಟ್ಟರೆ ಇಂತಹ ದುರಂತವು ಅನಿವಾರ್ಯ.

13803

ಗೋವಿಂದ ಪೈ – ಸ್ಮೃತಿ-ಕೃತಿ : ಕಯ್ಯಾರ ಕಿಞ್ಞಣ್ಣರೈ

ವಿಶ್ವವಿದ್ಯಾಲಯವೊಂದು ತನ್ನ ಸಾಂಸ್ಕೃತಿಕ ಜವಾಬ್ದಾರಿಗಳನ್ನು ನಿರ್ವಹಿ ಸುವ ಬಗೆಗಳಲ್ಲಿ ಪುಸ್ತಕ ಪ್ರಕಟಣೆಯು ಮುಖ್ಯವಾದುದು. ಕರ್ನಾಟಕದ ಕರಾವಳೀ ಜಿಲ್ಲೆಗಳ ಜನರ ಬಹುಕಾಲದ ಹಂಬಲದ ಫಲವಾಗಿ ಮೂಡಿಬಂದ ಮಂಗಳೂರು ವಿಶ್ವವಿದ್ಯಾಲಯವು, ತನ್ನ 'ಪೂರ್ಣ ಪರಿಚಯ-ಪುಸ್ತಕಮಾಲೆ'ಯ ಮೊದಲ ಕೃತಿಯಾಗಿ, ಆ ಪ್ರದೇಶದ ಹಿರಿಯ ಕವಿ-ಸಂಶೋಧಕರಾಗಿದ್ದ ಗೋವಿಂದ ಪೈ ಅವರ ಬದುಕು-ಬರೆಹಗಳನ್ನು ಕುರಿತ ಪುಸ್ತಕವೊಂದನ್ನು ಪ್ರಕಟಿಸಿರುವುದು ಅತ್ಯಂತ ಔಚಿತ್ಯಪೂರ್ಣವಾಗಿದೆ. ಪುಸ್ತಕದ ಒಳಮೈ ಮತ್ತು ಹೊರಮೈಗಳು ಅಚ್ಚುಕಟ್ಟಾಗಿವೆ ; ಸುಂದರವಾಗಿವೆ.

ಇಂತಹ ಜೀವನಚರಿತ್ರೆಗಳ ವಿಮರ್ಶೆಯು, ಜೀವನಚರಿತ್ರಕಾರರು ಅನುಸರಿ ಸಿರುವ ಮಾರ್ಗವನ್ನು ಕುರಿತು ಇರಬಹುದೇ ವಿನಾ ಕೃತಿಯ ಕೇಂದ್ರವಾಗಿರುವ ವ್ಯಕ್ತಿಯ ಬದುಕು-ಬರೆಹಗಳನ್ನು ಕುರಿತು ಅಲ್ಲ. ಆದ್ದರಿಂದ ನಾನು ನವೋ ದಯದ ಹಿರಿಯರಾದ ಗೋವಿಂದಪೈಗಳನ್ನು ಕುರಿತಾದ ಯಾವುದೇ ಚರ್ಚೆಗೆ ತೊಡಗುವುದಿಲ್ಲ.

ಪ್ರಸ್ತುತ ಜೀವನಚರಿತ್ರಕಾರರು ಹಳೆಯ ತಲೆಮಾರಿನ ವಿದ್ವಾಂಸರು ; ಗೋವಿಂದಪೈಯವರ ಕಿರಿಯ ಮಿತ್ರರು ; ಅಭಿಮಾನಿಗಳು ಇಪ್ಪತ್ತು ಹಿನ್ನೆಲೆ ಇದ್ದರೆ

ಪ್ರಶಂಸಾಪರವಾದ ಜೀವನಚರಿತ್ರೆಯೊಂದರ ರಚನೆಗೆ ಅಗತ್ಯವಾದ ಭೂಮಿಕೆಯೊಂದು ತಾನಾಗಿಯೇ ಸಿದ್ಧವಾಗುತ್ತದೆ. ಸುಮಾರು 200 ಪುಟಗಳ ಈ ಗ್ರಂಥದಲ್ಲಿ ಟೀಕೆಯೆಂದು ಕರೆಯಬಹುದಾದ ಒಂದೇ ಒಂದು ವಾಕ್ಯ ಕೂಡ ಇಲ್ಲದಿರುವುದು ಲೇಖಕರ ಧೋರಣೆಯ ಏಕಮುಖತೆಗೆ ಸಾಕ್ಷಿಯಾಗುತ್ತದೆ. ಹೀಗಾಗಲು ಕಾರಣ ಜೀವನಚರಿತ್ರೆಯ ಸ್ವರೂಪವನ್ನು ಕುರಿತಾದ ತಪ್ಪು ತಿಳಿವಳಿಕೆ. ಇಪ್ಪತ್ತನೆಯ ಶತಮಾನದ ಸಾಂಸ್ಕೃತಿಕ ಸಂದರ್ಭದ ಹಿನ್ನೆಲೆಯಲ್ಲಿ ಪೈಯವರ ಸಾಧನೆಯನ್ನು ಅಳೆಯುವ ಬದಲು, ಅವರ ಜೀವನದ ವಿವರಗಳನ್ನು ದಾಖಲೆ ಮಾಡುವ ಮಾರ್ಗ ಇಲ್ಲಿ ಒಪ್ಪಿತವಾಗಿದೆ.

ಗೋವಿಂದ ಪೈಯವರ ಕೃತಿಪರಿಚಯ ಮಾಡಿಕೊಡುವಾಗ ಲೇಖಕರು ಹಿಡಿದಿರುವ ಮಾರ್ಗವು ತೀರ ಸಾಮಾನ್ಯವಾದುದು. ನೂರಾರು ಪದ್ಯಗಳನ್ನು ಹೆಸರಿಸಿ, ಪ್ರತಿಯೊಂದರ ಬಗ್ಗೆಯೂ ವಿವರಣಾತ್ಮಕವಾದ ನಾಲ್ಕಾರು ಸಾಲುಗಳನ್ನು ಬರೆಯುವ ಈ ವಿಧಾನವು ಪುಟಗಳನ್ನು ತುಂಬಲು ನೆರವಾಗುವುದೇ ಹೊರತು, ಪೈಯವರ ಕಾವ್ಯದ ಸಮಗ್ರ ಅಧ್ಯಯನಕ್ಕೆ ಅಗತ್ಯವಾದ ನೆಲೆಗಳನ್ನು ಒದಗಿಸಿ ಕೊಡುವುದಿಲ್ಲ. ಖಂಡಕಾವ್ಯಗಳು ಮತ್ತು ನಾಟಕಗಳ ಪರಿಚಯ ಕೂಡ ಅಷ್ಟೆ. ನಿದರ್ಶನ ಬಾಹುಳ್ಯ ಮತ್ತು ಒಳನೋಟಗಳ ಕೊರತೆಗಳು ಅದರ ಮುಖ್ಯ ಲಕ್ಷಣಗಳು. ಸಂಶೋಧಕ ಗೋವಿಂದಪೈಯವರ ವಿಧಾನ, ತೀರ್ಮಾನ ಮತ್ತು ಉಪಕರಣಗಳ ಮೌಲ್ಯಮಾಪನ ಮಾಡುವ ಪ್ರಾಥಮಿಕ ಪ್ರಯತ್ನವನ್ನು ಕೂಡ ಇಲ್ಲಿ ಮಾಡಲಾಗಿಲ್ಲ. ಲೇಖಕರ ವೈಯಕ್ತಿಕ ಅನುಭವಗಳ ಫಲವಾಗಿ ಪೈಯವರ ಆತ್ಮೀಯ ಚಿತ್ರವನ್ನು ಕೊಡುವುದು ಸಾಧ್ಯವಾಗಿದೆ.

ಈ ಜೀವನಚರಿತ್ರೆಯು ಮೊದಲಿನಿಂದ ಕೊನೆಯವರೆಗೆ ಓದಿಸಿಕೊಂಡು ಹೋದರೆ, ಅದಕ್ಕೆ ಗೋವಿಂದಪೈಯವರ ಅಸಾಧಾರಣ, ಧೀರಜೀವನವು ಕಾರಣವೇ ಹೊರತು ಜೀವನಚರಿತ್ರಕಾರರ ನಿರೂಪಣ ಪ್ರತಿಭೆಯೇನೂ ಅಲ್ಲ.

### ಗೋವಿಂದಪೈ : ವಿವಿಧ ಲೇಖಕರು

ಗೋವಿಂದಪೈ ಅವರ ಜನ್ಮಶತಮಾನೋತ್ಸವದ ಸ್ಮರಣೆಗಾಗಿ ಮೈಸೂರು ವಿಶ್ವವಿದ್ಯಾನಿಲಯವು ಪ್ರಕಟಿಸಿರುವ ಈ ಗ್ರಂಥವು ಹನ್ನೆರಡು ಲೇಖನಗಳು ಮತ್ತು ಒಂದು ಕವನವನ್ನು ಒಳಗೊಂಡಿರುವ ಸಂಕಲನ. ಈ ಲೇಖಕರೆಲ್ಲರೂ ಕನ್ನಡ ಅಧ್ಯಯನ ಸಂಸ್ಥೆಯ ಅಧ್ಯಾಪಕರೆನ್ನುವುದು ಒಂದು ವಿಶೇಷ. ಗೋವಿಂದಪೈಯವರ ಬದುಕು ಮತ್ತು ಸಮಗ್ರ ಕೃತಿಗಳ ಸಮೀಕ್ಷೆ ನಡೆಸುವ ತನ್ನ ಉದ್ದೇಶದಲ್ಲಿ ಸಾಕಷ್ಟು ಯಶಸ್ವಿಯಾಗಿದೆ. ಇಂತಹ ಸಂಕಲನ ಗ್ರಂಥದ ಲೇಖನಗಳ ನಡುವೆ ಗುಣಾತ್ಮಕ ವ್ಯತ್ಯಾಸವಿರುವುದು ಸಹಜ ಮತ್ತು ಅನಿವಾರ್ಯ.

ಪೈ ಅವರ ಬದುಕು ಮತ್ತು ವ್ಯಕ್ತಿತ್ವಗಳನ್ನು ಕಂಡರಿಸುವ ಉದ್ದೇಶದಿಂದ ಹೊರಡುವ ಪ್ರಭುಶಂಕರ ಅವರ ಲೇಖನವು ಜೀವನಕ್ಕೆ ಸಂಬಂಧಪಟ್ಟ ನೀರಸ ವಿವರಗಳು ಕೊಡದೆ, ಕೆಲವೇ ಕೆಲವು ಬೀಸುರೇಖೆಗಳಲ್ಲಿ ಅವರ ಮೇರುಸಮ ವ್ಯಕ್ತಿತ್ವವನ್ನು ಮೂಡಿಸುತ್ತದೆ. ಯಾವುದೇ ವ್ಯಕ್ತಿಯನ್ನು ಆತ್ಮೀಯವಾಗಿ ಪರಿಭಾವಿಸುವ, ಪ್ರೀತಿ ಪೂರ್ವಕವಾದ ನುಡಿ ಕಾಣಿಕೆ ಸಲ್ಲಿಸಬಲ್ಲ ಪ್ರಭುಶಂಕರ ಅವರ ರೂಪಣ ವಿಧಾನವು ಹೃದ್ಯವಾಗಿದೆ ; ನಿರಾಳವಾಗಿದೆ.

ಸಿ. ಪಿ. ಕೃಷ್ಣಕುಮಾರ್ ಅವರು, ಪೈ ಅವರ ಭಾವಗೀತೆಗಳನ್ನು ಪರಿಚಯ ಮಾಡಿಕೊಡುವ ಕೆಲಸವನ್ನು ತಮಗೆ ವಿಶಿಷ್ಟವಾದ ರೀತಿಯಲ್ಲಿ ನಿರ್ವಹಿಸಿದ್ದಾರೆ. ಅಧ್ಯಯನ ಮತ್ತು ಪರಿಶ್ರಮಗಳ ಕೊರತೆ ಅವರಲ್ಲಿ ಯಾವಾಗಲೂ ಇರುವುದಿಲ್ಲ. ಕೊರತೆಯೇನಿದ್ದರೂ ತಮಗಿರಬಹುದಾದ ಸೈದ್ಧಾಂತಿಕ ಜ್ಞಾನವನ್ನು ಪ್ರಾಯೋಗಿಕ ವಿಮರ್ಶೆಯಲ್ಲಿ ಬಳಸದೆ ಹೋಗುವುದು. ಮತ್ತು ನಿದರ್ಶನ ಬಾಹುಳ್ಯದ ಹಿಂದೆ ಅಡಗಿರಬೇಕಾದ ವೈಚಾರಿಕ ಒಳನೋಟಗಳು ಇಲ್ಲದೆ ಹೋಗುವುದು. ನವೋದಯ ಕಾವ್ಯದ ಒಟ್ಟು ಸಂದರ್ಭದಲ್ಲಿ ಪೈಯವರ ಬರವಣಿಗೆಯ ವಿಶಿಷ್ಟತೆಯನ್ನೋ, ಪರಿಮಿತಿಗಳನ್ನೋ ಗುರುತಿಸುವ ಬದಲು ಅವರ ಬಿಡಿಕವನಗಳ, ಆಯ್ದ ಭಾಗಗಳ ವಿವರಣೆಯಲ್ಲಿಯೇ ಈ ಲೇಖನವು ತೃಪ್ತವಾಗುತ್ತದೆ.

ಪೈ ಅವರ ಖಂಡ ಕಾವ್ಯಗಳನ್ನು ಕುರಿತಂತೆ ಬಂದಿರುವ ಎರಡು ಲೇಖನಗಳು ಬೇರೆ ಬೇರೆ ಕಾರಣಗಳಿಗಾಗಿ ವಿಶಿಷ್ಟವಾಗುತ್ತವೆ. ಶಂಕರ ಮೊಕಾಶಿಯವರು ವೈಶಾಖಿಯನ್ನು ಕುರಿತು ಬರೆದಿರುವ ಲೇಖನವು ಅನೇಕ ಒಳನೋಟಗಳಿಂದ ಕೂಡಿದ್ದು ಮಹತ್ವ ಪೂರ್ಣವಾಗಿದೆ. ಕನ್ನಡ ಕಾವ್ಯವ ಮೊದಲಿಗರಲ್ಲಿ ಅನುಪಮ ವಾದ ಸಾಹಿತ್ಯ ಪ್ರಜ್ಞೆ, ಭಾಷಾಪ್ರಜ್ಞೆ, ಕಲಾವಿವೇಕ, ಇತಿಹಾಸ ಪ್ರಜ್ಞೆ, ಸ್ವಾಧಿಷ್ಠಾನ ಪ್ರಜ್ಞೆ ಮತ್ತು ಹೊಣೆಗಾರಿಕೆಯನ್ನು ಹೊಂದಿದ್ದ ಕವಿಯೆಂದು ಪೈಯವರನ್ನು ಗುರುತಿಸುವ ಮೊಕಾಶಿಯವರು ವೈಶಾಖಿಯನ್ನು ದೈವೀಕಾವ್ಯವೆಂದು ಹೆಸರಿಸಿ, ಅಂತಹ ಕಾವ್ಯದ ಅಥವಾ ವ್ಯಕ್ತಿತ್ವದ ಲಕ್ಷಣಗಳನ್ನು ವಿಶದೀಕರಿಸುವುದು ಲಾಭದಾಯಕವಲ್ಲವೆಂದು ಹೇಳಿ, ಕೈಚೆಲ್ಲಿ ಕೊಡುತ್ತಾರೆ. ಅವರು ಹೇಳಿರುವ ಮಹತ್ವದ ಮಾತುಗಳು ಕಾವ್ಯದ ಲಯ ವಿನ್ಯಾಸ ಮತ್ತು ಛಂದೋವೈವಿಧ್ಯಗಳಿಗೆ ಸಂಬಂಧಿಸಿದವು. 'ವೈಶಾಖಿ'ಯಲ್ಲಿನ ಅಂತರ್ಗಣ, ಅಂತಃಪದ ಪ್ರವಾಹ ಮತ್ತು ಯತಿಭಂಗವನ್ನು ಸೋದಾಹರಣವಾಗಿ ವಿವರಿಸುವ ಮೊಕಾಶಿಯವರು, ಸರಳ ರಗಳೆಯ ಮೇಲೆ ಪೈಯವರಿಗಿದ್ದ ಪ್ರಭುತ್ವವು ಅನ್ಯಾದೃಶ್ಯವೆಂದು ಹೇಳಿ, ಕುವೆಂಪುರವರ ಮಹಾಕಾವ್ಯದ ಮಹಾಛಂದಸ್ಸಿಗೆ ಮೂಲ ಮಾದರಿಯನ್ನು ಇಲ್ಲಿ ಕಾಣುತ್ತಾರೆ. ಶ್ರೀರಾಮಾಯಣದರ್ಶನವು ವೈಶಾಖಿಗಿಂತ, ಗಾವುದಗಟ್ಟಲೆ

ಮುಂದೆ ಹೋಗಿದೆಯೆಂಬ ತಥ್ಯವನ್ನು ಒಪ್ಪಿದರೂ ಕೂಡ ಪೈಯವರ ಸಾಧನೆಯನ್ನು ಅಲ್ಲಗಳೆಯುವುದಿಲ್ಲ.

ಏಸುಕ್ರಿಸ್ತನ ಬದುಕಿನ ಕೊನೆಯ ದಿನಗಳನ್ನು, ಕುರಿತಾದ ದಾಖಲೆಗಳ ಬಗ್ಗೆ ಎಡ್ವರ್ಡ್ ನರೋನಾ ಅವರಿಗೆ ಇರುವ ವ್ಯಾಪಕವಾದ ತಿಳಿವಳಿಕೆಯು ಅವರ ಲೇಖನಕ್ಕೆ ಹೊಸದೊಂದು ಆಯಾಮವನ್ನು ತಂದುಕೊಟ್ಟಿದೆ. ಸುವಾರ್ತೆಗಳ ಮೂಲಕ ಮೂಡಿಬರುವ ಏಸುವಿನ ವ್ಯಕ್ತಿತ್ವಕ್ಕೆ ಹೋಲಿಸಿದರೆ, ಗೊಲ್ಗೊಥಾದ ನಾಯಕನ ಚಿತ್ರವು ಅಷ್ಟೊಂದು ಉದಾತ್ತವಾಗಿಲ್ಲವೆನ್ನುವ ಈ ಲೇಖಕರು ಗೊಲ್ಗೊಥಾದ ಜೀವನಾಡಿಯನ್ನು ಹಿಡಿದಿಲ್ಲವೆಂದೇ ಹೇಳಬೇಕು. ಗೊಲ್ಗೊಥಾದ ಓದುಗರಿಗೆ, ಏಸುವು ನಮ್ಮ ಯುಗದ ಅತ್ಯುನ್ನತ ಮನುಷ್ಯರಲ್ಲಿ ಒಬ್ಬನೆಂಬ ಸಂಗತಿಯು ಖಂಡಿತವಾಗಿಯೂ ಮನದಟ್ಟಾಗುತ್ತದೆ. ಗೊಲ್ಗೊಥಾ ಒಂದು ಸೃಜನಶೀಲ ಕೃತಿಯೆಂಬ ಸಂಗತಿಯನ್ನು ಮರೆತಂತೆ ಅದನ್ನು ಸುವಾರ್ತೆಗಳೊಂದಿಗೆ ಹೋಲಿಸುತ್ತಾ ಹೋಗುವುದು ವಿಮರ್ಶೆಯ ವಿಧಾನವಲ್ಲ.

ಗೋವಿಂದ ಪೈ ಅವರ ಸಾಹಿತ್ಯಕ ಸಂಶೋಧನೆ, ಐತಿಹಾಸಿಕ ಸಂಶೋಧನೆ ಮತ್ತು ಧರ್ಮಕ್ಕೆ ಸಂಬಂಧಪಟ್ಟ ಬರೆಹಗಳ ಬಗ್ಗೆ ಈ ಗ್ರಂಥದಲ್ಲಿ ಮೂರು ಲೇಖನಗಳಿವೆ. ಶ್ರೀಯುತರುಗಳಾದ ಜಿ. ವರದರಾಜರಾವ್, ಬಾ. ರಾ. ಗೋಪಾಲ್ ಮತ್ತು ಟಿ. ವಿ. ವೆಂಕಟಾಚಲಶಾಸ್ತ್ರಿಯವರು ಇವುಗಳ ಲೇಖಕರು. ಇವು ಪಾಂಡಿತ್ಯಪೂರ್ಣವಾದ ವಸ್ತುನಿಷ್ಠವಾದ ಆದರೆ ಅಂತಹ ಸಮರ್ಥ ಒಳನೋಟಗಳನ್ನು ಕೊಡಲಾರದ ಬರೆಹಗಳು. ಡಿ. ಎಲ್. ಎನ್. ; ತೀ. ನಂ. ಶ್ರೀ.–ಮುಂತಾದ ಹಳೆಯ ಮೈಸೂರಿನ ಕಡೆಯ ವಿಮರ್ಶಕರ ಶಿಷ್ಯವರ್ಗಕ್ಕೆ ಸೇರಿದ ವರದರಾಜರಾಯರು, ಪೈಯವರ ನಿಷ್ಠೆ ಮತ್ತು ಪಾಂಡಿತ್ಯಗಳ ಬಗ್ಗೆ ಅಪಾರ ಮೆಚ್ಚಿಗೆ ತೋರಿಸುವವರಾದರೂ ಕೂಡ ಅವರ ಸಂಶೋಧನಾ ವಿಧಾನಗಳು ಮತ್ತು ತೀರ್ಮಾನಗಳನ್ನು ತಲುಪುತ್ತಿದ್ದ ಬಗೆಯನ್ನು ಕುರಿತು ಸ್ವಲ್ಪ ಅಸಮಾಧಾನವನ್ನು ವ್ಯಕ್ತಪಡಿಸುವುದನ್ನು ಗಮನಿಸಬಹುದು. ಪೈಯವರ ಪ್ರತಿಯೊಂದು ಲೇಖನವನ್ನು ತೆಗೆದುಕೊಂಡು, ಅದನ್ನು ತಮ್ಮ ಮತ್ತು ಇತರರ ಪಾಂಡಿತ್ಯದ ಒರೆಗಲ್ಲಿಗೆ ಹಚ್ಚಿ ನೋಡಿ ಸೂಕ್ತವಾದ ತೀರ್ಮಾನಗಳನ್ನು ತಲುಪುವ ಈ ಹಿರಿಯ ವಿದ್ವಾಂಸರ ಪರಿಶ್ರಮವನ್ನು ಮೆಚ್ಚದಿರಲು ಸಾಧ್ಯವಿಲ್ಲ.

ವೆಂಕಟಾಚಲಶಾಸ್ತ್ರಿಗಳ ಲೇಖನದ ಮೊದಲ ಭಾಗವು ಪೈಗಳ ಸಂಶೋಧನ ವಿಧಾನ ಆಳ–ಅಗಲಗಳ ಮೇಲೆ ತಲಸ್ಪರ್ಶಿಯಾದ ಮಾತುಗಳನ್ನು ಹೇಳುವುದಾದರೂ ಮುಂದಿನ ಭಾಗ ಅವರ ಹಲವು ಲೇಖನಗಳ ಸಾರಸಂಗ್ರಹದಲ್ಲಿಯೇ ತೃಪ್ತವಾಗಿದೆ. ಬಾ. ರಾ. ಗೋಪಾಲ್ ಅವರ ಲೇಖನ ಕೂಡ ಗೌರವ ಮತ್ತು ವಿಮರ್ಶಾತ್ಮಕ

ಧೋರಣೆಗಳ ನಡುವೆ ಸಮನ್ವಯ ಸಾಧಿಸಲು ಪ್ರಯತ್ನಿಸುತ್ತದೆ. ಈ ಮೂರು ಲೇಖನಗಳೂ ಕೂಡ ಪೈಯವರ ಆಸಕ್ತಿ–ವೈವಿಧ್ಯ ಮತ್ತು ಮೇರೆಯಿಲ್ಲದ ಸಂಶೋಧಕ ಪ್ರವೃತ್ತಿಗಳ ಬಗ್ಗೆ ಬೆರಗು ಮೂಡಿಸುತ್ತವೆ. ಅಲ್ಪಫಲದಾಯಿಯಾದ ಅಕಡೆಮಿಕ್ ಸಂಶೋಧನೆಯು ನಮ್ಮ ದಿನಗಳಲ್ಲಿ ಪೈಯವರ ಸಾಧನೆ ಹಲವು ಪಾಠಗಳನ್ನು ಕಲಿಸಬಲ್ಲುದು.

ಎಚ್. ಎಂ. ಚೆನ್ನಯ್ಯನವರು, ಪೈಯವರ ಹೆಬ್ಬೆರಳು ಮತ್ತು ಚಿತ್ರಭಾನು ಎಂಬ ಸ್ವಂತ ನಾಟಕಗಳನ್ನೂ, ಇತರ ಅನುವಾದಿತ ನಾಟಕಗಳನ್ನೂ ವಿಮರ್ಶಾತ್ಮಕವಾಗಿ ಸಮೀಕ್ಷಿಸಿದ್ದಾರೆ. ರಂಗಪ್ರಯೋಗಕ್ಕಿಂತ, ಕೃತಿಗಳ ಸಾಹಿತ್ಯಕ ಸಂಗತಿಗಳನ್ನು ಗಮನಿಸುವುದು ಇಲ್ಲಿ ಮುಖ್ಯವಾಗಿದೆ. ಆ ಕೆಲಸವು ಅಚ್ಚುಕಟ್ಟಾಗಿ ನಡೆದಿದೆ.

ತಾವು ಮಾಡುವ ಯಾವುದೇ ಕೆಲಸವನ್ನು ವಿವರವಾಗಿ, ಸುದೀರ್ಘವಾಗಿ ಮಾಡುವ ಪ್ರಧಾನ್ ಗುರುದತ್ ಅವರು, ಗೋವಿಂದ ಪೈ ಅವರ ಅನುವಾದಗಳನ್ನು ಪರಿಶೀಲಿಸುವ ಕಾರ್ಯದಲ್ಲಿಯೂ ಅದೇ ಬಗೆಯ ಪರಿಣತಿಯನ್ನು ತೋರಿಸಿದ್ದಾರೆ. ಉಮರನ ರುಬಾಯಿಗಳು, ಶ್ರೀಕೃಷ್ಣ ಚರಿತ ಮತ್ತು ಜಪಾನಿನ ನೋ ನಾಟಕಗಳು— ಈ ಮೂರು ಅನುವಾದಿತ ಕೃತಿಗಳಲ್ಲಿಯೂ ಮೂಲವನ್ನು ಹುಡುಕಿಕೊಂಡು ಹೋಗಿ, ವಾಕ್ಯ–ವಾಕ್ಯಗಳನ್ನೂ ಹೋಲಿಸಿ ನೋಡಿ, ಸರಿ ತಪ್ಪುಗಳನ್ನು ಹುಡುಕಿ ಹೇಳುವ ಪರಿಶ್ರಮ ಶ್ಲಾಘನೀಯವಾದುದು. ಆದರೆ ಸೃಜನಶೀಲ ಕೃತಿಗಳ ಹೃದಯವನ್ನು ತಲುಪಲು ಬೇಕಾದ ಒಳನೋಟದ ಅಭಾವವು, ಅನುವಾದಗಳ ಈ ಅಧ್ಯಯನವನ್ನು ಕೊಂಚ ಯಾಂತ್ರಿಕವಾಗಿ ಮಾಡುತ್ತದೆ. ಆದರೂ ಈ ಲೇಖನವು ಪರಿಶ್ರಮ, ಪ್ರಾಮಾಣಿಕತೆ ಮತ್ತು ಅನುವಾದ ಕ್ರಿಯೆಯಲ್ಲಿನ ತೀವ್ರ ಆಸಕ್ತಿಯ ಫಲ. ರಾಗೌ ಅವರ ಲೇಖನವು ಪೈ ಅವರ ಬಗ್ಗೆ ಈವರೆಗೆ ಬಂದಿರುವ ಎಲ್ಲ ಲೇಖನಗಳ ಸಮೀಕ್ಷೆ ನಡೆಸುತ್ತದೆ. ಇದೂ ಕೂಡ ನಿಷ್ಪಕ್ಷಪಾತವಾದ, ವಿವರನಿಷ್ಠವಾದ ಒಂದು ಪ್ರಯತ್ನ. ಪೈಯವರ ಬಗ್ಗೆ ಬಂದ ಕೃತಿಗಳನ್ನು ಕೇವಲ ಹೊಗಳದೆ ಅವುಗಳ ಲೋಪದೋಷಗಳನ್ನು ತೋರಿಸಿಕೊಟ್ಟಿರುವುದರಿಂದ ಇದೊಂದು ಉಪಯುಕ್ತ ಲೇಖನ.

ಡಿ. ವಿಜಯ ಮತ್ತು ಹಾ. ಮಾ. ನಾಯಕ ಅವರ ಲೇಖನಗಳನ್ನು ಒಟ್ಟಿಗೆ ಪರಿಶೀಲಿಸಬಹುದು. ಇಡೀ ಗ್ರಂಥದಲ್ಲಿಯೇ ಅತ್ಯಂತ ಆಕರ್ಷಕವಾದ ಗದ್ಯವು ಇಲ್ಲಿ ದೊರಕುತ್ತದೆ. ಪತ್ರ ಸಾಹಿತ್ಯದ ಪ್ರಮುಖ ಲಕ್ಷಣಗಳನ್ನು ವಿವರಿಸುತ್ತಲೇ ಗೋವಿಂದ ಪೈ ಅವರ ಪತ್ರಗಳ ಮೂಲಕ ವ್ಯಕ್ತವಾಗುವ ಅವರ ಸ್ವಭಾವ, ವಿಶಿಷ್ಟತೆಗಳನ್ನೂ ದಾಖಲೆ ಮಾಡುವ ವಿಜಯಾ ಅವರ ಸಮಗ್ರ ಲೇಖನವು,

ಸೃಜನಶೀಲ ಬರಹದಂತೆ ಓದಿಸಿಕೊಂಡು ಹೋಗುತ್ತದೆ. ಸಾಂದರ್ಭಿಕ ಲೇಖನಗಳನ್ನು ಬರೆಯುವ ಕೆಲಸವನ್ನು ಒಂದು ಉತ್ತಮ ಕಲೆಯ ಮಟ್ಟಕ್ಕೆ ರೂಢಿಸಿಕೊಂಡಿರುವ ಹಾ. ಮಾ. ನಾಯಕರು, ಗೋವಿಂದ ಪೈಯವರ ಲಲಿತ ಪ್ರಬಂಧಗಳನ್ನು ಬಹಳ ಆತ್ಮೀಯವಾದ ಧಾಟಿಯಲ್ಲಿ ಪರಿಚಯ ಮಾಡಿಕೊಟ್ಟಿದ್ದಾರೆ. ಇದು ಪೈಯವರ ಬಗ್ಗೆ ಗೌರವದೊಂದಿಗೆ ಆತ್ಮೀಯತೆಯನ್ನು ಮೂಡಿಸುವ ಬರವಣಿಗೆ.

ಒಟ್ಟು ಕೃತಿಯು ಹಲವು ಉಪಯುಕ್ತ ಲೇಖನಗಳನ್ನೂ, ಕೆಲವು ಪರಿಚಯಾತ್ಮಕ ಬರವಣಿಗೆಯನ್ನೂ ಒಳಗೊಂಡಿದ್ದು, ಪೈಯವರ ಬಗ್ಗೆ ಇನ್ನು ಮೇಲೆ ನಡೆಯ ಬೇಕಾಗಿರುವ ಅಧ್ಯಯನಕ್ಕೆ ಸೂಕ್ತ ಹಿನ್ನೆಲೆಯನ್ನು ಒದಗಿಸುವ ಮೈಲಿಗಲ್ಲು ಆಗಿದೆ.

### ಕೈಲಾಸಂ : ಅ. ರಾ. ಮಿತ್ರ

"ಸಾರ್ವಜನಿಕ ಜೀವನದಲ್ಲಿ ಮನ್ನಣೆ, ಗೌರವ ಪಡೆದ ಹಲವಾರು ಪ್ರತಿಭಾನಿತ್ವ ವ್ಯಕ್ತಿಗಳ ಸಾಧನೆ_ಸಿದ್ಧಿಯ ವಿಹಂಗಮ ನೋಟ"ವನ್ನು "ಸಾಧ್ಯವಾದಷ್ಟು ಸರಳ ವಾಗಿ ಮಾಡಿಕೊಡುವ" ಉದ್ದೇಶದಿಂದ ಬೆಂಗಳೂರು ವಿಶ್ವವಿದ್ಯಾಲಯದವರು ಪ್ರಕಟಿಸುತ್ತಿರುವ 'ಮನೆಗೊಂದು ಹಣೆ ದೀಪ' ಮಾಲೆಯ ಎಂಟನೆಯ ಕೃತಿಯು ಯಥಾಪ್ರಕಾರ ಜೀವನ ಚರಿತ್ರೆ ಮತ್ತು ಸಾಹಿತ್ಯ ವಿಮರ್ಶೆಗಳ ಸಂಗಮವಾಗಿದೆ.

ಸೃಜನಶೀಲ ಕಲಾವಿದನೊಬ್ಬನು ಬದುಕಿನೊಂದಿಗೆ ಮುಖಾಮುಖಿಯಾದಾಗ ಎದುರಿಸಬೇಕಾಗಿರುವ ಹಲವು ಸವಾಲುಗಳನ್ನು, ದ್ವಂದ್ವಗಳನ್ನು ಅಧ್ಯಯನ ಮಾಡಲು ಕೈಲಾಸಂ ಅವರ ಬದುಕು ಮತ್ತು ಬರಹಗಳು ಒಳ್ಳೆಯ ಮಾದರಿಗಳು. ಅವರ ಸಾಂಸಾರಿಕ ಜೀವನದ ಏರುಪೇರುಗಳಿಂದ ಹಿಡಿದು ಅಲೆಮಾರಿ ಬದುಕಿನ ವಿವರಗಳವರೆಗೆ ಎಲ್ಲವನ್ನೂ ಗಮನಿಸಿದಾಗ ಒಂದು ಬಗೆಯ ಪಲಾಯನ ಅವರ ಪ್ರಮುಖ ನೆಲೆಯಾಗಿರುವುದನ್ನು ಗಮನಿಸಬಹುದು. ನಗೆಹನಿಗಳ, ಜಾಣತನದ ಮಾತುಗಳ, ಮಾನವೀಯ ಅಂತಃಕರಣದ ತನ್ನದೇ ಲೋಕವನ್ನು ಹುಟ್ಟಿಸಿಕೊಂಡು ಈ ಲೋಕವನ್ನೇ ಮರೆಯುವ ಈ ಪ್ರತಿಭಾಶಾಲಿಯ ಬದುಕು ಸಾರ್ಥಕವಾದರೂ ವಿಷಾದಮಯ.

ಸರಳ, ಆಕರ್ಷಕ ನಿರೂಪಣಾಧಾಟಿಯನ್ನು ಹೊಂದಿರುವ ಅ. ರಾ. ಮಿತ್ರ ಅವರು, ಈ ಪುಸ್ತಕದ ರಚನೆಯ ತಾರ್ಕಿಕತೆಯ ಕಡೆಗೆ ಇನ್ನಷ್ಟು ಗಮನ ಹರಿಸ ಬಹುದಿತ್ತೆಂದು ತೋರುತ್ತದೆ. ಹೇಳಬಹುದಾದ ವಿಚಾರಗಳನ್ನೆಲ್ಲ ಹೇಳಿರುವರಾದರೂ ಅದು ವ್ಯವಸ್ಥಿತವಾಗಿಲ್ಲ. ತೊಂಬತ್ತಾರು ಪುಟಗಳ ಈ ಪುಸ್ತಕದಲ್ಲಿ ಕೈಲಾಸಂ ಅವರ ಜೀವನ ಪರಿಚಯಕ್ಕೆ ಎಂಟು ಪುಟಗಳನ್ನು ಕೊಡಲಾಗಿದ್ದರೆ, ಅವರು ಜೋಕುಗಳನ್ನು ಮುದ್ರಿಸಲು ಹನ್ನೆರಡು ಪುಟಗಳು ವ್ಯಯವಾಗಿವೆ. ಮೊದಲ ಮತ್ತು ಕೊನೆಯ ಅಧ್ಯಾಯಗಳ ವಸ್ತು ಒಂದೇ ಆಗಿದೆ. 'ಶಬ್ದಶಿಲ್ಪ' ಎನ್ನುವ

ಅಧ್ಯಾಯವು ಕೈಲಾಸಂ ಅವರ ಭಾಷೆಯ ಬಳಕೆ ಮತ್ತು ಅದರ ವಿಫಲತೆಗಳನ್ನು ಅಧ್ಯಯನ ಮಾಡುವ ಬದಲು ಕೇವಲ ಅವರ ಮಾತಿನ ಜಾಣತನವನ್ನು ಸಾಬೀತು ಮಾಡಿಕೊಡುವ ನಿದರ್ಶನಗಳಿಂದ ನಿಬಿಡವಾಗಿದೆ. ಕೈಲಾಸಂ ಅವರ ಕೃತಿಗಳ ಪರಿಚಯವು ಮತ್ತೆ ಕಥಾ ನಿರೂಪಣೆಗೆ ಮೀಸಲಾಗಿದೆ. ಇದೆಲ್ಲವನ್ನೂ ಓದಿದಾಗ ಕೈಲಾಸಂ ಅವರ ಬದುಕಿನ ಚಿತ್ರ ಓದುವವರ ಕಣ್ಣ ಮುಂದೆ ಕಟ್ಟುತ್ತದೆ ಎನ್ನುವುದು ನಿಜ. ಆದರೆ ಕೈಲಾಸಂಗೆ ಇದ್ದ ಜೀವನ ಪರಿಚಯ ಎಂತಹುದು? ಅವರ ನಾಟಕಗಳು ಇಂದು ಜನಪ್ರಿಯವಾಗದಿರಲು ಕಾರಣವೇನು ? ಅವರ ನಾಟಕಗಳ ಪರಂಪರೆಯು ಸಾಮಾನ್ಯ ನಗೆನಾಟಕಗಳಲ್ಲಿ ಮುಕ್ತಾಯವಾಗುವುದೇಕೆ ? ಕೈಲಾಸಂ ಭಾಷೆ ಮತ್ತು ರಂಗ ಕಲ್ಪನೆಗಳ ಸ್ವರೂಪ ಯಾವ ಬಗೆಯದು? ಶ್ರೀರಂಗರಂತಹ ಮಹತ್ವದ ನಾಟಕ ಕಾರರು ಹೇಗೆ ಅವರಿಗಿಂತ ಭಿನ್ನರಾಗುತ್ತಾರೆ ? ಮುಂತಾದ ಪ್ರಶ್ನೆಗಳಿಗೆ ಉತ್ತರ ಹುಡುಕುವ ದಿಕ್ಕಿನಲ್ಲಿ ಈ ಜೀವನ ಚರಿತ್ರಕಾರರು ಪ್ರಯತ್ನಿಸಿದ್ದರೆ, ಅವರ ಬರವಣಿಗೆ ಇನ್ನಷ್ಟು ಮೌಲಿಕವಾಗಬಹುದಿತ್ತೆಂದು ತೋರುತ್ತದೆ. ಈ ಕೆಲಸವು 'ಮನೆ ಗೊಂದು ಮಣಿದೀಪ ಮಾಲೆ'ಯ ಹೊರಗೆ ಆದರೂ ಸಾಧ್ಯವಾಗಬೇಕು.



# ಜೀವನ ಚರಿತ್ರೆ

**ಸುಮತೀಂದ್ರ ನಾಡಿಗ್**

ಈ ವರ್ಷ ಒಂದು ಆತ್ಮಚರಿತ್ರೆ, ಏಳು ಜೀವನಚರಿತ್ರೆಗಳ ಮತ್ತು ಐದು ವ್ಯಕ್ತಿಚಿತ್ರಗಳ ಸಂಕಲನಗಳು ಅವಗಾಹನೆಗೆ ಸಿಕ್ಕಿವೆ. ಇವುಗಳಲ್ಲಿ ಮಲ್ಲಿಕಾರ್ಜುನ ಮನಸೂರರ 'ಆತ್ಮಚರಿತ್ರೆ' ಮತ್ತು ಎಸ್. ಕೃಷ್ಣಮೂರ್ತಿಯವರ 'ಸಂಗೀತ ಕಳಾನಿಧಿ', ಮ. ಸು. ಕೃಷ್ಣಮೂರ್ತಿಯವರ 'ಚಿತ್ತಭಿತ್ತಿಯ ಚಿತ್ರಗಳು' ಸಾಹಿತ್ಯ ಗುಣವನ್ನು ಹೊಂದಿವೆ. ಅಂದರೆ ಇಲ್ಲಿನ ಶೈಲಿಯಲ್ಲಿ ಮನಸ್ಸನ್ನು ಮುಟ್ಟಿ ಅಂತರಂಗವನ್ನು ಪ್ರವೇಶಿಸಿ, ನೆನಪಿನಲ್ಲಿ ನಿಲ್ಲುವ ಗುಣವಿದೆ. ಇವು ಸಾಮಾಜಿಕ ನಡವಳಿಕೆಗಳನ್ನು ಚಿತ್ರಿಸುತ್ತ ಸಾಮಾನ್ಯಮಟ್ಟದಿಂದ ಮೇಲಕ್ಕೇರುವ ಮನುಷ್ಯನ ಅದಮ್ಯಪ್ರವೃತ್ತಿಯನ್ನು ಚಿತ್ರಿಸುತ್ತವೆ. ಈ ಪುಸ್ತಕಗಳಲ್ಲಿನ ವಿವರಗಳು, ನೆನಪುಗಳು, ಸಂದರ್ಭಗಳು ಮತ್ತು ಘಟನೆಗಳನ್ನು ಆಯಾಲೇಖಕರು ತಮ್ಮ ಹೃದಯದಲ್ಲಿದ್ದಿ ತೆಗೆದಹಾಗಿರುವುದರಿಂದ ಇವು ವಿಶೇಷಗಮನಕ್ಕೆ ಅರ್ಹವಾಗಿವೆ.

ನನ್ನ ರಸ ಯಾತ್ರೆ : ಮಲ್ಲಿಕಾರ್ಜುನ ಮನಸೂರ್

ಮಲ್ಲಿಕಾರ್ಜುನ ಮನಸೂರರ ಆತ್ಮಕಥೆ ಸಂಗೀತಗಾರನೊಬ್ಬ ಬೆಳೆದು ಬಂದ ರೀತಿಯನ್ನು ಚಿತ್ರಿಸುತ್ತದೆ. ಸಂಗೀತವನ್ನೇ ಉಸಿರಾಗಿ ಮಾಡಿಕೊಂಡ ಮನಸೂರರ ಈ ಆತ್ಮಕಥೆಯಲ್ಲಿ "ಎನ್ನ ಕಾಯುವ ದಂಡಿಗೆಯ ಮಾಡಯ್ಯ! ಎನ್ನ ಶಿರವ ಸೋರೆಯ ಮಾಡಯ್ಯ! ಎನ್ನ ನರವ ತಂತಿಯ ಮಾಡಯ್ಯ! ಎನ್ನ ಬೆರಳ ಕಡ್ಡಿಯ ಮಾಡಯ್ಯ! ಬತ್ತೀಸರಾಗವ ಹಾಡಯ್ಯ! ಉರದಲೊತ್ತಿ ಬಾರಿಸು ಕೂಡಲ ಸಂಗಮ ದೇವಾ!" ಎನ್ನುವ ಬಸವಣ್ಣನವರ ವಚನ ಎರಡು ಬಾರಿ ಕಾಣಿಸುತ್ತದೆ. ಸಂಗೀತವೇ ತದೇಕಚಿತ್ತವಾದ ಮನಸೂರರಿಗೆ ಅದು ಸಹಜವಾಗಿದೆ. ಅವರ ತಾಯಿ ಚಕ್ಕಡಿಯ ಕೆಳಗೆ ಸತ್ತರೀತಿ, ಮಗನನ್ನ ಅವರು ಎದುರು ಹಾಕಿಕೊಂಡ ಪ್ರಸಂಗ, ಅವರ ತಾಲೀಮು ಮೊದಲಾದ ಸಂಗತಿಗಳು ಮನಸೂರರ ಬರವಣಿಗೆಯನ್ನು ಆತ್ಮೀಯಗೊಳಿಸುತ್ತವೆ. ಸಂಗೀತವನ್ನು ಕಲಿಯುವ ಬಗ್ಗೆ ಮತ್ತು ಕಲಿಸುವ ಬಗ್ಗೆ ಅವರ ಶೈಕ್ಷಣಿಕ ವಿಚಾರಗಳು ಯಾವುದೇ ಕಲೆಯ ಅಭ್ಯಾಸಕ್ಕೂ ಮಾರ್ಗದರ್ಶಕವಾಗಬಹುದು. "ಪರಂಪರೆಯನ್ನರಿಯದೆ ಹೊಸನಿರ್ಮಿತಿಯನ್ನು ಮಾಡತೊಡಗುವುದು, ನಿಲ್ಲಲು ನೆಲೆಯಿಲ್ಲದವನು ನೆಗೆಯಲು ಬಗೆಯುವಂತೆಯೇ,

ಕೇವಲ ಹಾಸ್ಯಾಸ್ಪದ...ಹಾಡುವುದನ್ನು ಕಲಿಸುವ ಮುಂಚೆಯೇ ತತ್ವವಿವೇಚನೆ ಮಾಡಿದರೆ ಹಾಡುವ ವಿದ್ಯಾರ್ಥಿಯ ಪ್ರಗತಿಯು ಕುಂಠಿತವಾಗುತ್ತದೆ. ನೂರು ಕಾಲುಗಳುಳ್ಳ ಒಂದು ಹುಳಕ್ಕೆ ಒಬ್ಬ ಉತ್ಸಾಹಿ ಡ್ರಿಲ್ ಮಾಸ್ತರನು 'ಮಾರ್ಚಿಂಗ್'ದ ನಿಯಮಗಳನ್ನು ವಿವರಿಸಿ ಹೇಳಿದಾಗ ಆ ಹುಳ ಮನಸೂರರ ನಡೆಯುವುದನ್ನು ಬಿಟ್ಟು ನಿಂತಲ್ಲಿಯೇ ನಿಂತುಬಿಟ್ಟಿತಂತೆ!" ಹೀಗೆ ಬರೆಯುವ ಪುಸ್ತಕ ಹೃದ್ಯವಾಗಿದೆ.

ಪುರಂದರದಾಸರು : ಜಿ. ವರದರಾಜರಾವ್

ಈ ಪುಸ್ತಕದಲ್ಲಿ ಶ್ರೀನಿವಾಸನಾಯಕನಾಗಿದ್ದವನು ಪುರಂದರದಾಸರಾದ ವಿವರಗಳನ್ನು ತಿಳಿಸುವುದೇ ಅಲ್ಲದೆ, ಈ ವಿವರಗಳಿಗೆ ಪುಷ್ಟಿಕೊಡುವ ಭಾಗಗಳನ್ನು ಪುರಂದರದಾಸರ ಕೀರ್ತನೆಗಳಿಂದಲೂ ಒದಗಿಸಲಾಗಿದೆ. ದಾಸರು ತಮ್ಮ ಜೀವನ ದುದ್ದಕ್ಕೂ ಹೇಗೆ ವಿಠ್ಠಲನನ್ನು ಸೇವಿಸಿದರು, ಹೇಗೆ ಆಧ್ಯಾತ್ಮದ ದಾರಿಯಲ್ಲಿ ಮುಂದುವರಿಸಿದರು, ಸಾಹಿತ್ಯಕ್ಕೆ ಅವರ ಕೊಡುಗೆ ಎಂಥದು, ಸಂಗೀತದಲ್ಲಿ ಅವರ ಸ್ಥಾನವೇನು ?—ಮೊದಲಾದ ವಿಷಯಗಳ ಪರಿಶೀಲನೆಯೂ ಇಲ್ಲಿದೆ. ಪೂರ್ವ ಕವಿಗಳ ಬಗ್ಗೆ ಚಾರಿತ್ರಿಕ ದಾಖಲೆಗಳು ಸಿಗುವುದು ಅತ್ಯಲ್ಪವೆನ್ನುವುದನ್ನು ತಿಳಿದಿರುವ ಲೇಖಕರು ಸಾಧ್ಯವಾಗುವಷ್ಟು ಆಧಾರಗಳನ್ನಿಟ್ಟುಕೊಂಡು ಈ ಪರಿಚಯಾತ್ಮಕ ಪುಸ್ತಕವನ್ನು ಬರೆದಿದ್ದಾರೆ.

ಹಿರಿಯರ ಗೆರೆಗಳು : ಸಿ.ಪಿ.ಕೆ.

ಮಾಸ್ತಿ, ಕುವೆಂಪು, ಪು.ತಿ.ನ., ತೀ.ನಂ.ಶ್ರೀ., ಡಿ.ಎಲ್.ಎನ್., ದೇಜಗೌ., ಕು. ಶಿ., ಪಿ. ಆರ್. ತಿಪ್ಪೇಸ್ವಾಮಿ, ಎಚ್. ಎಸ್. ಅಚ್ಚಪ್ಪ ಮತ್ತು ರಾಜಕುಮಾರ ಮೊದಲಾದವರ ವ್ಯಕ್ತಿಚಿತ್ರಗಳನ್ನು ಆಂಶಿಕವಾಗಿ ಚಿತ್ರಿಸುವ ಪ್ರಯತ್ನ 'ಹಿರಿಯರ ಗೆರೆಗಳು' ಎನ್ನುವ ಪುಸ್ತಕ. ಈ ರೇಖಾಚಿತ್ರಗಳಲ್ಲಿ ಅಚ್ಚುಕಟ್ಟಾಗಿರುವ ಒಂದೇ ಒಂದು ಚಿತ್ರವೆಂದರೆ ಅಚ್ಚಪ್ಪನವರದು. ಗಾದೆಗಳ ಅಚ್ಚಪ್ಪನವರ ಬಗ್ಗೆ ಬರೆಯುತ್ತ, "ತಾವು ಸಂಪಾದಿಸಿರುವ ಕೃತಿಗಳನ್ನೆಲ್ಲ ತಾವೇ ಪ್ರಕಟಿಸಿಕೊಂಡಿದ್ದಾರೆ ಅಚ್ಚಪ್ಪನವರು. ಈ ಪ್ರಯತ್ನದಲ್ಲಿ ಅವರು ಕೈಸುಟ್ಟುಕೊಂಡಿರಬಹುದೇ ಹೊರತು ಲಾಭವನ್ನೇನೂ ಮಾಡಿಕೊಂಡಿಲ್ಲ...ರಾಜ್ಯಸರ್ಕಾರ ಅಚ್ಚಪ್ಪನವರಿಗೆ ಒಂದುನೂರು ರೂ. ಗಳ ಮಾಸಾಸನ ನೀಡುತ್ತಿದೆ...ಹೇಗೋ ಅಹನ್ಯಹನಿ ಜೀವನ ನಡೆಸಿದ್ದಾರೆ ಅಚ್ಚಪ್ಪ ನವರು...ವ್ಯವಹಾರ ಪ್ರಪಂಚಕ್ಕೆ ಹೇಳಿಸಿದವರಲ್ಲ ಅಚ್ಚಪ್ಪನವರು...ಎಲ್ಲ ಕಡೆಯಿಂದಲೂ ಅವರಿಗೆ ಸಹಾನುಭೂತಿ ಧಾರಾಳವಾಗಿ ಸಿಕ್ಕಿದೆ. ಆದರೆ ಅಷ್ಟೇ ಸಾಕೆ? ಎಂದು ಸಿ.ಪಿ.ಕೆ. ಕೇಳುತ್ತಾರೆ. ಇಲ್ಲಿ ಕಾಣುವ ಆತ್ಮೀಯತೆ ಮಿಕ್ಕ ಚಿತ್ರಗಳಲ್ಲಿ

ಇಲ್ಲ. ಆದ್ದರಿಂದ ಗೆರೆಗಳು ಮಿಕ್ಕ ಹಿರಿಯರ ಚಿತ್ರಗಳನ್ನು ಮೂಡಿಸುವುದರಲ್ಲಿ ಯಶಸ್ವಿಯಾಗಿಲ್ಲ.

ಆಲೂರ ವೆಂಕಟರಾಯರು : ಸಂ. ಹಾ. ಮಾ. ನಾಯಕ

'ಕರ್ನಾಟಕದ ಕುಲಪುರೋಹಿತ'ರೆಂದು ಹೆಸರಾದವರನ್ನು ಪರಿಚಯ ಮಾಡಿ ಕೊಡುತ್ತದೆ 'ಆಲೂರ ವೆಂಕಟರಾಯರು' ಎಂಬ ಪುಸ್ತಕ. ಆಲೂರ ವೆಂಕಟರಾಯರ ಜೀವನ, ವ್ಯಕ್ತಿತ್ವ ಹಾಗೂ ಸಾರ್ವಜನಿಕ ಸೇವೆಯನ್ನು ಕುರಿತು ವರದರಾಜ ಹುಯಿಲ ಗೋಳರು ಬರೆದಿದ್ದಾರೆ. ಕನ್ನಡ ಕರ್ನಾಟಕವನ್ನು ಕುರಿತ ಆಲೂರರ ವಿಚಾರಗಳ ಬಗ್ಗೆ ಎಂ. ಚಿದಾನಂದಮೂರ್ತಿ ಅವರು ಬರೆದಿದ್ದಾರೆ. ಕನ್ನಡ ಕಾವ್ಯಗಳನ್ನು ಸಾಹಿತ್ಯವಾಗಿ ನೋಡುವಲ್ಲಿ ಅಂತಹ ಅಭಿರುಚಿಯೇನ್ನೇನೂ ಆಲೂರರು ತೋರಿಸಲಿಲ್ಲ ವೆಂದು ಹೇಳುವ ಮೂರ್ತಿಯವರು "ಆಲೂರರಿಂದ ಕನ್ನಡಿಗ ಸ್ಫೂರ್ತಿಪಡೆಯುವುದು ಸಾಕಷ್ಟಿದೆ." ಎಂದು ಹೇಳಿ "ನಾನು ಮೊದಲು ಭಾರತೀಯನು, ಅನಂತರ ಕನ್ನಡಿಗನು ಎಂಬುದು ಸರಿಯಲ್ಲ. ಇವುಗಳಲ್ಲಿ ಮೊದಲು ಹಿಂದುಗಡೆಗಳಿಲ್ಲ ಎರಡೂ ಭಾವನೆಗಳು ಪರಸ್ಪರ ವಿರುದ್ಧವಾದುವಲ್ಲ" ಎನ್ನುವ "ಆಲೂರರ ಮಾತುಗಳು ನಮ್ಮೆಲ್ಲರ ಬದುಕಿನ ದಾರಿದೀಪವಾಗಲಿ" ಎಂದು ಆಶಿಸುತ್ತಾರೆ. ಈ ಲೇಖನಕ್ಕೆ ಹೊಂದಿರುವ ಅನುಬಂಧದಲ್ಲಿ ಕನ್ನಡಿಗರ ಕೀಳರಿಮೆ ಯಾವಾಗ ಆರಂಭ ವಾಯಿತೆಂದು ಮೂರ್ತಿಯವರು ಗುರುತಿಸಿದ್ದಾರೆ. ಭಗವದ್ಗೀತೆಯನ್ನು ಕುರಿತು ಆಲೂರರ ಸಾಹಿತ್ಯ ಲೇಖನದಲ್ಲಿ ಕೃಷ್ಣಮೂರ್ತಿಯವರು ಆಲೂರರ "ಭಾವಹಿರಿದು ಭಾಷೆಯೂ ಹಿರಿದು, ವಿಚಾರ ಹೊಸದು" ಎನ್ನುವುದಕ್ಕೆ, ಉದಾಹರಣೆಯನ್ನು ಕೊಡುತ್ತಾರೆ. ಜಿ. ವರದರಾಜರಾವ್ ಬರೆದ ದ್ವೈತ ಸಾಹಿತ್ಯ ವಿವೇಚನೆ ಎನ್ನುವ ಲೇಖನದಲ್ಲಿ ಆಲೂರರ "ವ್ಯಾಸಂಗ ವಿಭಾಗದಲ್ಲಿ ಪರಂಪರಾಗತ ನಿಷ್ಠೆ ಮತ್ತು ವಿನೂತನ ಕೃಷಿಗಳೆರಡೂ ಹದವಾಗಿ ಹೊಂದಿಕೊಂಡು" ಬಂದಿರುವುದನ್ನು ತೋರಿಸಿ ದ್ದಾರೆ. ಕೆ. ಎಸ್. ದೇಶಪಾಂಡೆಯವರು ಪತ್ರಿಕೋದ್ಯಮಿ ಆಲೂರರನ್ನು ಚಿತ್ರಿಸುತ್ತ ಹೇಗೆ ಆಲೂರರು ಸ್ವದೇಶಾಭಿಮಾನವನ್ನು ಉಕ್ಕಿಸಲು ಕಷ್ಟಪಟ್ಟರು ಎನ್ನುವುದನ್ನು ತೋರಿಸಿದ್ದಾರೆ. ಕನ್ನಡದ ಅನೇಕ ಲೇಖಕರನ್ನು ಮೊದಲು ಪ್ರಕಟಿಸಿದ ಆಲೂರರು ಹೇಗೆ "ಪತ್ರಿಕಾ ಪ್ರಪಂಚದ ಪಿತಾಮಹರಾಗದಿದ್ದರೂ ಆದರ ಮಹಾಸಾಧಕ"ರಾದರು ಎನ್ನುವುದನ್ನು ದೇಶಪಾಂಡೆಯವರು ಸ್ಪಷ್ಟಪಡಿಸುತ್ತಾರೆ. ಆಲೂರರನ್ನು ಕುರಿತ ಈ ಪುಸ್ತಕ ತುಂಬ ಉಪಯುಕ್ತವಾಗಿದೆ.

ಕನಕದಾಸ ಜೀವನ ವಿಚಾರ : ಜ್ಯೋತಿ ಹೊಸೂರ

'ಕನಕದಾಸ ಜೀವನ ವಿಚಾರ'ದಲ್ಲಿ ಜ್ಯೋತಿಹೊಸೂರರು ಕನಕದಾಸರ ಕೃತಿಗಳ ತಾತ್ಪರ್ಯಗಳನ್ನು ಕೊಟ್ಟು ಪರಿಚಯ ಮಾಡಿಕೊಡುತ್ತಾರೆ. ಕನಕದಾಸರ ಬದುಕಿನ

ಬಗ್ಗೆ ಅನೇಕ ವಿವರಗಳನ್ನು ಕೊಡುತ್ತ, ಆತ ಯುದ್ಧವಿದ್ಯೆಯನ್ನು ಕಲಿತಿದ್ದ, ಸಾಹಿತ್ಯಸಂಗೀತ ಶಾಸ್ತ್ರಪುರಾಣಗಳನ್ನು ಅಭ್ಯಾಸಮಾಡಿದ್ದ, ಒಬ್ಬ ಸುಂದರ ತರುಣಿಯನ್ನು ಮದುವೆಯಾಗಿದ್ದ, ಅವನಿಗೆ ಹದಿನಾರು ಹದಿನೇಳನೆ ವಯಸ್ಸಿನಲ್ಲಿ ತಂದೆ ತೀರಿಹೋಗಿ, ಮದುವೆಯಾದ ಎಂಟು ಹತ್ತು ವರ್ಷದೊಳಗೆ ತಾಯಿಯೂ ತೀರಿಹೋದಳು. ಅವನ ಮಗನೊಬ್ಬ ಸತ್ತು, ಹೆಂಡತಿಯೂ ಸತ್ತಮೇಲೆ ದಣ್ಣಾಯಕನಾಗಿದ್ದ ಕನಕಪ್ಪನಾಯಕ, ಯುದ್ಧದಲ್ಲಿ ಗಾಯಗೊಂಡು, ಗುಣಮುಖನಾಗುತ್ತಿದ್ದಂತೆಯೇ ಹರಿಭಕ್ತನಾದ ಎನ್ನುವ ವಿವರಗಳನ್ನು ನಾವು ತಿಳಿಯುತ್ತೇವೆ. ಕನಕನ ಊರು ಮತ್ತು ಜಾತಿಯ ಬಗ್ಗೆ ದೀರ್ಘವಾದ ಚರ್ಚೆಯಿದೆ. ಸ್ವತಂತ್ರ ವ್ಯಕ್ತಿತ್ವವುಳ್ಳ ಜೀವಿಯೊಂದು ಪರಂಪರೆಯ ಕಟ್ಟಿನಲ್ಲಿ ಸಿಕ್ಕಿಕೊಂಡಾಗ ಎಷ್ಟೊಂದು ಬಗೆಯಲ್ಲಿ ಚಡಪಡಿಸಬೇಕಾಗುತ್ತದೆನ್ನುವುದನ್ನು ಜ್ಯೋತಿ ಹೊಸೂರರು ಚಿತ್ರಿಸಿದ್ದಾರೆ. ದಲಿತಪ್ರಜ್ಞೆ ಮತ್ತು ಬಂಡಾಯ ಪ್ರವೃತ್ತಿಗಳು ಅವರನ್ನು ಈ ವಿಚಾರಕ್ಕೀಡು ಮಾಡಿದವು ಎಂದು ಮುನ್ನುಡಿಯಲ್ಲಿ ಹೇಳಿದ್ದಾರೆ.

ಸೃಜನಶೀಲರು : ಎನ್. ಮರಿಶಾಮಾಚಾರ್

ನಂದಲಾಲಬೋಸ್, ಜಾಮಿನಿರಾಯ್, ಅಮೃತಾ ಶೇರ್‌ಗಿಲ್, ರಾಮಕಿಂಕರ ಬೈಜ್, ಬಿನೋದ ಬಿಹಾರಿ ಮುಖರ್ಜಿ, ಎನ್. ಎಸ್. ಬೇಂದ್ರೆ, ಕೆ. ಸಿ. ಎಸ್. ಪಣಿಕರ್, ಎಂ. ಎಫ್. ಹುಸೇನ್ ಮತ್ತು ಕೆ. ಜಿ. ಸುಬ್ರಮಣ್ಯನ್–ಈ ಕಲಾವಿದರನ್ನು ಕನ್ನಡಿಗರಿಗೆ ಪರಿಚಯ ಮಾಡಿಕೊಡುವ ಪುಸ್ತಕ 'ಸೃಜನಶೀಲರು.' ಸ್ವತಃ ಕಲಾವಿದರಾದ ಮರಿಶಾಮಾಚಾರ್ ಬರೆದ ಈ ಪುಸ್ತಕದಲ್ಲಿ ಬೋಸ್, ಮುಖರ್ಜಿ' ಬೇಂದ್ರೆ, ಪಣಿಕರ್ ಮತ್ತು ಹುಸೇನರ ಚಿತ್ರಗಳ ಛಾಯಾಚಿತ್ರಗಳಿವೆ ಮತ್ತು ಆಯಾಕಲಾವಿದರ ಜೀವನದ ಹೊರರೇಖೆಗಳಿವೆ. ಈ ಕಲಾವಿದರನ್ನು ವ್ಯಕ್ತಿಗಳಾಗಿ ಪರಿಚಯಿಸುವುದಕ್ಕಿಂತ ಹೆಚ್ಚಾಗಿ ಮರಿಶಾಮಾಚಾರರ ದೃಷ್ಟಿ ಅವರ ಕಲಾಕೃತಿಗಳನ್ನು ಪರಿಚಯಿಸುವುದರ ಕಡೆಗೆ ತಿರುಗಿದೆ. ಕಲೆ ಮತ್ತು ಕಲಾವಿದರ ಬಗ್ಗೆ ಕನ್ನಡಿಗರ ತಿಳುವಳಿಕೆಯನ್ನು ಹೆಚ್ಚಿಸುವುದರಲ್ಲಿ ಇಂಥ ಪುಸ್ತಕಗಳ ಪಾತ್ರ ಮಹತ್ವದ್ದಾಗಿದೆ.

ಇಂದಿನ ಶಿವಶರಣೆಯರು : ಶಿವಲ್ಲಿಂಗಮ್ಮ ಕಟ್ಟಿ

ವೀರಶೈವ ಧರ್ಮದಲ್ಲಿ ನಂಬಿಕೆಯನ್ನು ದೃಢಪಡಿಸುವ, ಆಧುನಿಕ ಕಾಲದ ಎಂಟು ಶರಣೆಯರ ಜೀವನಚರಿತ್ರೆಗಳನ್ನು ಶಿವಲಿಂಗಮ್ಮ ಕಟ್ಟಿಯವರು ಬರೆದಿದ್ದಾರೆ. ಆನೆಯನ್ನು ನೋಡಬಯಸಿ, ನೋಡಿದಾಗ ಆಶ್ಚರ್ಯಪಟ್ಟು, ನೋಡಬಯಸಿದ್ದಕ್ಕೆ ಪ್ರಾಯಶ್ಚಿತ್ತಮಾಡಿಕೊಂಡ ಸಜ್ಜಲಗುಡ್ಡದ ಶರಣಮ್ಮ ;ಲಿಂಗಕಟ್ಟಿಕೊಳ್ಳದ, ಹಸಿದ ಲಿಂಗಯ್ಯನನ್ನು ಊಟಪ್ರಾರಂಭವಾದಮೇಲೆ ಎಬ್ಬಿಸಿ ಹೊರಗೆ ಕಳಿಸಿದ ಸೊನ್ನಲಿಗೆಯ ಶಿವಶರಣೆ ರುದ್ರಮ್ಮ ; ರೈಲಿನಲ್ಲಿ ಪ್ರಥಮ ಪ್ರಯಾಣಮಾಡುವಾಗ ಆಶ್ಚರ್ಯದಿಂದ

ಜೋತೆಯುವರಿಗೆ ಪ್ರಯಾಣವನ್ನೇ ಒಂದು ಉಪಮಾನವಾಗಿ ಉಪಯೋಗಿಸಿ ಶಿವಾನುಭವವನ್ನು ಹೇಳಿದ ಕುಬಸದ ಕಾಯಕದ ಸತ್ಯಶರಣೆ ಸಿದ್ದಮ್ಮ; ದಾನ ಮಾಡಿದ್ದನ್ನು ಕಂಡು ರೇಗಿದ ಸೊಸೆಗೆ ಪಾಠಕಲಿಸುವುದಕ್ಕಾಗಿ ಜೋಳವನ್ನು ಒಂದಕ್ಕೆ ನೂರರಷ್ಟಾಗಿ ಹೆಚ್ಚಿಸಿ ತನ್ನ ಪವಾಡದಿಂದ ಸೊಸೆಗೆ ಪಾಠಕಲಿಸಿದ ಶರಣೆ ಉಮಂದಿ ಗದಿಗೆಮ್ಮ; ವರದಕ್ಷಿಣೆಯನ್ನು ಒಪ್ಪಿಸಲಾಗದಿದ್ದಕ್ಕೆ ಹಿಂಸೆಗೊಳಗಾಗಿ ಆತ್ಮಹತ್ಯೆ ಮಾಡಿಕೊಳ್ಳಲಿಕ್ಕೆ ಹೊರಟ ಶರಣೆ ಗೌರಾಂಬೆ; ಹಾನಗಲ್ಲ, ಕುಮಾರಸ್ವಾಮಿಗಳ ಮಂಟಪ ಕಟ್ಟುವುದಕ್ಕಾಗಿ ಅಕ್ಷಯದ ಹಣದ ಚೀಲವನ್ನು ಕೊಟ್ಟವಳು ಮತ್ತು ಸಾಯುವಾಗ ಹಂಬ್ಬಿನನಡುವೆ ದೊಡ್ಡಗುಮ್ಮಟೆ ಎದ್ದು ಒಡೆದು ಸತ್ತ ಶರಣೆ ಬಾಗೀರಥೆಮ್ಮ; ಬರಗಾಲದಲ್ಲಿ ಮಾರಾಟವಾಗುತ್ತಿದ್ದ ಇಬ್ಬರು ಹುಡುಗಿಯರನ್ನು ಕಾಪಾಡಿ ತನ್ನ ಸೊಸೆಯಾಗಿ ಮಾಡಿಕೊಂಡ ಶರಣೆ ಚನ್ನಬಸಮ್ಮ; ಮಹಾಲಕ್ಷ್ಮಿಯನ್ನು ಕಣ್ಣಾರೆ ನೋಡಿದ ಶರಣೆ ಚಂದ್ರಮ್ಮ—ಹೀಗೆ ಎಂಟು ಶರಣೆಯರನ್ನು ಶಿವಲಿಂಗಮ್ಮ ಕಟ್ಟಿಯವರು ಪರಿಚಯಮಾಡಿಕೊಡುತ್ತ, ಅವರ ಸಾಂಸಾರಿಕ ತಾಪತ್ರಯಗಳನ್ನು, ಆಧ್ಯಾತ್ಮಿಕ ಅನುಭವಗಳನ್ನು ಮತ್ತು ಪವಾಡಗಳನ್ನೂ ಚಿತ್ರಿಸುತ್ತಾರೆ. ಅನ್ಯಧರ್ಮೀಯರಿಗೂ ಕುತೂಹಲವನ್ನು ಹುಟ್ಟಿಸುವ ಈ ಚಿತ್ರಗಳು ಆತ್ಮೀಯವಾಗಿವೆ.

ಪುರಾಣಿಕ ಬುದ್ಧಯ್ಯನವರು: ಡಾ. ಬಿ. ವ್ಹಿ. ಮಲ್ಲಾಪುರ; ಎಂ. ಆರ್. ಸಾಖರೆಯವರು: ಡಾ. ಎಂ. ಎಸ್. ಸುಂಕಾಪುರ; ಕಂಬಿ ಸಿದ್ಧರಾಮಣ್ಣನವರು; ಹೀ. ಚಿ. ಶಾಂತವೀರಯ್ಯ; ಶಿರೂರ ವೀರಭದ್ರಪ್ಪನವರು; ಡಾ. ಸೂರ್ಯನಾಥ್ ಕಾಮತ್.

ತೋಂಟದಾರ್ಯ ಮಠದ ವೀರಶೈವ ಅಧ್ಯಯನ ಸಂಸ್ಥೆಯವರು ಈ ವರ್ಷ ನಾಲ್ಕು ಪುಸ್ತಿಕೆಗಳನ್ನು ಪ್ರಕಟಿಸಿದ್ದಾರೆ. ವೀರಶೈವ ಪುಣ್ಯಪುರುಷ ಮಾಲೆಯಲ್ಲಿ ಬಂದಿರುವ ಈ ಪುಸ್ತಕಗಳು ಪುರಾಣಿಕ ಬುದ್ಧಯ್ಯನವರು, ಎಂ. ಆರ್. ಸಾಖರೆ, ಕಂಬಿ ಸಿದ್ಧರಾಮಣ್ಣನವರು ಮತ್ತು ಶಿರೂರ ವೀರಭದ್ರಪ್ಪನವರ ಬದುಕನ್ನು ಮತ್ತು ಅವರ ಸಾಧನೆಯನ್ನು ಚಿತ್ರಿಸುತ್ತವೆ. ಪುರಾಣಿಕ ಬುದ್ಧಯ್ಯ ಕರ್ತವ್ಯನಿಷ್ಠೆ, ಕಾರ್ಯತತ್ಪರತೆ, ಪ್ರಾಮಾಣಿಕತೆ ಮತ್ತು ಸಚ್ಚಾರಿತ್ರಗಳಿಗೆ ಪ್ರಸಿದ್ಧರಾಗಿದ್ದರು. ವೀರಶೈವ ಸಾಹಿತ್ಯದಲ್ಲಿನ ಅನೇಕ ಗ್ರಂಥಗಳನ್ನು ಪರಿಶೀಲಿಸಿ ಪ್ರಕಟಿಸಿದರು. ಅವರು ಅನೇಕ ಸಂಘಸಂಸ್ಥೆಗಳನ್ನು ಕಟ್ಟುವುದರಲ್ಲಿ ಪಾತ್ರವಹಿಸಿದವರು ಎನ್ನುವುದು ನಮಗೆ ತಿಳಿದು ಬರುತ್ತದೆ. ಇದಕ್ಕಿಂತ ಹೆಚ್ಚು ಆಕರ್ಷಕವಾದ ವ್ಯಕ್ತಿತ್ವ ಎಂ. ಆರ್. ಸಾಖರೆಯವರದು. ಇವರು ತಮ್ಮ ವಿದ್ಯಾರ್ಥಿವೇತನದ ಹಣವನ್ನು ಉಳಿಸಿ ತಾಯಿಗೆ ಸೀರೆತಂದದ್ದು; ವಿದ್ಯಾರ್ಥಿದೆಸೆಯಲ್ಲಿ ಒಮ್ಮೆ ಮೈಲಿಗಟ್ಟಲೆ ನಡೆದು ಹೋಗುವಾಗ

ಹಸಿವಾಗಿ ಎರಡು ನೇರಲಹಣ್ಣು ತಿಂದು ನೀರು ಕುಡಿದು, ನಡೆಯುವಾಗ ಮೆಟ್ಟುಗಳ ಉಂಗುಟ ಕಿತ್ತುಹೋಗಿ ಕೆರಗಳನ್ನು ಕೈಯಲ್ಲಿ ಹಿಡಿದು ಹೋದದ್ದು; ತಮ್ಮ ಸ್ನೇಹಿತರ ಜೊತೆ ಸೇರಿ ಆ್ಯಂಗ್ಲೋ ವರ್ನಾಕ್ಯುಲರ್ ಸ್ಕೂಲನ್ನು ಪ್ರಾರಂಭಿಸಿದಾಗ, ಕಡಿಮೆ ವಿದ್ಯಾರ್ಥಿಗಳಿದ್ದ ಆ ಶಾಲೆಯು ಹುಡುಗರಿಂದ ಬಂದ ಫೀಸನ್ನು ಇನ್ನೂ ನಾಲ್ಕು ಜನರ ಜೊತೆಗೆ ಹಂಚಿಕೊಂಡದ್ದು; ತಮ್ಮ ಉಪಜಾತಿ ಬೇರೆಯಾದ ಕಾರಣವೂ ಸೇರಿ ನಂದೀಮಠರ ಜೊತೆಗೆ ವಿರಸವನ್ನು ಕಟ್ಟಿಕೊಂಡದ್ದು – ಹೀಗೆ ಮಾನವೀಯ ವಿವರಗಳ ಮೂಲಕ, ಈ ವ್ಯಕ್ತಿ ಚಿತ್ರ ಆತ್ಮೀಯವಾಗಿ ಕಾಣುತ್ತದೆ. ದಾನಶೂರ ಕಂಬಿ ಸಿದ್ಧರಾಮಣ್ಣನವರು ಪುಸ್ತಕಗಳನ್ನು ಕೊಂಡು ಓದಿ ಬೇರೆಯವರಿಗೆ ಅವುಗಳನ್ನು ಕೊಟ್ಟು ಬಿಡುತ್ತಿದ್ದರು; ಮನೆಯನ್ನು ಧರ್ಮಛತ್ರದ ಹಾಗೆ ನಡೆಸಿದವರು; ವಿದ್ಯಾರ್ಥಿನಿಲಯ ಮತ್ತು ಸಂಸ್ಕೃತ ಪಾಠಶಾಲೆಗಳನ್ನು ಸ್ಥಾಪಿಸಿದವರು ಎಂದುತಿಳಿದು ಬರುತ್ತದೆ. ಇದಕ್ಕಿಂತ ಹೆಚ್ಚು ಆಕರ್ಷಕವಾದದ್ದು ಶಿರೂರ ವಿರಭದ್ರಪ್ಪನವರ ವ್ಯಕ್ತಿ ಚಿತ್ರ. ಹೈದರಾಬಾದ್ ಕರ್ನಾಟಕದ ಈ ಸ್ವಾತಂತ್ರ್ಯವೀರ, ಅಸ್ಪೃಶ್ಯತಾ ನಿವಾರಣೆಗಾಗಿ ಶ್ರಮಿಸಿದವರು; ಮಹಾತ್ಮಗಾಂಧಿಯನ್ನು ನೋಡುವುದಕ್ಕಾಗಿ ಭಾನಾಪುರದಲ್ಲಿ ಹತ್ತುಸಾವಿರ ಜನರನ್ನು ಉರಿಬಿಸಿಲಿನಲ್ಲಿ ಸೇರಿಸಿ, ಮಹಾತ್ಮರಿಗೆ ನಿಧಿಯನ್ನು ಅರ್ಪಿಸಿದವರು; ಹರಿಜನರನ್ನು ಮತ್ತು ರೈತರನ್ನು ಸಂಘಟಿಸಿದವರು; ವೀರಶೈವ ವಿದ್ಯಾವರ್ಧಕ ಸಂಸ್ಥೆಯನ್ನು ಸ್ಥಾಪಿಸಿದವರು; ಬೇನೆಯಿಂದ ಹೆಂಡತಿ ಬಳಲುತ್ತಿದ್ದಾಗ, ಆಕೆಯ ಸಮ್ಮತಿಯನ್ನು ಪಡೆದು ಸತ್ಯಾಗ್ರಹ ನಡೆಸಿ ಬಂಧಿತರಾದವರು; ಒಂದು ಬಿಳಿಯ ಹೋರಿಕರು ಬೇನೆಯಿಂದ ಸತ್ತಾಗ ದುಃಖಿಸಿದವರು; ವಿಧಾನಸಭಾ ಸದಸ್ಯರಾಗಿದ್ದವರು; ತನ್ನ ಗೆಳೆಯನೊಬ್ಬನ ಕೊಲೆಯಾದಾಗ, ಕೊಲೆಗಾರನನ್ನು ಹಿಡಿಸುವುದಕ್ಕಾಗಿ ಆರ್ಥಿಕ ಹಾನಿಗೆ ಒಳಗಾದವರು; ಎಂ. ಎನ್. ರಾಯ್ ಅವರ ಬರಹಗಳನ್ನು ಓದಿದ್ದವರು, ಸಕ್ಕರೆರೋಗದಿಂದ ಕಾಲು ಬಾತಿದ್ದಾಗಲೂ ಸಾರ್ವಜನಿಕ ಕಾರ್ಯಕ್ಕಾಗಿ ಊರೂರು ಸುತ್ತಿದ್ದವರು; ಮಕ್ಕಳಿಗೆ ಸಾವಿರಾರು ರೂಪಾಯಿಗಳ ಸಾಲವನ್ನು ಬಿಟ್ಟುಹೋದವರು ಶಿರೂರ ವೀರಭದ್ರಪ್ಪನವರು. ಇಂತಹ ವ್ಯಕ್ತಿಚಿತ್ರಗಳನ್ನು ಬರೆಸಿ ಪ್ರಕಟಿಸುತ್ತಿರುವ ವೀರಶೈವ ಅಧ್ಯಯನ ಸಂಸ್ಥೆಯವರು ಅಭಿನಂದನಾರ್ಹರು.

ಚಿತ್ತ ಭಿತ್ತಿಯ ಚಿತ್ರಗಳು : ಮ. ಸು. ಕೃಷ್ಣಮೂರ್ತಿ

ಮ. ಸು. ಕೃಷ್ಣಮೂರ್ತಿಯವರ 'ಚಿತ್ತಭಿತ್ತಿಯ ಚಿತ್ರಗಳು' ಎನ್ನುವುದು ಹೆಸರೇ ಸೂಚಿಸುವಂತೆ ನೆನಪಿನ ಚಿತ್ರಗಳ ಮಾಲೆ. ಹೇಮಾವತಿ ತೀರದ ಒಂದು ಹಳ್ಳಿಯಾದ ಮುಂದಗೆರೆಯಲ್ಲಿ ತಮ್ಮ ಬಾಲ್ಯದಲ್ಲಿ ಕಂಡ ಒಂಭತ್ತು ವ್ಯಕ್ತಿಗಳು ತಮ್ಮ ಮನಸ್ಸಿನಲ್ಲಿ ಹೇಗೆ ಮೂಡಿದ್ದಾರೆನ್ನುವುದನ್ನು ಇಲ್ಲಿ ತೋರಿಸುತ್ತಾರೆ. ಜಡೆ ಹೆಣೆಯುವುದರಲ್ಲಿ ಪ್ರಸಿದ್ಧಳಾದ ತಿಮ್ಮಿಯ ಹತ್ತಿರ ಊರಮಾರಮ್ಮ ಜಡೆಹೆಣಿಸಿ

ಕೊಂಡದ್ದು; ಅರವತ್ತು ವಯಸ್ಸಾದಾಗಲೂ ಮಕ್ಕಳಜೊತೆಗೆ ಚಿಣ್ಣಿ ಕೋಲು ಆಡುತ್ತಿದ್ದ ಮಾದಯ್ಯ; ಯುವರಾಯನ ಬಗ್ಗೆಯೂ ಕನಿಕರ ತೋರಿಸುತ್ತಿದ್ದ ಅತ್ತಿಗೆ; ದೆವ್ವವೊಂದಕ್ಕೆ ಹೆರಿಗೆ ಮಾಡಿಸಿದ ಸಂಜತ್ತೆ; ಹಿಂದೂಧರ್ಮದ ಬಗ್ಗೆ ಹಿಂದೂಗಳ ಅಜ್ಞಾನವನ್ನು ಎತ್ತಿತೋರಿಸುತ್ತಿದ್ದ ಮುಸ್ತಾನ್; ಊರಿನಲ್ಲೊಬ್ಬ ಮೆತ್ತನೆಯ ವ್ಯಕ್ತಿಯ ಪರವಾಗಿ ಕೋರ್ಟಿಗೆ ಅಲೆದಾಡಿ, ತನ್ನ ಹೆಸರಿಗೆ ಬರೆದು ಕೊಟ್ಟ ಜಮೀನನ್ನು ಹಾಗೆಯೇ ಬಿಟ್ಟುಕೊಟ್ಟ ತಿಪ್ಪಣ್ಣ; ಮೊಸಳೆಯನ್ನು ಕೊಂದ ದೊಡ್ಡಹೈದ; ಸಿಂಘಣ್ಣ ಭಟ್ಟ ದೋಣ್ಣೆಯಾದ ಕತೆಯನ್ನು ಹೇಳಿದ ಮಹಮದ್ ಸಾಹೇಬರು ಮತ್ತು ಹೆಣವನ್ನು ಸುಡುವುದಕ್ಕಿಂತ ಹೂಳುವುದೇ ವಾಸಿಯೆಂದು ವಾದಿಸಿದ ಭದ್ರಕಾಳಿ – ಇವೇ ಆ ಚಿತ್ರಗಳು. ಈ ಚಿತ್ರಗಳು ಮನಸ್ಸಿನಲ್ಲಿ ನಿಲ್ಲುವ ಹಾಗಿರುವುದೇ ಇವುಗಳ ವಿಶೇಷ. ಈ ಪುಸ್ತಕ ಮ., ಸು. ಕೃಷ್ಣಮೂರ್ತಿಯವರ ಭಾವಲೋಕಕ್ಕೆ ನಮ್ಮನ್ನು ಕರೆದೊಯ್ಯುತ್ತದೆ.

## ಸಂಗೀತ ಕಳಾನಿಧಿ : ಎಸ್. ಕೃಷ್ಣಮೂರ್ತಿ

'ಸಂಗೀತ ಕಳಾನಿಧಿ' ಎನ್ನುವ ಪುಸ್ತಕದಲ್ಲಿ ಮೂವರು ಪ್ರಸಿದ್ಧ ಸಂಗೀತಗಾರರ ಜೀವನ ಚಿತ್ರಗಳಿವೆ. ವಾಸುದೇವಾಚಾರ್ಯರ ಮೊಮ್ಮಗ ಎಸ್. ಕೃಷ್ಣಮೂರ್ತಿಯವರು ತಮ್ಮ ತಾತಂದಿರಬಗ್ಗೆ, ಟಿ ಚೌಡಯ್ಯ ಮತ್ತು ರಾಳ್ಳಪಲ್ಲಿ ಅನಂತಕೃಷ್ಣ ಶರ್ಮರ ಬಗ್ಗೆ ಮಾಹಿತಿಗಳನ್ನು ಸಂಗ್ರಹಿಸಿ, ಅವರನ್ನು ತಾವು ಕಂಡಷ್ಟು ಆತ್ಮೀಯತೆ ಯಿಂದ ಅವರ ಬದುಕಿನ ಏರಿಳಿವುಗಳನ್ನು, ಅವರ ಬದುಕಿನ ಸಂದರ್ಭಗಳನ್ನು ಮತ್ತು ಘಟನೆಗಳನ್ನು, ಅವರವರ ವಿದ್ವತ್ತಿನ ಮತ್ತು ಸಾಧನೆಯ ವಿವರಗಳನ್ನು ಪರಿಚಯ ಮಾಡಿಕೊಟ್ಟಿದ್ದಾರೆ. ಎಸ್. ಕೃಷ್ಣಮೂರ್ತಿಯವರು ಜೀವನ ಚರಿತ್ರೆಯನ್ನು ಬರೆದಿದ್ದಾರೆ, ಜೀವನ ಚಿತ್ರಗಳನ್ನು ಕೊಟ್ಟಿದ್ದಾರೆ ಮತ್ತು ಜೀವನದರ್ಶನಗಳನ್ನೂ ಕೊಟ್ಟಿದ್ದಾರೆ. ಚೌಡಯ್ಯನವರ ಜೀವನಕತೆಯಲ್ಲಿ ಒಂದು ಘಟನೆ ಹೀಗಿದೆ: 'ಆ ವರ್ಷ ಬಂದಿದ್ದ ವಿದ್ವಾಂಸರಲ್ಲಿ ಆಲಂಗುಡಿ ರಾಮಚಂದ್ರನ್ ಅವರೂ ಒಬ್ಬರು. ಘಟವಾದ್ಯ ನುಡಿಸುವುದರಲ್ಲಿ ಹೆಸರು ಪಡೆದಿದ್ದವರು. ಆದರೆ ದುರದೃಷ್ಟವಶಾತ್ ಅವರ ಮನೋಭಿಲಾಷೆಗೆ ಅರಮನೆಯ ಸಂಪ್ರದಾಯ ಅಡ್ಡ ಬಂದಿತು. "ಪ್ರಭುಗಳ ಮುಂದೆ ಕುಳಿತು ಕಛೇರಿ ಮಾಡುವಾಗ ಕೋಟುಪೇಟಗಳನ್ನು ಬಿಚ್ಚಿ, ಷರಟು ತೆಗೆದು, ಹೊಟ್ಟೆ ಬಿಟ್ಟುಕೊಂಡು ಘಟನುಡಿಸುವುದೆಂದರೇನು ? ಸಾಧ್ಯವಿಲ್ಲ" ಎಂದರು ಅರಮನೆಯ ದರ್ಬಾರು ಭಕ್ಷಿಯವರು.' ಈ ನಿರೂಪಣೆಯಲ್ಲಿ ಅರಮನೆಯ ವೇಷ ಭೂಷಣಗಳು ಕಣ್ಣಿಗೆ ಕಟ್ಟುವ ಹಾಗೆ ಘಟವಾದ್ಯ ಪ್ರವೀಣರ ಹೊಟ್ಟೆಯೂ ಕಣ್ಣಿಗೆ ಕಟ್ಟುತ್ತದೆ. ಈ ಒಂದು ಘಟನೆಯ ಮೂಲಕ ಅರಮನೆಯ ರೀತಿನೀತಿಗಳ ಚಿತ್ರಣವೂ ಸಿಗುತ್ತದೆ. ಈ ಘಟನೆಯನ್ನು ನಿರೂಪಿಸಿದ ಮೇಲೆ ಚೌಡಯ್ಯನವರಿಗೆ ಸಂಗೀತ ತಂದುಕೊಟ್ಟಗಾಂಭೀರ್ಯ, ಧೈರ್ಯ ಮತ್ತು ಸ್ಥೈರ್ಯವನ್ನು, ಸಮಯಪ್ರಜ್ಞೆಯನ್ನೂ

ಈ ಲೇಖಕರು ಚಿತ್ರಿಸಿದ್ದಾರೆ. ಚೌಡಯ್ಯನವರು ಭಕ್ಷಿಯವರ ಹತ್ತಿರ ಹೋಗಿ "ಅರಮನೆಗೆ ಹೇಗೆ ಸಂಪ್ರದಾಯಮುಖ್ಯವೋ ಹಾಗೆಯೇ ಸಂಗೀತ ಕಛೇರಿಗಳಲ್ಲಿಯೂ ಕೆಲವೊಂದು ಸಂಪ್ರದಾಯಗಳು ಅನಿವಾರ್ಯ" ಎಂದು ಹೇಳಿ ಅಲಂಗುಡಿಯವರನ್ನು ಶಾಲುಹೊದೆಸಿ ಮಹಾರಾಜರೆದುರಿಗೆ ಕೂಡಿಸಿದರಂತೆ. ಹೀಗೆ ಕೃಷ್ಣಮೂರ್ತಿಯವರು ಜೀವನಕತೆ, ಜೀವನ ಚಿತ್ರ ಮತ್ತು ಜೀವನದರ್ಶನಗಳನ್ನು ಒಟ್ಟಿಗೇ ಕೊಡುತ್ತಾರೆ.

ಮೈಸೂರು ವಾಸುದೇವಾಚಾರ್ಯರ ಬಗ್ಗೆ ಬರೆಯುತ್ತ ಅವರೆಷ್ಟು ಪ್ರಸಿದ್ಧರಾಗಿದ್ದರೂ ಕೆಲವು ಮಾನವೀಯ ದೌರ್ಬಲ್ಯಗಳನ್ನು ಹೊಂದಿದ್ದರೆನ್ನುವುದನ್ನು ಈ ಲೇಖಕರು ಹೀಗೆ ಚಿತ್ರಿಸುತ್ತಾರೆ. "ಮನೆಯಿಂದ ಹೊರಡುವಾಗ ಎಷ್ಟೇ ಅವಸರದ ಕೆಲಸ ಇದ್ದರೂ ಶಕುನಕ್ಕಾಗಿ ಕಾಯುತ್ತಿದ್ದರು!... ರಾತ್ರಿಯ ವೇಳೆ ಒಬ್ಬರೇ ಕೊಠಡಿಯಲ್ಲಿ ಮಲಗಲು ಆಚಾರ್ಯರು ಮಕ್ಕಳಂತೆ ಹೆದರುತ್ತಿದ್ದರು... ಆಚಾರ್ಯರದು ತುಂಬ ಗಾಬರಿಸ್ವಭಾವ...ಆದರೆ ಈ ಗಾಬರಿ, ಆತಂಕವೆಲ್ಲ ಮಾತಾಡಲು ನಿಲ್ಲುವವರೆಗೆ, ಹಾಡಲು ಕುಳಿತುಕೊಳ್ಳುವವರೆಗೆ, ಅಷ್ಟೆ. ಆಮೇಲೆ ಸಿಂಹಧೈರ್ಯ ಬರುತ್ತಿತ್ತು!...ಎಲ್ಲರೂ ಇಟ್ಟುಕೊಳ್ಳುತ್ತಾರಲ್ಲ ಎಂದು ಆಚಾರ್ಯರು ತಾವೂ ಒಂದು ಕೈಗಡಿಯಾರವನ್ನು ಇಟ್ಟುಕೊಂಡರು. ಆದರೆ ಗಂಟೆ ಅಳೆಯಲು ಬರದು!" ಹೀಗೆ ಆತ್ಮೀಯವಾಗಿ ವ್ಯಕ್ತಿಗಳನ್ನು ಈ ಲೇಖಕರು ಚಿತ್ರಿಸಿದ್ದಾರೆ.

ರಾಳ್ಲಪಲ್ಲಿ ಅನಂತ ಕೃಷ್ಣಶರ್ಮರ ಬಗ್ಗೆ ನಾವು ಅನೇಕ ಸಂಗತಿಗಳನ್ನು ತಿಳಿಯುತ್ತೇವೆ. ಅವರು ಬಿಡಾರಂ ಕೃಷ್ಣಪ್ಪನವರ ಶಿಷ್ಯರಾಗಿದ್ದರೂ, ಭಾರೀ ಪಂಡಿತರಾದ್ದರಿಂದ "ಶರ್ಮರ ವಿಷಯದಲ್ಲಿ ಕೃಷ್ಣಪ್ಪನವರಿಗೆ ತುಂಬ ಗೌರವ...'ಪಂಡಿತರೇ' ಎಂದೇ ಕರೆಯುತ್ತಿದ್ದರು. 'ನಿಮ್ಮಂಥ ವಿದ್ವಾಂಸರಿಗೆ ಪಾಠ ಹೇಳುವುದೆಂದರೆ ನನಗೂ ಒಂದು ಗೌರವವಲ್ಲವೇ ?' ಎನ್ನುತ್ತಿದ್ದರಂತೆ." ಇಂಥ ಗುರುಗಳ ಶಿಷ್ಯರಾದ ರಾಳ್ಲಪಲ್ಲಿಯವರು ಒಂದು ದಿನ ಅವರ ಶಿಷ್ಯರಾದ ತಾತಾಚಾರ್ಯರು ಗಂಟೆ ಎಷ್ಟೆಂದು ಗೊತ್ತಾಗದೆ ಮಧ್ಯರಾತ್ರಿಯಲ್ಲಿ ಪಾಠಕ್ಕೆ ಬಂದಾಗ "ಚಿಂತೆಯಿಲ್ಲ ಬಾ ಒಳಗೆ. ಪಿಟೀಲು ಶ್ರುತಿ ಮಾಡಿಕೊ" ಎಂದು ಹೇಳಿ ಪಾಠವನ್ನು ಆರಂಭಿಸಿದರಂತೆ. ಇಂಥ ಮಹಾನುಭಾವರನ್ನು ನಮಗೆ ಹತ್ತಿರದವರನ್ನಾಗಿ ತೋರಿಸುವ ಎಸ್. ಕೃಷ್ಣಮೂರ್ತಿಯವರು ಅಭಿನಂದನಾರ್ಹರು.

# ಅಭಿನಂದನ ಗ್ರಂಥ ಮತ್ತು ಪ್ರಬಂಧ

**ಸುಮತೀಂದ್ರ ನಾಡಿಗ್, ಎಸ್. ವಿದ್ಯಾಶಂಕರ**

**ಇಂಚರ** (ಪಂ. ಬಸವರಾಜ ರಾಜಗುರು ಅಭಿನಂದನ ಗ್ರಂಥ)
ಸಂ. : ಬಸವರಾಜ ಮಲಶೆಟ್ಟಿ

ಪಂಚಾಕ್ಷರಿ ಗವಾಯಿಗಳ ಶಿಷ್ಯರಾದ ಬಸವರಾಜ ರಾಜಗುರು ಅವರ ಅಭಿನಂದನ ಗ್ರಂಥದ ಪ್ರಾರಂಭದಲ್ಲಿ ಅವರ ಅನೇಕ ಭಾವಚಿತ್ರಗಳಿವೆ. ಅದಾದ ಮೇಲೆ ಅವರ ಕೆಲವು ನೆನಪುಗಳಿವೆ. ಅವರ ಸಂಗೀತದ ಬಗ್ಗೆ ಮತ್ತು ಅವರ ಜೀವನದ ಬಗ್ಗೆ ಅವರನ್ನು ಕಂಡವರು ಮತ್ತು ಕೇಳಿದವರು ಲೇಖನಗಳನ್ನು ಬರೆದಿದ್ದಾರೆ. ಈ ಪುಸ್ತಕದ ಎರಡನೆ ಭಾಗದಲ್ಲಿ ಭಾರತೀಯ ಸಂಗೀತ, ಹಿಂದೂಸ್ತಾನಿ ಸಂಗೀತ, ಕರ್ನಾಟಕ ಸಂಗೀತದ ಮತ್ತು ರಂಗಸಂಗೀತದ ಬಗ್ಗೆ ಪಾಂಡಿತ್ಯಪೂರ್ಣ ಲೇಖನಗಳಿವೆ. ಈ ಪುಸ್ತಕ ಕೇವಲ ಅಭಿನಂದನೆಯ ಗ್ರಂಥವಾಗದೆ, ಸಂಗೀತಲೋಕದ ಬಗ್ಗೆ ನಮ್ಮ ತಿಳಿವನ್ನೇ ಹಿಗ್ಗಿಸುವುದು ಇದರ ವಿಶೇಷವಾಗಿದೆ.

**ಸ್ವಸ್ತಿ :** (ತ. ಸು. ಶಾಮರಾಯರ ಅಭಿನಂದನ ಗ್ರಂಥ) :
ಸಂಪಾದಕರು : ಹಾ. ಮಾ. ನಾಯಕ, ಸಿ. ಪಿ. ಕೃಷ್ಣಕುಮಾರ್
ಮತ್ತು ಟಿ. ವಿ. ವೆಂಕಟಾಚಲಶಾಸ್ತ್ರೀ

ಕನ್ನಡ ಸಾಹಿತ್ಯದ ಹಿರಿಯ ಲೇಖಕರಲ್ಲೊಬ್ಬರಾದ ತ. ಸು. ಶಾಮರಾಯರ ಅಭಿನಂದನ ಗ್ರಂಥದ ಮೊದಲ ಭಾಗದಲ್ಲಿ, ಆಧುನಿಕ ಸಾಹಿತ್ಯದಲ್ಲಿ ಬಹಳ ಮುಖ್ಯವೆಂದುಕೊಂಡಿರುವ, 78 ಕೃತಿಗಳ ಬಗ್ಗೆ ವಿಮರ್ಶಾತ್ಮಕ ಲೇಖನಗಳಿವೆ. ಕೆಲವು ಲೇಖನಗಳು ಪರಿಚಯಾತ್ಮಕವಾಗಿವೆ, ಕೆಲವು ಪಾಂಡಿತ್ಯಪೂರ್ಣವಾಗಿವೆ; ಕೆಲವು ಲೇಖನಗಳು ವಾದಕ್ಕೆ ಪ್ರತಿವಾದವನ್ನು ಮಂಡಿಸುತ್ತವೆ. ಕೆಲವು ಲೇಖನಗಳಲ್ಲಿ ಅವಲೋಕನಕ್ಕೆ ತೆಗೆದುಕೊಂಡ ಕೃತಿ, ಇಪ್ಪತ್ತನೆಯ ಶತಮಾನದ ಮಹತ್ವಪೂರ್ಣಕೃತಿ ಅಲ್ಲದೆ ಇರಬಹುದು. ಆದರೆ ಈ ರೀತಿಯಲ್ಲಿ ಮುಖ್ಯಕೃತಿಗಳನ್ನು ಆರಿಸಿ, ಗಮನಕೊಡುವ ಕೆಲಸವೇ ಮೌಲಿಕವಾದದ್ದು. ಆದ್ದರಿಂದ ಈ ಅಭಿನಂದನ ಗ್ರಂಥ ವಿಮರ್ಶೆಯನ್ನು ಬೆಳೆಸುವುದಕ್ಕೆ ಮೂಲಸಾಮಗ್ರಿಯನ್ನು ಒದಗಿಸಬಲ್ಲದು.

ಎರಡನೆಯ ಭಾಗದಲ್ಲಿ ತ. ಸು. ಶಾಮರಾಯರ ಜೀವನ ಮತ್ತು ವ್ಯಕ್ತಿತ್ವ, ಅವರ ಪರಿಶೋಧನೆ ಮತ್ತು ವಿಮರ್ಶೆ, ಅವರ ಸಂಗ್ರಹ ಮತ್ತು ಸಂಪಾದನ ಅಲ್ಲದೆ

ಅವರ ಇನ್ನಿತರ ಚಟುವಟಿಕೆಗಳನ್ನೂ ಗಮನಿಸುವ ಲೇಖನಗಳಿವೆ. ಹೀಗಾಗಿ ಸಂಭಾವನಾ ಗ್ರಂಥಗಳಲ್ಲಿ 'ಸ್ವಸ್ತಿ'ಗೆ ವಿಶಿಷ್ಟ ಸ್ಥಾನವಿದೆ.

**ಆಸ್ವಾದ** (ಪ್ರೊಫೆಸರ್ ಎಂ. ವಿ. ಸೀ. ಅಭಿನಂದನ ಗ್ರಂಥ) ಸಂ. ಶ್ರೀವತ್ಸ, ಅನಂತಪದ್ಮನಾಭರಾವ್ ಮತ್ತು ಎಚ್. ಎಂ. ರಂಗನಾಥ್

ಈ ಗ್ರಂಥದಲ್ಲಿ ಎರಡು ಭಾಗಗಳಿವೆ. ಮೊದಲನೆಯ ಭಾಗ ಎಂ.ವಿ.ಸೀ. ಯವರ ಜೀವನ ಮತ್ತು ಕೃತಿಗಳನ್ನು ಕುರಿತದ್ದು. ಎಂ.ವಿ.ಸಿ.ಯವರೇ ಬರೆದ ಜೀವನ ಸ್ಮೃತಿಗಳಿಂದ ಅವರ ಕೃತಿಗಳಿಗೆ ಪ್ರವೇಶ ದೊರೆಯುತ್ತದೆ. ಅವರ ಕಾವ್ಯದ ಬಗ್ಗೆ 10 ಲೇಖನಗಳಿವೆ; ಅವರ ಪ್ರಬಂಧಗಳು, ಕಾದಂಬರಿಗಳು, ಸಣ್ಣ ಕತೆಗಳು, ಮಕ್ಕಳ ಸಾಹಿತ್ಯ, ಬಾನುಲಿಯ ಬರಹಗಳು, ಸಂಪಾದಿತ ಸಂಚಿಕೆಗಳು, ಗ್ರಂಥ ಸಂಪಾದನೆ, ಕನ್ನಡ ಛಂದಸ್ಸು ಮತ್ತು ವ್ಯಾಕರಣಕ್ಕೆ ಅವರ ಕೊಡುಗೆ-ಹೀಗೆ ಎಂ.ವಿ.ಸಿ ಯವರ ಕೃತಿಲೇಖನಗಳ ಸಮಗ್ರವಾದ ಸಮೀಕ್ಷೆಯಿದೆ. ಎರಡನೆಯ ಭಾಗದಲ್ಲಿ ಸಂಶೋಧನೆಯ ಕ್ಷೇತ್ರಕ್ಕೆ ಸಂಬಂಧಿಸಿದ ಲೇಖನಗಳಿವೆ.

—ಸುಮತೀಂದ್ರ ನಾಡಿಗ್

## ಪ್ರಬಂಧ

1983ರ ವಿಮರ್ಶೆಗೆ ಬಂದ ಪ್ರಬಂಧಗಳು ಮೂರು. ದೇ.ಜ ಗೌ.ರವರ 'ತೆನೆ', ಎಚ್. ಶ್ರೀಶೈಲ ಆರಾಧ್ಯರ 'ಸೀಮೆಗಿಲ್ಲದೋರ ಸೂರಿನ ಕೆಳಗೆ' ಮತ್ತು ತೆಕ್ಕುಂಜ ದಾಮೋದರ ಭಟ್ಟರ 'ವಿವೇಚನೆ'.

ದೇಜಗೌರವರ 'ತೆನೆ' ವೈಚಾರಿಕ ಲೇಖನಗಳ ಸಂಗ್ರಹ. ಇಲ್ಲಿನ ಎಲ್ಲ ಲೇಖನಗಳು ಆಕಾಶವಾಣಿಯ 'ಚಿಂತನ'ದ ಮೂಲಕ ಹೊಮ್ಮಿ ಬಂದಿವೆ. ನಿರ್ದಿಷ್ಟ ವಿಷಯ ಹಾಗೂ ಗೊತ್ತುಗುರಿಗಳಿಲ್ಲದ ಇಲ್ಲಿನ ಪ್ರಬಂಧಗಳು ಸಾಹಿತಿಯೊಬ್ಬನ ಆರೋಗ್ಯಪೂರ್ಣ ಮನಸ್ಸಿನ ಚಿಂತನೆಯ ಹರಳುಗಳು. ಇಲ್ಲಿನ ವಿಚಾರಧಾರೆಗಳು ಅನುಭವದಿಂದ ಸಂಪದ್ಭರಿತವಾದವುಗಳು; ಅವು ಓದುಗರ ಪಾಲಿಗೆ ಜ್ಞಾನದೀವಿಗೆಗಳು. ನಿರ್ದಿಷ್ಟ ಮಿತಿಯಲ್ಲಿ ಲೇಖಕರ ಚಿಂತನೆಗಳು ಪಾಂಡಿತ್ಯಪೂರ್ಣವಾಗಿವೆ ಹಾಗೆಯೇ ಸರಳ ನಿರೂಪಣೆಯನ್ನು ಹೊಂದಿವೆ. ಅರ್ಥಪೂರ್ಣ ಚಿಂತನೆಗಳಿಗಾಗಿ ಲೇಖಕರು ಅಭಿನಂದನಾರ್ಹರು.

ಎಚ್. ಶ್ರೀಶೈಲ ಆರಾಧ್ಯರ 'ಸೀಮೆಗಿಲ್ಲದೋರ ಸೂರಿನ ಕೆಳಗೆ' ಒಂಬತ್ತು ವ್ಯಕ್ತಿಚಿತ್ರಗಳನ್ನೊಳಗೊಂಡ ಕೃತಿ. ಲೇಖಕರು ತಮ್ಮ ಹುಟ್ಟೂರಿನಲ್ಲಿ ಕಂಡ ವ್ಯಕ್ತಿಗಳ ಗುಣವಿಶೇಷಗಳ ಚಿತ್ರವನ್ನು ಇಲ್ಲಿ ಕೊಟ್ಟಿರುವರು. ಈ ವ್ಯಕ್ತಿಗಳಲ್ಲಿ ಕೆಲವರು ತಮ್ಮ ವೃತ್ತಿವಿಶೇಷದಿಂದ ಮನಸೆಳೆದರೆ, ಮತ್ತೆ ಕೆಲವರು ತಮ್ಮ

ಗುಣಾವಗುಣಗಳಿಂದ ಮನಸೆಳೆದಿರುವರು. ಗಿರಿಯಣ್ಣನ ಕ್ಷೌರದ ವೈಖರಿಯಾಗಲೀ, ಕೆಂಪನ ಕರಡಿಯ ಬೇಟೆಯಾಗಲೀ, ಬೋರನ ಹುಲಿ ಬೇಟೆಯಾಗಲೀ, ಇವಾರಿ ಸಾಬಿಯ ರಣವೈದ್ಯದ ವೈಖರಿಯಾಗಲೀ ಚಿತ್ರವತ್ತಾಗಿವೆ. ವ್ಯಕ್ತಿಗಳ ದೌರ್ಬಲ್ಯ ಗಳನ್ನು ಸುಖಜೀವಿ ಬಸವಯ್ಯ ಹಾಗೂ ಯಂಕ್ಕದಹಳ್ಳಿ ಕಂಬೇಗೌಡರ ಪಾತ್ರಗಳಲ್ಲಿ ಲೇಖಕರು ಸೊಗಸಾಗಿ ನಿರೂಪಿಸಿರುವರು. ಇಲ್ಲಿನ ವ್ಯಕ್ತಿಗಳಲ್ಲೆಲ್ಲಾ ಬಗಾರಿ ರುದ್ರಾಚಾರಿಯಂದು ಅತ್ಯಂತ ಆಕರ್ಷಕ ವ್ಯಕ್ತಿಚಿತ್ರ. ಆಚಾರಿಯು ಸಾರಿನ ಒಗ್ಗರಣೆ ಕ್ರಮ, ಕೆಂಡಗಾಯಿ ಮಾಡುವ ವಿಧಾನ ರಸವತ್ತಾಗಿದೆ. ಅದರ ಸ್ವಾರಸ್ಯವನ್ನು ಓದಿಯೇ ಸವಿಯಬೇಕು. ಶ್ರೀನಿವಾಸ, ಗೊರೂರು, ಕಾರಂತ—ಇವರುಗಳು ತಾವು ಬಾಳಿ ಬದುಕಿದ ಪರಿಸರದ ಜೀವನಚಿತ್ರವನ್ನು ತಮ್ಮ ಕೃತಿಗಳಲ್ಲಿ ಕೊಟ್ಟಂತೆ ತಾವೂ ಕೊಡಲು ಲೇಖಕರು ಪ್ರಯತ್ನಿಸಿರುವರು. ಗ್ರಾಮೀಣ ಭಾಷೆಯ ಸೊಗಡನ್ನು ಚೆನ್ನಾಗಿ ವ್ಯಕ್ತಿಚಿತ್ರಗಳಲ್ಲಿ ಬಳಸಲಾಗಿದೆ. ಹಳ್ಳಿಯ ಬದುಕಿನ ವೈವಿಧ್ಯವನ್ನೂ ಸೊಗಸನ್ನೂ ಪರಿಚಯಿಸುವಲ್ಲಿ ಲೇಖಕರ ಶ್ರಮ ಸಾರ್ಥಕವಾಗಿದೆ.

ತೆಕ್ಕುಂಜ ದಾಮೋದರ ಭಟ್ಟರ 'ವಿವೇಚನೆ' ಭಾಷೆ ಸಾಹಿತ್ಯವನ್ನು ಕುರಿತ ಹತ್ತು ಲೇಖನಗಳ ಸಂಕಲನ ಗ್ರಂಥ. ಇಲ್ಲಿನ ಮೂರು ಲೇಖನಗಳು ಸಂಸ್ಕೃತ ಕನ್ನಡ ಪದಗಳ ರೂಪನಿಷ್ಪತ್ತಿ, ಸಾಧುತ್ವಾ ಸಾಧುತ್ವ ವಿವೇಚನೆ ಶಬ್ದಾರ್ಥವಿಹಾರಗಳನ್ನು ಒಳಗೊಂಡಿವೆ. ದಶರಥನ ಮಾರಾಣಿಯರು, ವೇದವತಿ ಎಂಬ ಲೇಖನಗಳು— ವಾಲ್ಮೀಕಿ ರಾಮಾಯಣದ ಸ್ತ್ರೀಪಾತ್ರಗಳ ವಿಶ್ಲೇಷಣೆಗೆ ತೊಡಗಿವೆ. ಅಪೂರ್ವ ವಿರಿಂಚಿ ಎಂಬ ಲೇಖನವು ಭಾಗವತದ ಅಕ್ರೂರನ ಪಾತ್ರ ವಿವೇಚನೆಯನ್ನು ಕುರಿತ ದ್ದಾಗಿದೆ. ರಾಜೇಂದ್ರ ಗುಣವಾಕ್ಯವು ಯಕ್ಷಗಾನ ಭರತೇಶ ವೈಭವದ ಪದ್ಯಗಳ ಸ್ವಾರಸ್ಯ ವಿವೇಚನೆಯಾಗಿವೆ. ಇಲ್ಲಿಯ ಎಲ್ಲ ಲೇಖನಗಳು ಸಂಶೋಧನ ಪ್ರಬಂಧ ಗಳಾಗಿದ್ದು, ಪ್ರೌಢವಾಗಿವೆ.

—ಎಸ್. ವಿದ್ಯಾಶಂಕರ

# ಗ್ರಂಥ ಸಂಪಾದನೆ

ಎಸ್. ಶಿವಣ್ಣ

1983ನೆಯ ವರ್ಷದಲ್ಲಿ ಸಂಪಾದಿತ ಕೃತಿಗಳಿಗೆ ಸಂಬಂಧಿಸಿದಂತೆ (ಮರು ಮುದ್ರಿತ ಕೃತಿಗಳನ್ನು ಒಳಗೊಂಡು) ಸುಮಾರು 30ಕ್ಕೂ ಮೀರಿ ಕೃತಿಗಳು ಹೊರ ಬಂದಿವೆ. ಇದರಲ್ಲಿ 14 ಕೃತಿಗಳು ಮಾತ್ರ ಲಭಿಸಿದ್ದು ಅವನ್ನು ಮಾತ್ರ ಅವಲೋಕಿಸ ಲಾಗಿದೆ. ಇಲ್ಲಿನ 3 ಕೃತಿಗಳಲ್ಲಿ ಆ–ಆ ಲೇಖಕರ ಇತರ ಕೃತಿಗಳೂ ಇದ್ದು ಒಟ್ಟಿನಲ್ಲಿ ಇಲ್ಲಿನ ಕೃತಿಗಳ ಸಂಖ್ಯೆ 21 ಆಗುತ್ತದೆ.

ಕೃತಿ ಪ್ರಕಾರಗಳ ದೃಷ್ಟಿಯಿಂದ ಕಾವ್ಯ, ಅಲಂಕಾರ, ವಚನ ಸಾಹಿತ್ಯ, ಸ್ವರ ವಚನ ಸಾಹಿತ್ಯ, ಹರಿದಾಸ ಸಾಹಿತ್ಯ ಮತ್ತು ಯಕ್ಷಗಾನಗಳಿಗೆ ಸಂಬಂಧಿಸಿದ ಕೃತಿಗಳಿವೆ. ಛಂದಸ್ಸಿನ ದೃಷ್ಟಿಯಿಂದ ವಚನ, ಸ್ವರವಚನ, ಕೀರ್ತನೆ (ಉಗಾಭೋಗ ಮತ್ತು ಸುಳಾದಿ ಸಹಿತ), ಕಂದ, ಸಾಂಗತ್ಯ, ವಾರ್ಧಕ ಷಟ್ಪದಿಗಳಿಗೆ ಸಂಬಂಧಿಸಿವೆ. ಗ್ರಂಥ ಮುದ್ರಣದ ದೃಷ್ಟಿಯಿಂದ ಐ. ಬಿ. ಎಚ್. ಪ್ರಕಾಶನ (ಬೆಂಗಳೂರು) ಪ್ರಕಟಿಸಿರುವ 'ಕವಿರಾಜಮಾರ್ಗ' ತುಂಬಾ ಗಮನಾರ್ಹವಾದ ದಾಖಲೆಯಾಗಿದೆ.

ನೃಪತುಂಗದೇವಾನುಮತಂ ಶ್ರೀ ವಿಜಯ ಪ್ರಭೂತಂ ಕವಿರಾಜಮಾರ್ಗಂ

(ಸಂ.) ಕೆ. ಕೃಷ್ಣಮೂರ್ತಿ

ಕನ್ನಡ ಭಾಷೆಯಲ್ಲಿ ರಚಿತವಾಗಿರುವ ಕವಿರಾಜಮಾರ್ಗ ಉಪಲಬ್ಧ ಪ್ರಪ್ರಥಮ ಕೃತಿ. ಮೂಲಭೂತವಾಗಿ ದಂಡಿಯ 'ಕಾವ್ಯಾದರ್ಶ'ವನ್ನು ಆಧರಿಸಿ ಅಲಂಕಾರ ಶಾಸ್ತ್ರ ವಿವೇಚನೆಯ ಕೃತಿಯಾಗಿ ರೂಪುಗೊಂಡಿದೆ. ಆದರೂ ಕನ್ನಡ ನಾಡು, ನುಡಿಗಳ ಬಗೆಗೆ ಗಮನಾರ್ಹವಾದ ಮಾಹಿತಿಯನ್ನು ಒಳಗೊಂಡಿದೆ. ಅಲ್ಲದೆ ಕೆಲವು ವ್ಯಾಕರಣ–ಛಂದಸ್ಸುಗಳಿಗೆ ಸಂಬಂಧಿಸಿದ ಅಂಶಗಳಿವೆ.

ಕವಿರಾಜ ಮಾರ್ಗ ಕ್ರಿ.ಶ. 1898 ರಿಂದ 1975ರ ವರೆಗೆ 3 ಬಾರಿ ಸಂಪಾದಿತ ವಾಗಿ ಪ್ರಕಟವಾಗಿದೆ. 1898 (ಸಂ: ಕೆ. ಬಿ. ಪಾಠಕ್), 1930 (ಸಂ: ಎ.

---

ಈ ವರ್ಷ ಪ್ರಕಟವಾಗಿದ್ದು, ಇಲ್ಲಿ ಹೆಸರಿಸಲಾಗದ ಕೆಲವು ಕೃತಿಗಳ ಬಗೆಗೆ ಆಸಕ್ತರು ಈ ಕೆಳಕಂಡ ಲೇಖನವನ್ನು ಗಮನಿಸಬಹುದಾಗಿದೆ.

ಡಾ. ವೀರಣ್ಣ ರಾಜೂರ: ೧೯೮೩ರ ಸಂಪಾದನ ಕೃತಿಗಳು, ಕರ್ನಾಟಕ ಭಾರತಿ, 17–4. 1985. ಪುಟ 110–137.

ವೆಂಕಟರಾವ್ ಮತ್ತು ಎಚ್. ಶೇಷಯ್ಯಂಗಾರ್), 1968 ಮತ್ತು 1975 (ಸಂ: ಎಂ. ವಿ. ಸೀತಾರಾಮಯ್ಯ). ಇದಲ್ಲದೆ ಎಂ. ಎಂ. ಕಲಬುರ್ಗಿ ಅವರ 'ಕವಿರಾಜ ಮಾರ್ಗ ಪರಿಸರದ ಕನ್ನಡ ಸಾಹಿತ್ಯ' (1973), ಭೀಮರಾವ್ ಚಿಟಗುಪ್ಪಿ ಅವರ 'ಕವಿರಾಜಮಾರ್ಗ ಪ್ರಶಸ್ತಿ' (1972) ಮತ್ತು ಮುಳಿಯ ತಿಮ್ಮಪ್ಪಯ್ಯನವರ 'ಕವಿರಾಜಮಾರ್ಗ ವಿವೇಕ' (1973) ಗಳಲ್ಲಿ ಆನುಷಂಗಿಕವಾಗಿ ಕವಿರಾಜಮಾರ್ಗದ ಕೆಲವು ಪಾಠಗಳ ಬಗೆಗೆ ಚರ್ಚಿಸಲಾಗಿದೆ.

ಈ ಎಲ್ಲ ಸಾಮಗ್ರಿಯನ್ನೂ ಬಳಸಿಕೊಂಡು ಕೆ. ಕೃಷ್ಣಮೂರ್ತಿಗಳು 4ನೆಯ ಸಲ ಕವಿರಾಜಮಾರ್ಗವನ್ನು ಪರಿಷ್ಕೃತಗೊಳಿಸಿ ಹೊರತಂದಿದ್ದಾರೆ. ಸಮಗ್ರ ಕೃತಿಗೆ ಹೊಸಗನ್ನಡ ಗದ್ಯಾನುವಾದವನ್ನು ಒದಗಿಸಿಕೊಟ್ಟಿದ್ದಾರೆ.

ಕೃತಿ ಪರಿಷ್ಕರಣದ ರೀತಿಯನ್ನು ಕುರಿತು ಸಂಪಾದಕರು 'ಕೇವಲ ಗ್ರಂಥದ ಅನುಪೂರ್ವಿಯ ಗ್ರಹಣೆ, ಅರ್ಥದೃಷ್ಟಿ ಮತ್ತು ವ್ಯಾಕರಣ ಶುದ್ಧಿ ಹಾಗು ಛಂದೋ ಬದ್ಧತೆಯ ದೃಷ್ಟಿಗಳಿಂದ ನೋಡಿ ಯಥಾಶಕ್ತಿ ಗ್ರಂಥದ ಪಾಠವನ್ನು ನಿಶ್ಚಯಿಸುವ ಒಂದು ನೇರವಾದ ಪ್ರಯತ್ನ ಈ ಸಂಪಾದಕನದು' ಎಂದಿದ್ದಾರೆ.

ಪೀಠಿಕೆಯಲ್ಲಿ ಕವಿರಾಜಮಾರ್ಗದ ಹಸ್ತಪ್ರತಿಗಳು, ಮುದ್ರಿತ ಆವೃತ್ತಿಗಳು ಮತ್ತು ಅಧ್ಯಯನ ಗ್ರಂಥಗಳ ವಿವರ, ಛಂದೋ ಸಮಸ್ಯೆಗಳ ಬಗೆಗೆ ಪ್ರಸ್ತುತ ಆವೃತ್ತಿಯ ಧೋರಣೆ ಕವಿರಾಜಮಾರ್ಗಕಾರನ ಕರ್ತೃತ್ವಕ್ಕೆ ಸಂಬಂಧಿಸಿದ ಅಂತರ–ಬಾಹ್ಯಪ್ರಮಾಣಗಳು, ಕವಿರಾಜಮಾರ್ಗದ ಮಹತ್ವ, ಗ್ರಂಥದ ಪ್ರತಿಪಾದ್ಯ ವಿಷಯ ಹಾಗು ಅನುವಾದ ಕ್ಲೇಶಗಳು, ಕೃತಿಯ ಪ್ರಕರಣಗಳ ವಿಷಯ ವಿವೇಚನೆ, ನೃಪತುಂಗ ಹಾಗೂ ನೃಪತುಂಗ ಸಭಾಸದ ಪ್ರಶಸ್ತಿ, ಸಂಸ್ಕೃತ–ಪ್ರಾಕೃತ ಕೃತಿಗಳಲ್ಲಿನ ಉಲ್ಲೇಖಗಳ ಹಿನ್ನೆಲೆಯಲ್ಲಿ ನೃಪತುಂಗನ ಮತವಿಚಾರಗಳ ಬಗೆಗೆ ದೀರ್ಘವಾಗಿ ವಿವೇಚಿಸಲಾಗಿದೆ.

ಕೃತಿಯನ್ನು ಮೂರು ಪ್ರತಿಗಳ ಸಹಾಯದಿಂದ ಪರಿಷ್ಕರಿಸಲಾಗಿದೆ. ಗ್ರಂಥದ ಕೊನೆಯಲ್ಲಿ 'ಪದ್ಯಗಳ ಅಕಾರಾದಿ ಸೂಚಿ' ಇದೆ.

ಚೆನ್ನಬಸವಣ್ಣನವರು ನಿರೂಪಿಸಿದ ವಚನೈಕೋತ್ತರಶತಸ್ಥಲ

(ಸಂ) ಜಿ. ಎ. ಶಿವಲಿಂಗಯ್ಯ

ವಚನೈಕೋತ್ತರ ಶತಸ್ಥಲ ವಚನ ಸಂಕಲನ ಪ್ರಕಾರಕ್ಕೆ ಸಂಬಂಧಿಸಿದ ಆದ್ಯ ಕೃತಿ. ಇದನ್ನು ಬಸವಾದಿಗಳ ಸಮಕಾಲೀನರಾದ ಚೆನ್ನಬಸವಣ್ಣನವರು ಸಂಕಲಿಸಿದ್ದಾರೆ. ಇವರ ಕಾಲ ಕ್ರಿ.ಶ. 1160. ಈ ಸಂಕಲನದಲ್ಲಿ ಅಂಗಸ್ಥಲ–ಲಿಂಗಸ್ಥಲಗಳಿಗೆ ಸಂಬಂಧಿಸಿದ 101 ಸ್ಥಲಗಳಲ್ಲಿ 110 ವಚನಗಳು ಉದಾಹೃತ ವಾಗಿವೆ. ಕ್ರಮಾಂಕ 31–41ರ ವಚನಗಳು ಲೋಪಗೊಂಡಿವೆ.

ಈ ಸಂಕಲನದಲ್ಲಿ ಸಕಲೇಶಮಾದರಸ, ಬಸವಣ್ಣ, ಚೆನ್ನಬಸವ, ಅಲ್ಲಮಪ್ರಭು, ಮಡಿವಾಳ ಮಾಚಿದೇವ, ಘಟ್ಟಿವಾಳಯ್ಯ, ಚಂದಿಮರಸ, ಉರಿಲಿಂಗಪೆದ್ದಿ, ಅಂಬಿಗರ ಚೌಡಯ್ಯ, ಅಕ್ಕಮಹಾದೇವಿ, ಹಾವಿನಹಾಳ ಕಲ್ಲಯ್ಯಗಳ ವಚನಗಳಿವೆ. ಬಸವಣ್ಣ, ಅಲ್ಲಮಪ್ರಭು, ಚೆನ್ನಬಸವರ 80 ವಚನಗಳು ಪ್ರಕಟಿತ ಕೃತಿಯಲ್ಲಿವೆ.

ಉಪಲಬ್ಧ 99 ವಚನಗಳಲ್ಲಿ ಕ್ರಮಾಂಕ 3, 108, 109ನ್ನು ಹೊರತುಪಡಿಸಿ ಉಳಿದ ವಚನಗಳೆಲ್ಲ ಮಹಾಲಿಂಗದೇವನ (ಸು. 1430) ಏಕೋತ್ತರ ಶತಸ್ಥಲ ದಲ್ಲಿವೆ. 10, 49, 86ನೆಯ ವಚನಾಂಕಿತಗಳು ಇಲ್ಲಿ ಕೂಡಲಸಂಗಮದೇವ ಎಂದಿದ್ದು ಮಹಾಲಿಂಗದೇವನ ಕೃತಿಯಲ್ಲಿ ಕೂಡಲ ಚೆನ್ನಸಂಗಮದೇವ ಎಂದಿವೆ. ಕ್ರಮಾಂಕ 87ರ ಅಂಕಿತ ಮಹಾದಾನಿ ಕಲ್ಲೇಶ್ವರಾ ಮಹಾಲಿಂಗದೇವನಲ್ಲಿ ಮಹಾಲಿಂಗ ಕಲ್ಲೇಶ್ವರ ಎಂದಿದೆ.

ಕೃತಿ ಏಕೈಕ ಓಲೆಪ್ರತಿ ಆಧರಿಸಿ ಮುದ್ರಣಗೊಂಡಿದೆ. ಪರಿಷ್ಕೃತ ಕೆಲವು ವಚನಗಳಲ್ಲಿ ಶಕಟರೇಫದ ಪ್ರಯೋಗ ತಪ್ಪಾಗಿದೆ. (ವಚನ 21, 85, 108)

ಪೀಠಿಕೆಯಲ್ಲಿನ (ಪು. VII) ಬಸವೇಶನ ವಾರ್ಧಿಕ ಷಟ್ಪದಿ ಕೃತಿ ಸ್ವತಂತ್ರ ಕೃತಿಯಾಗಿರದೆ ಮುಗ್ಗಿಯ ಮಾಯಿದೇವನ ಕೃತಿಯೇ ಆಗಿದೆ.

ಅನುಬಂಧದಲ್ಲಿ ವಚನಕಾರರು–ವಚನಗಳ ಸಂಖ್ಯೆ ಹಾಗು ವಚನಗಳ ಆಕಾರಾದಿಗಳಿವೆ.

ಪ್ರಸ್ತುತ ಸಂಕಲನದ ಪ್ರಕಟನೆಯಿಂದ ವಚನ ಸಂಕಲನಪ್ರಕಾರ ಹನ್ನೆರಡನೆಯ ಶತಮಾನಕಾಲದಲ್ಲೇ ರೂಪುಗೊಂಡಿದ್ದಿತೆಂಬ ಅಂಶ ಬೆಳಕಿಗೆ ಬಂದಂತಾಗಿದೆ.

ಜಿಗುನಿ ಮರುಳದೇವರ ಕೃತಿಗಳು: (ಸಂ) ಎಸ್. ವಿದ್ಯಾಶಂಕರ

ಈ ಸಂಪುಟದಲ್ಲಿ ಈ ಕೆಳಕಂಡ 3 ಕೃತಿಗಳಿವೆ.

1) ಜಿಗುನಿ ಮರುಳದೇವರ ಸ್ವರವಚನಗಳು
2) ಮರುಳದೇವರಕಂದ (ಸಟೀಕಾ)
3) ಚಿತ್ಕ್ರಿಯಾ ಸಂಗ್ರಹ

ಜಿಗುನಿ ಮರುಳದೇವ ತೋಂಟದ ಸಿದ್ಧಲಿಂಗರ ಶಿಷ್ಯಸಮುದಾಯದಲ್ಲೊಬ್ಬ. ಈತನಿಗೆ ಪಟ್ಟಣದೇವನೆಂಬ ಮತ್ತೊಂದು ಹೆಸರಿದೆ. ಎಡೆಯೂರುದೇಗುಲದಲ್ಲಿನ ಶಿಲಾಶಾಸನದಲ್ಲಿ ಪಟ್ಟಣದೇವನನ್ನು ಹೆಸರಿಸಿದೆ. ಜಿಗುನಿದೇವ ಗುಮ್ಮಳಾಪುರದ ಸಿಂಹಾಸನಕ್ಕೆ ಕರ್ತನಾದ ವಿರಕ್ತ ಸಿದ್ಧಲಿಂಗದೇವನ ಸಮಕಾಲೀನ. ಕಾಲ ಕ್ರಿ.ಶ. 1580. ಶ್ರೇಷ್ಠಮಟ್ಟದ ಶಿವಾನುಭಾವಿ.

'ನಿಜಗುರುಸಿದ್ಧಶಾಂತ' ಜಿಗುನಿದೇವನ ಸ್ವರವಚನಗಳ ಅಂಕಿತ. ಇವನ ಕೃತಿಯಲ್ಲಿ ರಾಗಸಹಿತವಾದ 156 ಸ್ವರವಚನಗಳಿವೆ. ಇವುಗಳಲ್ಲಿ 28 ಸ್ವರಬೊಲ್ಲಿ ಪ್ರಕಾರಕ್ಕೆ ಸೇರಿವೆ. (ಇವು ರಾಗಸಹಿತವಾದ ಆದರೆ ಪಲ್ಲವಿರಹಿತವಾದ ಕಿರು ರಚನೆಗಳು.) ಸ್ವರವಚನಗಳ ವಸ್ತು ಶಿವಯೋಗ, ಶಿವಾನುಭಾವ ಇತ್ಯಾದಿಗಳಿಗೆ ಸಂಬಂಧಿಸಿದೆ. ಇವನ 148ನೆಯ ಕ್ರಮಾಂಕದ ಸ್ವರಬೊಲ್ಲಿ 'ಲಿಂಗಸ್ತೋತ್ರ ಷಟ್ಪದಿ' ಎಂಬ ಸಂಕಲನದಲ್ಲಿ 66ನೆಯದಾಗಿ ಉಲ್ಲೇಖವಾಗಿದೆ. [ಕೆ.ಬಿ. 87/2, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು.] ಶ್ರೀ ಜಿ. ಎಂ. ಉಮಾಪತಿಶಾಸ್ತ್ರಿಗಳು ಜಿಗುನಿದೇವನ ಸ್ವರವಚನಗಳು ನಿಜಗುಣಶಿವಯೋಗಿಗಳ 'ಕೈವಲ್ಯಪದ್ಧತಿ' ರಚನೆಯಲ್ಲಿ ಬೀರಿರುವ ಪ್ರಭಾವವನ್ನು ಈಗಾಗಲೇ ತೋರಿಸಿಕೊಟ್ಟಿದ್ದಾರೆ.

ಮರುಳದೇವರ ಕಂದದಲ್ಲಿ 135 ಕಂದಗಳಿವೆ. ಕೃತಿಗೆ 'ಲಿಂಗಾಂಗ ಸಮರಸದ ಕಂದ', 'ಲಿಂಗಸ್ತೋತ್ರದ ಕಂದ'ಗಳೆಂಬ ಇತರ ಹೆಸರುಗಳಿವೆ. ಇಲ್ಲಿನ ಬಹುಪಾಲು ಕಂದಗಳು 'ಪರಮ ಪ್ರಭುವೇ' ಎಂದು ಮುಗಿಯುತ್ತವೆ. ಇಷ್ಟಲಿಂಗಸ್ತುತಿ ಹಾಗೂ ಧಾರ್ಮಿಕ ತತ್ತ್ವ ನಿರೂಪಣೆ ಕೃತಿಯ ವಸ್ತು. ಈ ಕೃತಿಗೆ 2 ಟೀಕೆಗಳಿವೆ. 1) ಪರ್ವತ ಶಿವಯೋಗಿ ಕೃತ. 2) ಅಜ್ಞಾತ ಕೃತ. ಪ್ರಸ್ತುತ ಕೃತಿಯಲ್ಲಿ ಪರ್ವತಶಿವಯೋಗಿ ಕೃತವೆಂದು ಅಚ್ಚಾಗಿರುವ ಟೀಕೆ ಆತನದಲ್ಲ. ಅದು ಅಜ್ಞಾತ ಟೀಕಾಕಾರನದು. ಪರ್ವತ ಶಿವಯೋಗಿಯ ಟೀಕೆ ಅಪೂರ್ಣವಾಗಿ ಲಭಿಸಿದ್ದು ಅಪ್ರಕಟಿತ ಸ್ಥಿತಿಯಲ್ಲಿದೆ. ಮರುಳದೇವರ 36 ಕಂದಗಳನ್ನು 'ಚಿತ್ಕಲಾಲಿಂಗ ಚಿತ್ಪ್ರಣವ ಸಂಯೋಗ ಚಿದಮೃತಸಾರ' ಎಂಬ ಸಂಕಲನಕೃತಿಯಲ್ಲಿ ಉದಾಹರಿಸಿದೆ. ಅಲ್ಲದೆ 'ಮಹಾಲಿಂಗೋದ್ಧರಣೆ'ಯಲ್ಲಿ 24 ಕಂದಗಳನ್ನು ಉದಾಹರಿಸಲಾಗಿದೆ.

ಚಿತ್ಕ್ರಿಯಾ ಸಂಗ್ರಹ ವೀರಶೈವ ತತ್ತ್ವನಿರೂಪಣೆಗೆ ಸಂಬಂಧಿಸಿದ ಕೃತಿ. ಇದರಲ್ಲಿ ಆಗಮ, ಪುರಾಣಾದಿಗಳಿಂದ 210 ಶ್ಲೋಕಗಳನ್ನು ಉಲ್ಲೇಖಿಸಿದೆ. ಇವುಗಳ ನಡುವೆ ಬಸವಾದಿ ಶಿವಶರಣರ 34 ವಚನಗಳಿವೆ. ಕೃತಿಯ ಆದಿಯಲ್ಲಿ ಜಿಗುನಿದೇವ ಚಂದ್ರಶೇಖರ ಗುರುವನ್ನು ಹೆಸರಿಸಿದ್ದಾನೆ.

ಪ್ರಸ್ತಾವನೆಯಲ್ಲಿ ಜಿಗುನಿ ಮರುಳಾರ್ಯನ ಇತಿವೃತ್ತ, ದೇಶ–ಕಾಲಾದಿ ವಿಚಾರ, ಜಿಗುನಿದೇವ–ನಿಜಗುಣ ಶಿವಯೋಗಿಗಳ ಗುರು–ಶಿಷ್ಯ ಸಂಬಂಧ, ಕೃತಿಗಳ ವಸ್ತು, ಹಸ್ತಪ್ರತಿಗಳ ವಿವರಗಳ ಬಗೆಗೆ ವಿವೇಚಿಸಲಾಗಿದೆ.

ಕೃತಿಯ ಕೊನೆಯಲ್ಲಿ ಅರ್ಥಕೋಶ, ಟಿಪ್ಪಣಿಗಳಿವೆ. ಅನಂತರ ಈ ಮುಂದಿನ ಸೂಚಿಗಳಿವೆ.

ಸ್ವರವಚನಗಳ ವರ್ಣಾನುಕ್ರಮಣಿಕೆ
ಮರುಳದೇವರ ಕಂದ [ಅಕಾರಾದಿ]
ಚಿತ್ಕ್ರಿಯಾಸಂಗ್ರಹ [ಸಂಸ್ಕೃತ ಶ್ಲೋಕ–ವೃತ್ತಗಳ ಅಕಾರಾದಿ]

ಚಿತ್ಕ್ರಿಯಾ ಸಂಗ್ರಹದಲ್ಲಿನ ವಚನಗಳ ಆದಿ ಹಾಗು ಅಂಕಿತಗಳು.

ಪು. 246ರಲ್ಲಿ ಅಜಗಣ್ಣನ ವಚನಾಂಕಿತ 'ಅಜಗಣ್ಣನ ತಂದೆ' ಎಂದಿದೆ. ಇದು ತಪ್ಪಾಗಿದ್ದು ಈ ಅಂಕಿತ ಅಜಗಣ್ಣನ ತಂಗಿ ಮುಕ್ತಾಯಕ್ಕನದಾಗಿದೆ. ಕೆಲವು ಕಂದಗಳಲ್ಲಿ ಛಂದೋದೋಷಗಳಿವೆ.

ಸ್ವರವಚನಗಳಿಗೆ 2 ಹಸ್ತಪ್ರತಿ, ಕಂದಕ್ಕೆ 3 ಪ್ರತಿ, ಟೀಕೆಗೆ 1 ಹಸ್ತಪ್ರತಿ, ಚಿತ್ಕ್ರಿಯಾಸಂಗ್ರಹಕ್ಕೆ 2 ಹಸ್ತಪ್ರತಿಗಳನ್ನು ಬಳಸಿಕೊಳ್ಳಲಾಗಿದೆ.

ಅದ್ವೈತಾನಂದದ ವಚನಗಳು (ಸಂ.) ಬಿ. ಆರ್. ಹಿರೇಮಠ್

ಅದ್ವೈತಾನಂದವ ವಚನಗಳು (ಅ.ವ.) ವಚನ ಸಂಕಲನ ಪ್ರಕಾರಕ್ಕೆ ಸಂಬಂಧಿಸಿದ ಕೃತಿ. ಸಂಕಲನಕಾರ ಅಜ್ಞಾತ. ಇದರಲ್ಲಿ ವಿದ್ಯಾವಾದ ನಿರಸನ ಸ್ಥಲ ದಿಂದ ನಿರವಯಸ್ಥಲದವರೆಗೆ 17 ಸ್ಥಲಗಳಿವೆ. ಇಲ್ಲಿರುವ 740 ವಚನಗಳಲ್ಲಿ 13 ವಚನಗಳು ಪುನರುಕ್ತವಾಗಿದ್ದು ಅವನ್ನು ಕಳೆದರೆ ಇಲ್ಲಿನ ವಚನ ಸಂಖ್ಯೆ 727 ಆಗುತ್ತದೆ. ಉದಾಹರಿಸಿರುವ ವಚನಕಾರ/ಕಾರ್ತಿಯರ ಒಟ್ಟು ಮೊತ್ತ 55. ಡೋಹರಕಕ್ಕ, ಸಕಲೇಶಮಾದರಸ, ಜೇಡರದಾಸಿಮಯ್ಯಾದಿಗಳಿಂದ ಹಿಡಿದು ತೋಂಟದ ಸಿದ್ಧಲಿಂಗಯತಿ, ಸ್ವತಂತ್ರ ಸಿದ್ಧಲಿಂಗೇಶ್ವರರವರೆಗಿನ ಕಾಲಮಾನ ದಲ್ಲಿ (ಅಂದರೆ ಹನ್ನೆರಡನೆಯ ಶತಮಾನದ ಆದಿಯಿಂದ-ಹದಿನಾರನೆಯ ಶತ ಮಾನದ ಅಂತ್ಯದವರೆಗೆ) ರಚಿತವಾದ ವಚನಗಳನ್ನು ಈ ಸಂಕಲನ ಒಳಗೊಂಡಿವೆ. ಸಂಪಾದಕರು ಸಂಕಲನದ ಕಾಲವನ್ನು 'ಕ್ರಿ.ಶ. ಸು. 1580-1600 ಎಂದು ಈಗಿನ ಮಟ್ಟಿಗೆ ನಿರ್ಧರಿಸಬಹುದಾಗಿದೆ' ಎಂದಿದ್ದಾರೆ.

ಪ್ರಸ್ತಾವನೆಯಲ್ಲಿ ಸಂಕಲನದ ಸ್ವರೂಪ, ಕಾಲ, ಶೀರ್ಷಿಕೆಗಳ ಬಗೆಗೆ ತಾವು ನಿರ್ವಹಿಸಿರುವ ರೀತಿ, ಸ್ಥಲ ಹಾಗು ವಚನಕಾರರ ಉಲ್ಲೇಖ. ಅಂಕಿತ ಪಲ್ಲಟ ಸಮಸ್ಯೆ, ಪುನರುಕ್ತ ವಚನಗಳ ಸಂಪಾದಿಸಂಖ್ಯೆ ಹಾಗೂ ಹಸ್ತಪ್ರತಿಯ ಬಗೆಗೆ ವಿವೇಚಿಸಿದ್ದಾರೆ.

ವಚನಕಾರರು-ಅಂಕಿತ-ವಚನಗಳ ಸಂಖ್ಯೆ (ಪು. 173) ವಿಭಾಗದಲ್ಲಿ 5 ವಚನಾಂಕಿತಗಳ ಕರ್ತೃಗಳ ಮುಂದೆ ಪ್ರಶ್ನಾರ್ಥಕ ಚಿಹ್ನೆಯಿದೆ. 640ನೆಯ ವಚನ ಕರ್ತೃ ಕೀಲಾರದ ಭೀಮಣ್ಣ. (ಅಂ. ಕಾಲಕರ್ಮವಿರಹಿತ ತ್ರಿಪುರಾಂತಕ ಲಿಂಗ) 441ನೆಯ ವಚನಕಾರ್ತಿ ದಸರಯ್ಯನ ಹೆಂಡತಿ ವೀರಮ್ಮ. (ಅಂ. ನಿಜಗುರು ಶಾಂತೇಶ್ವರ). 527ನೆಯ ವಚನಕಾರ ಬಾಹೂರ ಬೊಮ್ಮಣ್ಣ. ಉಳಿದ 2 ಅಂಕಿತ ಗಳ ಕರ್ತೃಗಳು ತಿಳಿದಿಲ್ಲ. ಪುಟ 168ರಲ್ಲಿನ ವಚನಕಾರ ಅವಸರದ ರೇಚಣ್ಣ ಎಂದಿರುವುದು ಅವಸರದ ರೇಕಣ್ಣನೆಂದಾಗಬೇಕು.

131ನೆಯ ವಚನ ಮನಸಂದ ಮಾರಿತಂದೆಯದಲ್ಲ. ಇದು ಗುಪ್ತ ಮಂಚಣ್ಣನದು. ಹೀಗಾಗಿ ಅ.ವ.ಗಳಲ್ಲಿ ಉಲ್ಲೇಖವಾಗಿರುವ ಗುಪ್ತ ಮಂಚಣ್ಣನ ವಚನ ಸಂಖ್ಯೆ 3. ಮನಸಂದ ಮಾರಿತಂದೆ ವಚನ 10.

ಏಕೈಕ ಓಲೆ ಪ್ರತಿಯನ್ನು ಆದರಿಸಿ ಪ್ರಸ್ತುತ ಸಂಕಲನ ಮುದ್ರಣಗೊಂಡಿದೆ.

ಅನುಬಂಧದಲ್ಲಿ ವಚನಕಾರರು–ಅಂಕಿತ–ವಚನಗಳ ಸಂಖ್ಯೆ ಮತ್ತು ವಚನಗಳ ಅಕಾರಾದಿಗಳಿವೆ.

ಕೆಲವೆಡೆ ಶಕಟರೇಫದ ಪ್ರಯೋಗ ತಪ್ಪಾಗಿದೆ. ವಚನ ಸಂಖ್ಯೆ-104, 124 299, 491, 498, 503, 623.

ಕ್ವಚಿತ್ತಾಗಿ ಮುದ್ರಣ ದೋಷಗಳು ಉಳಿದಿವೆ. ವಚನ ಸಂಖ್ಯೆ 63, 305, 778.

ಎಳಮಲೆಯ ಗುರುಶಾಂತದೇವರ ವಚನ ಸಂಕಲನಗಳು (ಸಂ) ವೀರಣ್ಣ ರಾಜೂರ

ಎಳಮಲೆ ಗುರುಶಾಂತದೇವ (ಸು. 1675) ಎಡೆಯೂರ ತೋಂಟದ ಸಿದ್ಧಲಿಂಗಸ್ವಾಮಿಗಳ ಪರಂಪರೆಗೆ ಸಂಬಂಧಿಸಿದವನು. ಗುರು ಷಟ್ಸ್ಥಲ ಚಕ್ರವರ್ತಿ ಎನಿಸಿದ ಹರತಾಳ ಚನ್ನಂಜೇದೇವ.

ಪ್ರಸ್ತುತ ಸಂಪುಟದಲ್ಲಿ ಎಳಮಲೆ ಗುರುಶಾಂತದೇವ ಸಂಕಲಿಸಿದ 5 ವಚನ ಸಂಕಲನಗಳಿವೆ.

1. ಷಟ್‌ಸ್ಥಲ ಸ್ತೋತ್ರದ ವಚನಗಳು (130)
2. ಅಷ್ಟಾವರಣದ ವಚನಗಳು (161)
3. ಶರಣ ಸ್ತೋತ್ರದ ವಚನಗಳು (110)
4. ಮಿಶ್ರ ಸ್ತೋತ್ರದ ವಚನಗಳು (108)
5. ಲಿಂಗವಿಕಳಾವಸ್ಥೆಯ ವಚನಗಳು (110)

ಇವುಗಳಲ್ಲಿ ನಾಲ್ಕನೆಯ ವಚನ ಸಂಕಲನ ಆರ್. ನರಸಿಂಹಾಚಾರ್ಯರ ಗಮನಕ್ಕೆ ಬರದೆ ಹೊಸ ಸಂಕಲನವಾಗಿದೆ.

ಸಂಪಾದಕರು ಪ್ರಸ್ತಾವನೆಯಲ್ಲಿ ವಚನ ಸಾಹಿತ್ಯದ ಸ್ವರೂಪ, ಸಂಪಾದನಾ ಸಾಹಿತ್ಯದ ವೈಶಿಷ್ಟ್ಯ, ವಚನ ಸಂಕಲನಗಳ ವೈವಿಧ್ಯ, ಎ. ಗುರುಶಾಂತದೇವರ ಕಾಲ ವಿಚಾರ, ಕೃತಿ ವಿವರ ಹಾಗೂ ಪರಿಷ್ಕರಣ ವಿಧಾನಗಳ ಬಗೆಗೆ ವಿವೇಚಿಸಿದ್ದಾರೆ.

ಈ ಸಂಕಲನಗಳಿಂದ ಈ ಮುಂದಿನ 6 ವಚನಾಂಕಿತಗಳು ಮೊದಲ ಬಾರಿಗೆ ಬೆಳಕಿಗೆ ಬಂದಿವೆ. (ಕರ್ತೃಗಳು ಅಜ್ಞಾತ)

1. ಗುರುವರದ ವಿರೂಪಾಕ್ಷ (ಪು. 51)
2. ಶ್ರೀ ಗುರುಮಲ್ಲೇಶ್ವರಾ (ಪು. 52)
3. ಭಕ್ತಿಪ್ರಿಯ ಸತ್ಯಕರಂಡಮೂರ್ತಿ ಸದಾಶಿವ ಲಿಂಗವೆ (ಪು. 121)
4. ಬಸವಣ್ಣಪ್ರಿಯ ಧರ್ಮೇಶ್ವರಾ (ಪು. 119)
5. ಶ್ರೀ ಬಸವಲಿಂಗಾ (ಪು. 134)
6. ಪರಮಗುರುವೆ ನಂಜುಂಡಶಿವಾ (ಪು. 158)

ಸಾಹಿತ್ಯ ಚರಿತ್ರೆಯ ದೃಷ್ಟಿಯಿಂದ ಇಲ್ಲಿನ ಕೆಲವು ವಚನಗಳು ಗಮನಾರ್ಹವಾಗಿವೆ. ಪು. 26 (ಸಂಖ್ಯೆ 95) ರಲ್ಲಿನ ವಚನದಲ್ಲಿ ಜೇಡರ ದಾಸಿಮಯ್ಯ ದುಗ್ಗಳೆಯನ್ನು ಹೆಸರಿಸಿದ್ದಾನೆ.

ಪು. 115 (ಸಂಖ್ಯೆ 20)ರಲ್ಲಿ ದುಗ್ಗಳೆಯ ವಚನವಿದ್ದು ಅದರಲ್ಲಿ ಬಸವಣ್ಣ ಚೆನ್ನಬಸವಣ್ಣ, ಪ್ರಭುದೇವ, ಮರುಳು ಶಂಕರದೇವರನ್ನು ಹೆಸರಿಸಿದೆ. ಪು. 122 (ಸಂಖ್ಯೆ 48)ರಲ್ಲಿ ಮೆರೆಮಿಂಡಯ್ಯನ ವಚನವಿದೆ. ಇದರಲ್ಲಿ ಆತ ಬಸವಾದಿ ದ್ವಾದಶ ಪ್ರಮಥರನ್ನು ಉಲ್ಲೇಖಿಸಿದ್ದಾನೆ. ಈ ವಚನ ಮೆರೆಮಿಂಡಯ್ಯನ ಕಾಲ ನಿರ್ಣಯಕ್ಕೆ ಖಚಿತವಾದ ಸಾಮಗ್ರಿಯನ್ನೊದಗಿಸಿದೆ.

ಪು. 183ರಲ್ಲಿ ನಿಜಗುರು ಶಾಂತೇಶ್ವರ ಅಂಕಿತದ ಮುಂದೆ ಪ್ರಶ್ನಾರ್ಥಕ ಚಿಹ್ನೆಯಿದೆ. ಈ ವಚನ ದಸರಯ್ಯನ ಪುಣ್ಯಸ್ತ್ರೀ ವೀರಮ್ಮನದು.

ಪ್ರಸ್ತುತ ಸಂಪುಟವನ್ನು 3 ಹಸ್ತಪ್ರತಿಗಳನ್ನು ಬಳಸಿಕೊಂಡು ಸಿದ್ಧಪಡಿಸಲಾಗಿದೆ.

ಅನುಬಂಧವಲ್ಲಿ ವಚನಗಳ ಅಕಾರಾದಿ (ಪ್ರತಿ ಸಂಕಲನಕ್ಕೂ ಬೇರೆಬೇರೆಯಾಗಿ) ವಚನಕಾರರು, ಅಂಕಿತ, ವಚನಸಂಖ್ಯೆ, ಶರಣರನಾಮ ಸೂಚಿ, ಪಾರಿಭಾಷಿಕ ಪದಕೋಶ. ಕಠಿಣಪದಕೋಶಗಳಿವೆ.

ಶಕಟರೇಫದ ಪ್ರಯೋಗ ಕೆಲವೆಡೆ ತಪ್ಪಾಗಿದೆ. ಪು. 137, 106, 152, 50ಇ.

ಕೆಲವೆಡೆ ಅಚ್ಚಿನ ತಪ್ಪುಗಳಾಗಿವೆ. ಪು. 24–85, 24-87, 97-52, 143-1, 144-8, 147-25, 151–47, ಪು. 178, 179, 186.

ಶರಣರ ನೂರೊಂದು ವಚನಗಳು (ಸಂ) ಪ್ರಭುಶಂಕರ

ವಚನಗಳಲ್ಲಿ ಸುವ್ಯಕ್ತವಾಗಿರುವ ಶರಣರ ಜೀವನ ದೃಷ್ಟಿ ಹಾಗೂ ಅನುಭಾವಗಳನ್ನು ಕನ್ನಡೇತರಿಗೆ ಪರಿಚಯ ಮಾಡಿಕೊಡಬೇಕೆಂಬ ಸಂಪಾದಕರ ಸಂಕಲ್ಪವೇ ಈ ಸಂಕಲನದ ಮೂಲ ಪ್ರಚೋದಕ ಶಕ್ತಿ. ಈ ದೃಷ್ಟಿಗನುಗುಣವಾಗಿ ಸರಳವಾದ ಹಾಗೂ ಪಾರಿಭಾಷಿಕ ಶಬ್ದಗಳ ಜಂಜಾಟವಿಲ್ಲದ ವಚನಗಳನ್ನೇ ಆರಿಸಿ ಸಂಕಲಿಸಲಾಗಿದೆ.

ಇಲ್ಲಿ ಉದಾಹರಿಸಿರುವ ವಚನಕಾರ/ಕಾರ್ತಿಯರ ಹೆಸರು ಹಾಗು ವಚನ ಸಂಖ್ಯೆ ಇಂತಿವೆ.



| | |
|---|---|
| ಅಕ್ಕಮಹಾದೇವಿ | (27) |
| ಅಲ್ಲಮಪ್ರಭು | (27) |
| ಬಸವಣ್ಣ | (26) |
| ಅಂಬಿಗರ ಚೌಡಯ್ಯ | (2) |
| ಆಯ್ದಕ್ಕಿ ಮಾರಯ್ಯ | (1) |
| ಉರಿಲಿಂಗ ಪೆದ್ದಿ | (1) |
| ಚೆನ್ನಬಸವಣ್ಣ | (1) |
| ಹಡಪದಪ್ಪಣ್ಣ | (1) |
| ಹಾವಿನ ಹಾಳ ಕಲ್ಲಯ್ಯ | (1) |
| ಮಡಿವಾಳ ಮಾಚಯ್ಯ | (1) |
| ಮುಕ್ತಾಯಕ್ಕ | (3) |
| ಷಣ್ಮುಖಸ್ವಾಮಿ | (4) |
| ಜೇಡರ ದಾಸಿಮಯ್ಯ | (6) |

—ಮೇಲಿನ 13 ಜನ ಶಿವಶರಣ/ಶರಣೆಯರ 101 ವಚನಗಳಿವೆ.

ಮುನ್ನುಡಿಯಲ್ಲಿ ಸಂಪಾದಕರು ಈ ಸಂಕಲನ ರೂಪುಗೊಂಡ ಹಿನ್ನೆಲೆಯನ್ನು ವಿವರಿಸಿದ್ದಾರೆ. ಪ್ರತಿ ವಚನಕಾರ/ಕಾರ್ತಿಯರ ಸಂಕ್ಷೇಪ ಪರಿಚಯವನ್ನು ಮೊದಲು ತಿಳಿಸಿ ಅನಂತರ ಅವರ ವಚನಗಳನ್ನು ಉದಾಹರಿಸಿದೆ. ಹಲವಾರು ಪುಟಗಳ ಕೆಳಗೆ ಆ–ಆ ಪುಟದಲ್ಲಿ ಉದಾಹೃತವಾಗಿರುವ ವಚನಗಳಲ್ಲಿನ ಕಠಿಣ ಪದಗಳಿಗೆ ಅರ್ಥಗಳನ್ನು ಕೊಟ್ಟಿದೆ. ಕೃತಿಯ ಕೊನೆಯಲ್ಲಿ ಗ್ರಂಥ ಋಣ ಹಾಗೂ ಇಲ್ಲಿ ಉಲ್ಲೇಖಗೊಂಡ ಕರ್ತೃಗಳಿಗೆ ಸಂಬಂಧಿಸಿದ ಲೇಖನಗಳನ್ನು ಸೂಚಿಸಿದೆ.

ಕೂಡಲೂರು ಬಸವಲಿಂಗ ಶರಣರ ಸ್ವರ ವಚನಗಳು (ಸಂ) ಶಾಂತರಸ

ಕೂಡಲೂರೇಶ ಅಂಕಿತದ ಸ್ವರ ವಚನಗಳ ಕರ್ತೃ ಕೂಡಲೂರ ಬಸವಲಿಂಗ ಶರಣರು. ಕಲಬುರಗಿ ಜಿಲ್ಲೆ ಯಾದಗಿರಿ ತಾಲ್ಲೂಕ್ ಬಳಿಚಕ್ರದಲ್ಲಿ ಜನಿಸಿದರು. ಮಹಾದೇವಪ್ಪ–ಗಂಗಾಂಬೆ ಇವರ ಅಪ್ಪ–ಅಮ್ಮ. ಇವರ ಕಾಲ ಸುಮಾರು ಹದಿನೆಂಟನೆಯ ಶತಮಾನದ ಕೊನೆಯ ಭಾಗ. ಇವರ ಗದ್ದುಗೆ ಖಾನಾಪುರ (ರಾಯಚೂರು ಜಿಲ್ಲೆ ದೇವದುರ್ಗ ತಾಲ್ಲೂಕ್)ದಲ್ಲಿದೆ.

ಪ್ರಸ್ತುತ ಕೃತಿಯಲ್ಲಿ ಸಂಪಾದಕರು ಕೂ. ಬಸವಲಿಂಗ ಶರಣರ ಸ್ವರ ವಚನಗಳನ್ನು ವಸ್ತುವಿಗನುಗುಣವಾಗಿ 5 ಭಾಗಗಳಲ್ಲಿ ಜೋಡಣೆಗೊಳಿಸಿದ್ದಾರೆ. ಇಲ್ಲಿ ಒಟ್ಟು 124 ಸ್ವರ ವಚನಗಳಿವೆ. ಇವರ ಕೆಲವು ಸ್ವರ ವಚನಗಳ ಆಧ್ಯಾತ್ಮಿಕ ಮೌಲ್ಯದ ಬಗೆಗೆ ಡಾ॥ ಆರ್. ಡಿ. ರಾನಡೆ ಅವರು ಮುಕ್ತ ಕಂಠದಿಂದ ಶ್ಲಾಘಿಸಿದ್ದಾರೆ.

ಸಂಪಾದಕರು ಪ್ರಸ್ತಾವನೆಯಲ್ಲಿ ಸ್ವರ ವಚನಗಳ ಜನಪದ ಸ್ವರೂಪ, ಬಸವಲಿಂಗ ಶರಣರ ಜೀವನ ವಿವರ, ಕಾಲ ವಿಚಾರ, ಹಾಡುಗಳಲ್ಲಿನ ಕಾವ್ಯಾಂಶಗಳು, ಅನುಭಾವ ನಿರೂಪಣೆ, ಸ್ವರ ವಚನಗಳ ರಾಗ–ಛಂದಸ್ಸು, ಸ್ವರ ವಚನ ಪ್ರಕಾರಕ್ಕೆ ಸಂಬಂಧಿಸಿದಂತೆ ಮುಂದೆ ಆಗಬೇಕಾದ ಮೂರು ಮಹತ್ವದ ಕೆಲಸಗಳು ಮತ್ತು ಕೃತಿ ಸಂಸ್ಕರಣಗಳ ಬಗೆಗೆ ವಿವೇಚಿಸಿದ್ದಾರೆ.

ಶಾಂತರಸರು ಪ್ರಸ್ತುತ ಸಂಸ್ಕರಣಕ್ಕೆ 16 ಹಸ್ತಪ್ರತಿಗಳನ್ನು ಉಪಯೋಗಿಸಿಕೊಂಡು 'ದೊರಕಿದ 170 ಹಾಡುಗಳಲ್ಲಿ ಪಾಠ ಸರಿಯಿರದ, ವಿಕೃತಗೊಂಡ 46 ಹಾಡುಗಳನ್ನು ಕೈಬಿಟ್ಟು 124 ಹಾಡುಗಳನ್ನು' ಕೊಟ್ಟಿದ್ದಾರೆ.

ಕೃತಿಯ ಕೊನೆಯಲ್ಲಿ ಸ್ವರ ವಚನಗಳ ಅಕಾರಾದಿ, ಕಠಿಣ ಶಬ್ದಕೋಶ, ಪಾರಿಭಾಷಿಕ ಶಬ್ದಕೋಶಗಳಿವೆ.

ಪುಟ 118ರ ಆದಿಯಲ್ಲಿ ಕೊಟ್ಟಿರುವ ಸ್ವರ ವಚನ ಸಂಖ್ಯೆಗಳು ತಪ್ಪಾಗಿ ಅಚ್ಚಾಗಿವೆ. ಅಲ್ಲಿನ 115, 35, 56, 124 ಕ್ಕೆ ಬದಲಾಗಿ 37, 113, 35, 56 ಆಗಬೇಕಾಗಿದೆ.

ಶ್ರೀ ಗಂಗಾಪುರಾಣ (ಸಂ) ವಾಯ್. ಜಿ. ಸುಣಗಾರ

ಮಲ್ಲಿಕಾರ್ಜುನ ಕವಿ ಶಿವಗಂಗಾಪುರಾಣದ ಕರ್ತೃ. ಕಾಲ ಕ್ರಿ. ಶ, 1535. ಕೃತಿಯಲ್ಲಿ 15 ಸಂಧಿಗಳಿದ್ದು 728 ವಾರ್ಧಕ ಷಟ್ಪದಿಗಳಿವೆ. ಕವಿ ತನ್ನ ವಂಶಾವಳಿ ಹಾಗೂ ಗುರುಪರಂಪರೆಗಳನ್ನು ಕೃತಿಯ ಆದಿಯಲ್ಲಿ ನಿರೂಪಿಸಿದ್ದಾನೆ. ದಕ್ಷಿಣ ಕಾಶಿ ಎಂದು ಹೆಸರಾಗಿರುವ ಶಿವಗಂಗೆಯ ಪೌರಾಣಿಕಮಹಿಮೆ ಕೃತಿಯವಸ್ತು.

ವೀರಣ್ಣ ರಾಜೂರ ಅವರು ಶಿವಗಂಗಾ ಪುರಾಣಕ್ಕೆ ಪ್ರಸ್ತಾವನೆಯನ್ನು ಬರೆದಿದ್ದು ಕವಿಯ ಇತಿವೃತ್ತ. ಕಾಲ. ಮತ, ಕೃತಿ ಸ್ವರೂಪ, ಕೃತಿಯ ಆಕರ, ಕಥಾಸಾರ, ಕೃತಿ ವಿಮರ್ಶೆ ಮತ್ತು ಸಂಪಾದನಾ ಸಾಮಾಗ್ರಿಗಳ ಬಗೆಗೆ ವಿವೇಚಿಸಿದ್ದಾರೆ.

ಶಿವಗಂಗಾ ಪುರಾಣ ಏಕೈಕ ಓಲೆಯ ಪ್ರತಿಯನ್ನು ಆಧರಿಸಿ ಪರಿಷ್ಕೃತವಾಗಿ ಪ್ರಕಟವಾಗಿದೆ, ಕೆಲವು ಗರಿಗಳು ತ್ರುಟಿತವಾಗಿವೆ.

ಕೆಲವು ಪಾಠಗಳ ತಿದ್ದುಪಡಿ ಈ ರೀತಿಯಾಗಬೇಕಾಗಿದೆ.

ಪು. 17-16. ಪಂತದಿ ಭಸಿಕ್ಷೆ — ಪಂತದಿಭಶಿಕ್ಷೆ
ಪು. 67-59 ಬಲವೆತ್ತು — ಒಲವೆತ್ತು
ಪು. 78-38 ವಾಯಸದ — ಪಾಯಸದ
ಪು. 69-68 ರ ಆದಿ ಭಾಗದಲ್ಲಿ [ಮುಡಿ] ಎಂಬ ಪದವಿರಬಹುದು.

ಕೃತಿಯ ಕೊನೆಯ ಅನುಬಂಧದಲ್ಲಿ ಪದ್ಯಗಳ ಅಕಾರಾದಿ, ಕಠಿಣಪದಕೋಶ, ಪುರಾಣಗಳಲ್ಲಿ ಗಂಗೆಯನ್ನು ಕುರಿತು ಬರುವ ಉಲ್ಲೇಖಗಳು, ಗಂಗಾ ನೂರೆಂಟು ನಾಮಾವಳಿ (ಸಂಸ್ಕೃತ), ಗಂಗಾ ಸುಪ್ರಭಾತ, ಶ್ರೀಗಂಗಾ ಅಷ್ಟಕಗಳಿವೆ.

## 2

ಸಿರುಮಣನಾಯಕನ ಸಾಂಗತ್ಯ (ಸಂ) ಎಂ. ಎಂ. ಕಲಬುರ್ಗಿ

ಸಿದ್ಧಕವಿ ಗೊಲ್ಲಸಿರುಮನ ಕೃತಿಯ ಕರ್ತೃ. ತನ್ನನ್ನು 'ಶಿವಕವಿಗಳ ಭೃತ್ಯ' ನೆಂದು ಕರೆದುಕೊಂಡಿದ್ದಾನೆ. ಇದಲ್ಲದೆ ಕವಿಯ ಬಗೆಗೆ ಮತ್ತಾವ ಸಂಗತಿಗಳೂ ತಿಳಿದು ಬಂದಿಲ್ಲ. ಕಾಲದ ಬಗೆಗೆ ಆರ್. ನರಸಿಂಹಾಚಾರ್ಯರು ಸೂಚಿಸಿದ್ದ 'ಸು. 1700' ಅನ್ನು 'ಈಗಿನ ಮಟ್ಟಿಗೆ ಇಟ್ಟುಕೊಳ್ಳಬಹುದು' ಎಂದಿದ್ದಾರೆ ಸಂಪಾದಕರು.

ಬೂದಿಹಾಳ (ತುಮಕೂರು ಜಿಲ್ಲೆ) ಪಾಳೆಯಗಾರ ಗೊಲ್ಲ ಸಿರುಮ ಮತ್ತು ಅವನ ಮಕ್ಕಳು, ಪೆನುಗೊಂಡೆ ನರಸಿಂಹ ಬೂದಿಹಾಳಿನ ಮೇಲೆ ಆಕ್ರಮಣ ಮಾಡಲು, ಹೋರಾಡಿ ರಣರಂಗದಲ್ಲಿ ಪ್ರಾಣತ್ಯಾಗಮಾಡಿದ ಸಂಗತಿ ಕೃತಿಯ ವಸ್ತು.

ಸಿರುಮನಿಗೆ ಸಂಬಂಧಿಸಿದಂತೆ ಕನ್ನಡದಲ್ಲಿ 3 ಸಾಂಗತ್ಯ ಕೃತಿಗಳು ಉಪಲಬ್ಧವಿದ್ದು ಇವುಗಳನ್ನು ಸಿದ್ಧಕವಿ, ಶಿವಲೀಲೆ ವೀರಯ್ಯನ ಮಗ ಮಲ್ಲ ಮತ್ತು ಕೆಂಚಶೆಟ್ಟಿಸುತ ರಾಮ ಬರೆದಿದ್ದಾರೆ.

ಸಿದ್ಧಕವಿಯ ಕೃತಿಯಲ್ಲಿ 5 ಸಂಧಿ 626 ಪದ್ಯಗಳಿವೆ. ಮೊದಲ ಸಂಧಿಯ ಆದಿಯಲ್ಲಿನ 1–6 ಪದ್ಯ ಹಾಗೂ ಏಳನೆಯ ಪದ್ಯದ ಮೊದಲ ಸಾಲು ಲೋಪವಾಗಿದೆ.

ಪ್ರಸ್ತಾವನೆಯಲ್ಲಿ ಸಿರುಮನಿಗೆ ಸಂಬಂಧಿಸಿದ ಕೃತಿಗಳು, ಅವು ದೊರಕುವ ಸ್ಥಳಗಳು, ಕೃತಿಗಳ ಭಿನ್ನ ಹೆಸರುಗಳು ಹಾಗೂ ಕರ್ತೃತ್ವ ಮತ್ತು ಸಿದ್ಧಕವಿಯ ಕಾಲದ ಬಗೆಗೆ ವಿವರಗಳಿವೆ. ಅಲ್ಲದೆ ಮಲ್ಲಕವಿಯ ಕೃತಿಯಲ್ಲಿನ ಹೆಚ್ಚಿನ ಅಂಶವಾದ ಸಿರುಮನ ಪೂರ್ವಜರ ವೃತ್ತಾಂತವನ್ನು ಕೊಡಲಾಗಿದೆ. ಅನಂತರ ಸಿದ್ಧ ಕವಿಯ ಕೃತಿಯ ಕಥಾಸಾರವಿದೆ. ಸಿರುಮನ ನಿವಾಸಸ್ಥಾನವಾದ ಬೂದಿಹಾಳಿನ ಸ್ಥಳ ಪರಿಶೀಲನೆಯ ವಿವರ ಹಾಗೂ ಇತಿಹಾಸದ ಪುನರ್ರಚನೆಯ ಆವಶ್ಯಕತೆಗಳನ್ನು ಸೂಚಿಸಿದೆ. ಕೊನೆಯಲ್ಲಿ ಕೃತಿ ಪರಿಷ್ಕರಣದ ಬಗೆಗೆ ವಿವರಗಳಿವೆ.

ಕೃತಿಯ ಮೊದಲಲ್ಲಿ 4 ಚಿತ್ರಗಳಿವೆ. ಕೃತಿಯ ಅಂತ್ಯದಲ್ಲಿ ವ್ಯಕ್ತಿ ಹಾಗೂ ಸ್ಥಳಗಳನ್ನು ಕುರಿತ ನಾಮ ಸೂಚಿ ಇದೆ :

ಪ್ರಸ್ತಾವನೆ ಪುಟ vi ರಲ್ಲಿ ಹುಲ್ಲೂರು ಶ್ರೀನಿವಾಸ ಜೋಯಿಸರು ಕೆಂಚಶೆಟ್ಟಿಸುತ ರಾಮನ ಕೃತಿಯ ಗದ್ಯಾನುವಾದವನ್ನು ಸಾಹಿತ್ಯ ಪರಿಷತ್ತಿನ ಮೂಲಕ ಪ್ರಕಟಿಸಿದರು ಎಂದಿರುವುದು ತಪ್ಪಾಗಿದೆ. ಅವರು ಗದ್ಯಾನುವಾದವನ್ನು ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು ಪ್ರಕಟಿಸುತ್ತಿದ್ದ 'ಶರಣಸಾಹಿತ್ಯ ಗ್ರಂಥಮಾಲೆ'ಯಲ್ಲಿ ಪ್ರಕಟಿಸಿದ್ದಾರೆ.

ಕೆಲವು ಅಚ್ಚಿನ ದೋಷ ಹಾಗೂ ತಿದ್ದುಪಡಿಗಳನ್ನು ಈ ಮುಂದೆ ಸೂಚಿಸಿದೆ.

| ಸಂಧಿ | | |
|---|---|---|
| | 1 – 36 | ಪೊಳೆವ – ಪೊಡೆವ |
| | 1 – 45 | ಬರಸ – ಬರಸು |
| | 1 – 72 | ತಲೆಯ ಸುರ – ತಲೆಯಸುರ |
| | 1 – 126 | ಭೋಯೆಂದು – ಖೋಯೆಂದು (?) |
| | 3 – 104 | ಸೇರಿ – ಸಾರಿ (?) |
| | 4 – 151 | ನಂಬಿವವರ – ನಂಬಿದವರ |
| | 4 – 154 | ಮುಕ್ಕಳ – ಮಕ್ಕಳ |
| | 4 – 155 | ಕುಳಿತು – ಕಳಿತು (?) |
| | 5 – 1 | ಸಿರಿಮ – ಸಿರುಮ |
| | 5 – 116 | ಭದ್ರಾಸೆನ – ಭದ್ರಾಸನ |
| | 5 – 116 | ಸೋಮೇಶ – ಸೋಮೇಶ |
| | 5 (ಕೊನೆಪದ್ಯ) | ಶಿಪಶರಣ - ಶಿವಶರಣ |

ಅಳಿಯ ಲಿಂಗರಾಜ ವಿರಚಿತ ಗಿರಿಜಾಕಲ್ಯಾಣಗಳು (ಸಂ.) ಜಿ.ಜಿ. ಮಂಜುನಾಥನ್

ಅಳಿಯ ಲಿಂಗರಾಜ ಗಿರಿಜಾಕಲ್ಯಾಣಗಳ ಕರ್ತೃ. ಇವನ ಕಾಲಾವಧಿ 1823–1874. ಕನ್ನಡ–ಸಂಸ್ಕೃತಗಳಲ್ಲಿ ನಿಷ್ಣಾತನಾದ ಇವನಿಗೆ ಉಭಯಕವಿತಾ ವಿಶಾರದ ಎಂಬ ಬಿರುದಿತ್ತು. ಆರಾಧ್ಯದೈವ ವೀರಭದ್ರ. ಚೆನ್ನವೀರದೇಶಿಕ ದೀಕ್ಷಾಗುರು. ಮುಮ್ಮಡಿ ಕೃಷ್ಣರಾಜರ ಮಕ್ಕಳಾದ ದೊಡ್ಡ ಪುಟ್ಟತಾಯಮ್ಮಣ್ಣಿ ಮತ್ತು ಚಿಕ್ಕಪುಟ್ಟತಾಯಮ್ಮಣ್ಣಿಯರನ್ನು ವರಿಸಿ ಅಳಿಯ ಲಿಂಗರಾಜನೆಂದೇ ಪ್ರಸಿದ್ಧನಾದನು. ಹಲವಾರು ವಿದ್ವಾಂಸರಿಗೆ ಆಶ್ರಯದಾತನಾಗಿದ್ದನು, ಜಯ ರಾಯಾಚಾರ್ಯರು ಇವನನ್ನು 'ಅಭಿನವ ಭೋಜ'ನೆಂದು ಹೆಸರಿಸಿದ್ದಾರೆ.

ಅ. ಲಿಂಗರಾಜನ ಕೃತಿ ಸಂಖ್ಯೆಯ ಬಗೆಗೆ ವಿದ್ವಾಂಸರಲ್ಲಿ ಏಕಾಭಿಪ್ರಾಯವಿಲ್ಲ. ಆ ಸಂಖ್ಯೆ 40 ರಿಂದ 60ರವರೆಗೂ ಇದೆ. ಪ್ರಸ್ತುತ ಕೃತಿಗಳ ಸಂಪಾದಕರು ಉಪಲಬ್ಧ ಹಸ್ತಪ್ರತಿಗಳನ್ನು ಪರಿಶೀಲಿಸಿ ಅ. ಲಿಂಗರಾಜ ಸು. 40 ಕೃತಿಗಳನ್ನು ರಚಿಸಿರುವನೆಂಬ ತಾತ್ಕಾಲಿಕ ನಿರ್ಣಯಕ್ಕೆ ಬಂದಿದ್ದು, ಅವನ್ನೆಲ್ಲ ಪೀಠಿಕೆಯಲ್ಲಿ ಹೆಸರಿಸಿದ್ದಾರೆ.

ಗಿರಿಜಾಕಲ್ಯಾಣವನ್ನು ಕುರಿತ ಸಾಂಗತ್ಯ ಹಾಗು ಯಕ್ಷಗಾನದಲ್ಲಿನ ಕೃತಿಗಳು ಈ ಸಂಪುಟದಲ್ಲಿವೆ. ಸಾಂಗತ್ಯ ಕೃತಿಯಲ್ಲಿ 6 ಸಂಧಿ 463 ಪದ್ಯಗಳಿವೆ. ಯಕ್ಷಗಾನದಲ್ಲಿ ವೃತ್ತ, ದ್ವಿಪದೆ, ಷಟ್ಪದಿ, ಸಾಂಗತ್ಯ, ಕಂದ, ಆರ್ಯಗಳಿವೆ. ಅಲ್ಲದೆ ಹಾಡುಗಳನ್ನು ವಿವಿಧರಾಗಗಳಲ್ಲಿ ರಚಿಸಿದೆ.

ಪೀಠಿಕೆಯಲ್ಲಿ ಸಂಪಾದಕರು ಅ. ಲಿಂಗರಾಜನ ಕಾಲದ ಹಿನ್ನೆಲೆ, ಅವನ ಇತಿವೃತ್ತ, ಧಾರ್ಮಿಕ ಮನೋಭಾವ, ಕೃತಿಗಳ ಸಂಖ್ಯಾವಿಚಾರ, ಉಪಲಬ್ಧ ಕೃತಿಗಳು, ಕಥಾಸಾರ (ಪ್ರತ್ಯೇಕ ಪ್ರತ್ಯೇಕವಾಗಿ), ಸ್ಕಾಂದಪುರಾಣ, ಮಹಾಶಿವ ಪುರಾಣಗಳಲ್ಲಿನ ವ್ಯತ್ಯಾಸಗಳು, ಕಾವ್ಯವಿಮರ್ಶೆ, ಹಸ್ತಪ್ರತಿಗಳ ವಿವರಗಳ ಬಗೆಗೆ ವಿವೇಚಿಸಿದ್ದಾರೆ, ಕೃತಿಯಲ್ಲಿ ಅ. ಲಿಂಗರಾಜನ ಭಾವಚಿತ್ರವಿದೆ.

ಸಾಂಗತ್ಯ ಕೃತಿಗೆ ಒಂದು ಪ್ರತಿಯನ್ನು, ಯಕ್ಷಗಾನ ಕೃತಿಗೆ ಎರಡು ಪ್ರತಿಗಳನ್ನು ಬಳಸಿಕೊಂಡು ಸಂಪಾದಿಸಲಾಗಿದೆ.

ಕೆಲವು ಮುದ್ರಣದೋಷಗಳು ಇಂತಿದೆ.

ಪು. 14-35 ನಿತುಂಬಿನಿ—ನಿತಂಬಿನಿ
18-87 ಭಕತ—ಭಕುತ
21-27 ಮದನೆ—ಮದನ
27-8 ಹುಯ್ದು—ಹೊಯ್ದು
38-59 ಪೂಗಿಸಿ—ಪೊಗಿಸಿ

39-74 ನೆರಿಯು—ನೆರಿಗೆಯು
41-104 ದಪನ—ದಾಪನ
45-2 ಸುತ—ನುತ
45-2 ಮೃಗಧರಾ—ವೃಗಧರ
47-37 ಕುಂತುಹರ—ಕಂತುಹರ

ಧ್ರುವಚರಿತ್ರೆ (ಸಂ) ಎಸ್. ಎಸ್. ಲಕ್ಷ್ಮೀನಾರಾಯಣಭಟ್ಟ

ತಿಮ್ಮಪ್ಪದಾಸರು ಧ್ರುವಚರಿತ್ರೆಯ ಕರ್ತೃ. ಇದರೊಡನೆ ಪೂಜಾವಿಧಾನ ಕೀರ್ತನೆಗಳು, ಗುರು ಸ್ತುತಿಪರ ಕೀರ್ತನೆಗಳು, ಪರಬ್ರಹ್ಮಪ್ರಕಾಶಿಕೆ ಮೊದಲಾದ 10 ಕೃತಿಗಳನ್ನು ರಚಿಸಿದ್ದಾರೆ. ಇವರ ಜೀವಿತಾವಧಿ ಹದಿನೆಂಟನೆಯ ಶತಮಾನದ ಉತ್ತರಾರ್ಧ ಹಾಗೂ ಹತ್ತೊಂಬತ್ತನೆಯ ಶತಮಾನದ ಪೂರ್ವಾರ್ಧ. ಕೀರ್ತನೆಗಳಲ್ಲಿ ತಮ್ಮನ್ನು ತಿಮ್ಮದಾಸ, ತರಳ ತಿಮ್ಮದಾಸ ಎಂದು ಕರೆದುಕೊಂಡಿದ್ದಾರೆ.

ಸಾಂಗತ್ಯದಲ್ಲಿ ರಚಿತವಾಗಿರುವ ತಿಮ್ಮಪ್ಪ ದಾಸರ ಧ್ರುವಚರಿತ್ರೆಯಲ್ಲಿ 22 ಸಂಧಿಗಳಿವೆ. ಕೆಲವು ಪದ್ಯಗಳು ಲೋಪವಾಗಿದ್ದು 982 ಪದ್ಯಗಳು ಲಭಿಸಿವೆ. ಪ್ರತಿಸಂಧಿಯ ಕೊನೆಯಲ್ಲಿ 'ವರ ಚಿಕ್ಕನಾಗಪುರದ ವೆಂಕಟೇಶ' ಎಂಬ ಅಂಕಿತವಿದೆ.

ಸಂಸ್ಕೃತ ಭಾಗವತದ ನಾಲ್ಕನೆಯ ಸ್ಕಂಧದಲ್ಲಿನ ಅಧ್ಯಾಯ 8-12ರ ಕಥಾಭಾಗವನ್ನು ತಿಮ್ಮಪ್ಪದಾಸರು 'ವರ್ಣನಾದಿ ವಿವರ ಸಹಿತವಾಗಿ ಹೇಳಿದ್ದಾರೆ.'

ಸಂಪಾದಕರು ಮುನ್ನುಡಿಯಲ್ಲಿ ತಿಮ್ಮಪ್ಪದಾಸರ ಜೀವನವಿಚಾರ, ಕೃತಿಗಳು, ಧ್ರುವನಿಗೆ ಸಂಬಂಧಿಸಿದ ಕನ್ನಡ ಕೃತಿಗಳು, ಸಂಸ್ಕೃತ ಭಾಗವತದಲ್ಲಿ ಧ್ರುವನ ಕಥೆ, ಕನ್ನಡ ಭಾಗವತದಲ್ಲಿನ ಧ್ರುವೋಪಾಖ್ಯಾನ ಹಾಗೂ ವಿಶಿಷ್ಟತೆ, ತಿಮ್ಮಪ್ಪದಾಸರ ಕೃತಿ ಸಮೀಕ್ಷೆ, ಕೃತಿಯಲ್ಲಿನ ಭಾಷಾ ಸಂಬಂಧವಾದ ಕೆಲವು ವೈಲಕ್ಷಣ್ಯಗಳು, ಹಸ್ತಪ್ರತಿವಿಚಾರದ ಬಗೆಗೆ ವಿವೇಚಿಸಿದ್ದಾರೆ. ಕೃತಿಯ ಕೊನೆಯಲ್ಲಿ ಶಬ್ದಕೋಶವಿದೆ.

ಪೀಠಿಕೆ ಪು. 6ರಲ್ಲಿ ಯಕ್ಷಗಾನ ಕೃತಿ ಧ್ರುವಚರಿತ್ರೆಯನ್ನು ಪ್ರಸ್ತಾಪಿಸಿದ್ದು ಆಕೃತಿಯ ಕರ್ತೃ ತಿಳಿದಿಲ್ಲವೆಂದಿದ್ದಾರೆ. ಆಕೃತಿಯಲ್ಲಿನ ಅಂಕಿತ 'ವ್ರಜಪುರಾಧಿಪ ಲೋಕನಾಥನೊಲವಿನಲಿ' ಎಂದಿದೆ. ಈ ಅಂಕಿತದ ಕೃತಿಕಾರ ಹಟ್ಟಿಯಂಗಡಿ ರಾಮಭಟ್ಟ. ಈತನ ಇತರ ರಚನೆಗಳನ್ನು ಆರ್. ನರಸಿಂಹಾಚಾರ್ಯರು 'ಕರ್ಣಾಟಕ ಕವಿ ಚರಿತೆ'ಯ ತೃತೀಯ ಸಂಪುಟದಲ್ಲಿ ಪ್ರಸ್ತಾಪಿಸಿದ್ದಾರೆ.

ಧ್ರುವನ ಬಗೆಗೆ ಕನ್ನಡದಲ್ಲಿ ದೊರೆಯುವ 'ಪೂರ್ಣಪ್ರಮಾಣದ ಏಕಮೇವ ಕನ್ನಡ ಕೃತಿ'ಯನ್ನು ರಚಿಸಿದ ಕೀರ್ತಿ ತಿಮ್ಮಪ್ಪದಾಸರದು.

ಪುಟ ಒಂದರಲ್ಲಿನ ಕಂಸ-ಕಂದವೆಂದಿರಬೇಕು, ಹೀಗೆಯೆ ಪುಟ 3 ಪದ್ಯ 12 ರಲ್ಲಿನ ತೆಗೆಧ - ತೆಗೆದ ಎಂದಾಗಬೇಕಾಗಿದೆ.

ನವಮುಗ್ಧ ಲೀಲೆ (ಸಂ) ಎಸ್. ಬಸವಾರಾಧ್ಯ

ನವಮುಗ್ಧ ಲೀಲೆಯ ಕರ್ತೃಗಳು ಕರಿಸಿದ್ಧೇಂದ್ರ ಹಾಗೂ ಪಗಡದಿನ್ನೆ ನನ್ನಪ್ಪ ದೇವ. ಭಾಮಿನೀ ಷಟ್ಪದಿಯಲ್ಲಿನ ಈ ಕೃತಿಯಲ್ಲಿ 9 ಸಂಧಿ 348 ಪದ್ಯಗಳಿವೆ. ಕೃತಿರಚನಾ ಕಾಲ ಕ್ರಿ.ಶ. 1908. ಕೃತಿಗೆ ನವಮುಗ್ಧ ಚರಿತೆ ಎಂಬ ಮತ್ತೊಂದು ಹೆಸರು ಇದೆ. ಕೃತಿಯ 1–4 ಸಂಧಿಗಳನ್ನು ಕರಿಸಿದ್ಧೇಂದ್ರನೂ, 5–9 ಸಂಧಿಗಳನ್ನು ನನ್ನಪ್ಪದೇವನು ರಚಿಸಿದ್ದಾರೆ. ನನ್ನಪ್ಪದೇವನ ಇತರ ಕೃತಿಗಳನ್ನು ಆರ್. ನರಸಿಂಹಾಚಾರ್ಯರು ‹ಕರ್ಣಾಟಕ ಕವಿಚರಿತೆ'ಯ ತೃತೀಯ ಸಂಪುಟ (1929) ಪು. 469ರಲ್ಲಿ ಹೆಸರಿಸಿದ್ದಾರೆ.

ಕೃತಿಯ ಸಂಪಾದಕರು 'ಪೀಠಿಕೆ'ಯಲ್ಲಿ ಕವಿಗಳ ಇತಿವೃತ್ತ, ಕಾಲವಿಚಾರ, ಕಥಾಸಾರ, ಕಾವ್ಯ ಸಮೀಕ್ಷೆ, ಹಸ್ತಪ್ರತಿಗಳ ವಿವರಗಳ ಬಗೆಗೆ ವಿವೇಚಿಸಿದ್ದಾರೆ.

ನವಮುಗ್ಧ ಲೀಲೆ ಎರಡು ಕಾಗದದ ಹಸ್ತ ಪ್ರತಿಗಳನ್ನು ಆಧರಿಸಿ ಪ್ರಕಟ ವಾಗಿದೆ.

ಪುರಂದರದಾಸರ ಪದಗಳು (ಸಂ) ವಸಂತ ಕುಪ್ಪಗಿ ಮತ್ತು ಬಿ. ಮಂದಾಕಿನಿಬಾಯಿ

ಪುರಂದರದಾಸರ ಪದಗಳು ಬಿ.ಎ. ಪದವಿಯ ಮೂರನೆಯ ವರ್ಷದ ಕನ್ನಡ ಐಚ್ಛಿಕ ವಿಷಯದ ಪಠ್ಯಭಾಗವಾಗಿ ರೂಪುಗೊಂಡ ಕೃತಿ. ಇದರಲ್ಲಿ ದಾಸಶ್ರೇಷ್ಠ ರೆನಿಸಿದ ಪುರಂದರದಾಸರು ರಚಿಸಿದ 36 ಕೀರ್ತನೆಗಳು, 11 ಉಗಾಭೋಗಗಳು ಮತ್ತು 3 ಸುಳಾದಿಗಳನ್ನು ಸಂಗ್ರಹಿಸಲಾಗಿದೆ. ಆದಿಯಲ್ಲಿ ವ್ಯಾಸರಾಯರ ಅನುಗ್ರಹ ಪದವಿದೆ. ಕೀರ್ತನೆಗಳ ರಾಗ-ತಾಳ ನಿರ್ದೇಶವಿಲ್ಲ. ಪಠ್ಯ ಭಾಗದಲ್ಲಿ ಪಾಠಾಂತರಗಳಿಲ್ಲ.

ಬಿ. ಮಂದಾಕಿನಿಬಾಯಿಯವರು ಕೃತಿಯ ಆದಿಯಲ್ಲಿ ಬರೆದಿರುವ 'ದಾಸ ಸಾಹಿತ್ಯ ಮತ್ತು ಪುರಂದರದಾಸರು' ಎಂಬ ಬರಹದಲ್ಲಿ ಕನ್ನಡ ಸಾಹಿತ್ಯದಲ್ಲಿನ ಚಂಪೂಕಾಲ–ವಚನ ಷಟ್ಪದಿಕಾಲ–ಕೀರ್ತನ ಸಾಹಿತ್ಯದ ಬಗೆಗೆ ಪ್ರಸ್ತಾಪಿಸಿದ್ದಾರೆ. ಅನಂತರ ದಾಸಸಾಹಿತ್ಯದ ಉಗಮದ ಬಗೆಗೆ ವಿದ್ವಾಂಸರ ಅಭಿಪ್ರಾಯಗಳನ್ನು ಉದಾಹರಿಸಿದೆ. ಕೀರ್ತನ ಸಾಹಿತ್ಯದ ಇಳಿಮುಖಗಾಲದಲ್ಲಿ ಸ್ತ್ರೀಯರ ಕೊಡುಗೆ ಯನ್ನು ಸೂಚಿಸಿದ್ದಾರೆ. ದಾಸ ಸಾಹಿತ್ಯದ ವಿವಿಧ ಘಟ್ಟಗಳ ಬಗೆಗೆ ಹೇಳಿ ಕೃತಿಗಳ ರಚನೆಯಲ್ಲಿ ಅಭಿವ್ಯಕ್ತವಾಗಿರುವ ವಿಶಾಲ ಮನೋಭಾವವನ್ನು ಸೂಚಿಸಿರುವರು. ಕೊನೆಯಲ್ಲಿ ಪುರಂದರದಾಸರ ಸ್ಥಳ-ಕಾಲಗಳ ಬಗೆಗೆ ತಿಳಿಸಿದ್ದಾರೆ.

ವಸಂತ ಕುಪ್ಪಗಿಯವರು ಬರೆದಿರುವ 'ಪುರಂದರದಾಸರ ಸಾಹಿತ್ಯ ಸಂಪದ' ಬರಹದಲ್ಲಿ ದಾಸರ ಕೀರ್ತನೆಗಳ ಸಾಹಿತ್ಯಮೌಲ್ಯದ ಬಗೆಗೆ ತಮ್ಮ ಅಭಿಪ್ರಾಯ

ವನ್ನು ಸೂಚಿಸಿದ್ದಾರೆ ಕೃತಿಯ ಕೊನೆಯಲ್ಲಿ ಶಬ್ದಾರ್ಥ ಹಾಗೂ ಒಪ್ಪೋಲೆಗಳಿವೆ. ಪಠ್ಯ ಕೃತಿಯಲ್ಲಿ ಈ ಪ್ರಮಾಣದ ಒಪ್ಪೋಲೆ ಅತಿಯೇ ಸರಿ. ಅಲ್ಲಿ ಸೂಚಿಸದ ಕೆಲವು ಇಂತಿವೆ.

ಪು. 10-4 (ಪಂಕ್ತಿ 3) ಮಂಡಳ ವಾಳುವ~ಮಂಡಲವಾಳುವ

ಪು. 34-1 (–,,– 1) ಗಲಿಕೆಂಬುಂದುಗೆ~ಗಲಿಕೆಂಬಂದುಗೆ

ಪು. 39-1 (–,,– 3) ಬಡೆಯೇನು~ಬಡಿಯೆನು (?)

ಪು 43-1 (–,,– 3) ಪೊಜೆ~ಪೂಜೆ

ಪು. 45–2(–,,–1) ವಂದಸು~ವಂದಿಸು

ಯಕ್ಷಗಾನ ಆದಿಪರ್ವ (ಸಂ.) ಎಮ್. ಎ. ಹೆಗಡೆ

ಅಜ್ಞಾತ ಕರ್ತೃ ಕೃತ ಆದಿಪರ್ವ ವ್ಯಾಸಕೃತ ಮಹಾಭಾರತವನ್ನು ಆಧರಿಸಿ ರಚಿತವಾದ ಕೃತಿ. ಇದರಲ್ಲಿ ಪಾಂಡುರಾಜನ ಒಡ್ಡೋಲಗದಿಂದಾರಂಭವಾಗಿ ದ್ರೌಪದಿಯ ವಿವಾಹದವರೆಗಿನ ಕಥೆ ನಿರೂಪಿತವಾಗಿದೆ. ಸುಮಾರು 400 ಪದ್ಯಗಳಿವೆ. ಅಲ್ಲಲ್ಲಿ ವಚನ ರೂಪದಲ್ಲಿನ ಗದ್ಯವಿದೆ.

ಆದಿಪರ್ವದ ಕರ್ತೃವಿನ ಸ್ಥಳ, ಕಾಲ, ಮತಗಳಿಗೆ ಸಂಬಂಧಿಸಿದಂತೆ ಸಂಪಾದಕರ ಅಭಿಪ್ರಾಯವಿಷ್ಟು. ಕರ್ತೃ ಅಜ್ಞಾತ. ಪ್ರಾಚೀನ ಕಾಲದಿಂದಲೂ ಯಕ್ಷಗಾನದ ತವರೆನಿಸಿದ ಗೇರುಸೊಪ್ಪೆ ಸೀಮೆಯ ಭಾಗಕ್ಕೆ ಕವಿ ಸೇರಿದವನಾಗಿದ್ದರೆ ಆಶ್ಚರ್ಯವೇನಿಲ್ಲ. ಕವಿಯು 13 ಅಥವಾ 14ನೆಯ ಶತಮಾನದಲ್ಲಿ ಕೃತಿಯನ್ನು ರಚಿಸಿರಬೇಕು. ಸ್ಮಾರ್ತ ಅಥವಾ ಹವ್ಯಕ ವರ್ಗಕ್ಕೆ ಸೇರಿದ್ದ ಕುಮಾರವ್ಯಾಸನನ್ನು ನೋಡಿದಂತಿಲ್ಲ. ಕಥೆಯಲ್ಲಿ ಅನೇಕ ವ್ಯತ್ಯಾಸಗಳನ್ನು ಗುರುತಿಸಬಹುದು'ಎಂದಿದ್ದಾರೆ. ಅಲ್ಲದೆ ಕೃತಿಯಲ್ಲಿ ಷಟ್ಪದಿ ಹಾಗೂ ವೃತ್ತಗಳ ಬಳಕೆಯಿಲ್ಲದಿರುವುದು, ದ್ವಿಪದಿ ಹಾಗು ವಚನಗಳ ವಿಶೇಷ ಪ್ರಯೋಗವನ್ನು ಗಮನಿಸಿ ಈ ಛಂದಸ್ಸಿನ ಪ್ರಯೋಗಗಳು ಕೃತಿಯ ಪ್ರಾಚೀನತೆಯ ಆಧಾರಗಳೆಂದು ಸೂಚಿಸಿದ್ದಾರೆ.

ಆದರೆ ಕೃತಿಯ ಅಂತ್ಯದಲ್ಲಿನ (ಪುಟ 60) ಪುರಂದರವಿಠಲಾಂಕಿತ ಮಂಗಳ ಕೀರ್ತನೆ ಪುರಂದರದಾಸರ ರಚನೆಗಳಲ್ಲೊಂದೆಂಬ ಅಂಶ ನಿರ್ಧರಿತವಾದರೆ ಕೃತಿಯ ಕಾಲ ವಿಚಾರ ಪುನಃ ಪರಿಶೀಲನೆಗೆ ಈಡಾಗುತ್ತದೆಂಬುದರಲ್ಲಿ ಸಂಶಯವಿಲ್ಲ.

ಇಲ್ಲಿನ ಹಾಡುಗಳಿಗೆ ಮಾರವಿ, ಮಧು ಮಾಧವಿ, ಕೇತಾರಗೌಳ, ಪಾಪಿ ಮೊದಲಾದ 17 ರಾಗಗಳನ್ನು ಬಳಸಲಾಗಿದೆ. ಅಲ್ಲದೆ ದ್ವಿಪದಿ, ಕಂದ, ಚೂರ್ಣಿಕೆ, ಪಂಚಕಗಳಿವೆ.

ಆದಿಪರ್ವ ಯಕ್ಷಗಾನ ಕೃತಿಯನ್ನು ಏಕೈಕ ತಾಡವೋಲೆ ಪ್ರತಿಯಿಂದ ಸಂಪಾದಿಸಿ ಪ್ರಕಟಿಸಲಾಗಿದೆ. ಕೃತಿಯು ಕೊನೆಯಲ್ಲಿ ಬಳಕೆಗೊಂಡ ರಾಗ ತಾಳಗಳನ್ನು-ಸೂಚಿಸಿದೆ.

# ಸಂಶೋಧನೆ

**ಕೆ. ಪಿ. ಭಟ್**

ಸರ್ವಜ್ಞನ ಸಮಾಜದರ್ಶನ ಮತ್ತು ಸಾಹಿತ್ಯ ತತ್ತ್ವ– (ಎಂ. ಅಕ್ಬರ ಅಲಿ)

ಸರ್ವಜ್ಞನ ವಚನಗಳ ವಿವರವಾದ ಅಧ್ಯಯನವನ್ನೊಳಗೊಂಡ ಕೃತಿಯಿದು. ಇದರಲ್ಲಿಯ ಏಳು ಒಳವಿಭಾಗಗಳು ಹೀಗಿವೆ: ಪ್ರಸ್ತಾವನೆ, ಅಧ್ಯಯನದ ಆಡಿಪಾಯ, ಪ್ರೇರಣಾಸ್ರೋತ, ಸಮಾಜ ವಿಮರ್ಶೆ, ಜೀವನ ಜಿಜ್ಞಾಸೆ. ಸಾಹಿತ್ಯ ತತ್ತ್ವ ಹಾಗೂ ಸಮಾರೋಪ. ಈ ಅಧ್ಯಯನಕ್ಕಾಗಿ ಲೇಖಕರು ಉತ್ತಂಗಿಯಂವರಿಂದ ಸಂಪಾದಿತವಾದ ಸರ್ವಜ್ಞನ ವಚನಗಳ ಸಂಕಲನವನ್ನು ಆಧರಿಸಿದ್ದಾರೆ. ಸರ್ವಜ್ಞನ ವಚನಗಳಾವವು? ಅವುಗಳ ಸಂಖ್ಯೆ ಎಷ್ಟು? ಅವನ ಕಾಲ ಯಾವುದು?— ಇವುಗಳ ಬಗೆಗೆ ಸಾಕಷ್ಟು ವಾದವಿವಾದಗಳಾಗಿವೆ. ಭಿನ್ನಾಭಿಪ್ರಾಯಗಳು ಹಾಗೆಯೇ ಉಳಿದಿವೆ. ಎಲ್. ಬಸವರಾಜು ಅವರು ಸಂಪಾದಿಸಿದ 'ಪರಮಾರ್ಥ' ಸಂಗ್ರಹ ಹೊರಬಂದಮೇಲೆ ಈ ಗೊಂದಲ ಇನ್ನಷ್ಟು ಹೆಚ್ಚಾಗಿದೆ. ಅಲಿಯಂವರು ಪರಮಾರ್ಥ ಎಂಬ ಅಂಕಿತವನ್ನಾಗಲೀ ಬಸವರಾಜು ಅವರು ಸೂಚಿಸಿದ ಕಾಲವನ್ನಾಗಲೀ ಒಪ್ಪಿಲ್ಲ. ವಿರತ ಮಹಲಿಂಗನ (ಕಾಲ ಕ್ರಿ.ಶ. 1504) ಹಿರಿಯ ಸಮಕಾಲೀನನಾದ ಸರ್ವಜ್ಞನ ಕಾಲ ಕ್ರಿ.ಶ. ಸು. 1500 ಎಂದು ಎಸ್. ಶಿವಣ್ಣನವರು ಸೂಚಿಸಿದ್ದಾರೆ. ಇಲ್ಲಿ ಹಿರಿಯ ಎಂಬುದನ್ನು ಒಂದು ತಲೆಮಾರಿನಷ್ಟು ಹಿರಿಯ ಎಂದಿಟ್ಟುಕೊಂಡು ಅಕ್ಬರ ಅಲಿಯಂವರು ಅವನ ಕಾಲವನ್ನು ಕ್ರಿ. ಶ. 1475 ರಷ್ಟು ಹಿಂದೆ ತಳ್ಳಿದ್ದಾರೆ. ಈ ಊಹೆಗೆ ಹೆಚ್ಚಿನ ಸಮರ್ಥನೆಯೇನೂ ಇಲ್ಲ.

ಸರ್ವಜ್ಞ ಬ್ರಾಹ್ಮಣನೊಬ್ಬನಿಂದ ಕುಂಬಾರ ಹೆಂಗಸಿನಲ್ಲಿ ಜನಿಸಿದವನು ಎಂಬುದು ದಂತಕಥೆಯಾದರೂ ಅವನ ಜನ್ಮ ಅಸಾಂಪ್ರದಾಯಕವಾದದ್ದಿರಬೇಕೆಂಬ ಉತ್ತಂಗಿಯವರ ಹಾಗೂ ಮುಗಳಿಯವರ ನಿಲುವನ್ನು ಲೇಖಕರು ಒಪ್ಪಿದ್ದಾರೆ. ಈ ಸಂಬಂಧವಾಗಿ "ಹಲವು ಮಕ್ಕಳ ತಂದೆ। ತಲೆಯಲ್ಲಿ ಜುಟ್ಟವಗೆ। ಸಲೆ ಗಳಿಗೆ ಜಾವ ಪರಿಪವನ ಹೆಂಡತಿಗೆ। ಮೊಲೆಯಿಲ್ಲ ನೋಡ ಸರ್ವಜ್ಞ" ಎಂಬ ವಚನ ಬ್ರಾಹ್ಮಣನ ಹೆಂಡತಿ(?)ಯಿಂದ ಜನಿಸಿದ ಸರ್ವಜ್ಞನಿಗೆ ತಾಯಿಯ ಪ್ರೀತಿ-ವಾತ್ಸಲ್ಯಗಳು ಸಿಗಲಿಲ್ಲ (ಮೊಲೆಯಿಲ್ಲ) ಎಂಬ ಅರ್ಥ ಕೊಡುತ್ತದೆ ಎಂದು ಲೇಖಕರು ಹೇಳಿರುವುದು ವಿಚಾರಣೀಯವಾಗಿದೆ. "ಸರ್ವಜ್ಞನ ಜೀವನದಲ್ಲಿಯ ಈ ಪ್ರಮುಖ ಪ್ರಸಂಗ

(ಅಸಾಂಪ್ರದಾಯಿಕ ಜನ್ಮ) ಆತನ ಮನೋಧರ್ಮದ ಮೂಲಸ್ರೋತವಾಗಿದೆ" (ಪು. 31). ಸರ್ವಜ್ಞನ ವಚನಗಳ ಹಿಂದಿರುವ ಕಟುವಾದ ವಿಡಂಬನೆಗಳಿಗೆ ಅವನಲ್ಲಿರುವ ಕೀಳರಿಮೆಯೇ ಕಾರಣವಾಗಿದೆ ಎಂಬ ಲೇಖಕರ ಅಭಿಪ್ರಾಯ ಸರ್ವಜ್ಞನ ವಚನಗಳನ್ನು ಅರ್ಥೈಸುವುದಕ್ಕೆ ಉತ್ತಮವಾದ ನಿಲುವೊಂದನ್ನು ಸೂಚಿಸುತ್ತದೆ. ಆದರೆ ಸಮಸ್ಯೆಯಿರುವುದು ಮೇಲಿನ (ಹಾಗೂ ಇತರ) ವಚನ ಸರ್ವಜ್ಞನದೇ ಎಂದಾಗಲೀ ಅದು ಆತನನ್ನೇ ಕುರಿತದ್ದು ಎಂದಾಗಲೀ ಖಚಿತವಾಗಿ ಹೇಳಲು ಸಾಧ್ಯವಾಗದಿರುವುದು. ಕೃತಿಯ ಮೂರುಮತ್ತು ನಾಲ್ಕನೆಯ ಅಧ್ಯಾಯಗಳಲ್ಲಿ ಸರ್ವಜ್ಞನ ವಚನಗಳನ್ನು ವಿವರ್ಶೆಮಾಡುವಾಗ ವಿಷಯಗಳನ್ನುಸರಿಸಿ ಮತ, ಜಾತಿ, ಹೆಣ್ಣು, ಹೊನ್ನು, ಜೀವನಸ್ವರೂಪ–ಇತ್ಯಾದಿ ಸಾಂಪ್ರದಾಯಕವಾದ ವಿಂಗಡಣೆಯನ್ನು ಮಾಡಿಕೊಳ್ಳಲಾಗಿದೆ. ಇಲ್ಲಿಯ ವಿವರಣೆಗಳಲ್ಲಿ ಹೊಸದೇನೂ ತೋರುವುದಿಲ್ಲ. "ಸರ್ವಜ್ಞನ ಖಂಡನೆ–ವಿಡಂಬನೆಗಳ ಹಿಂದೆ ಹೇಸಿದ, ರೋಸಿದ ಸಾತ್ವಿಕ ಚೇತನದ ಪ್ರತಿಭಟನೆ ಮಾತ್ರ ಇದೆ, ಪ್ರತೀಕಾರ ಭಾಗ ಇಲ್ಲ" (ಪು. 33) ಎನ್ನಲಾಗಿದೆ. ಆದರೆ ಸಾಹಿತ್ಯದ ವಿಷಯದಲ್ಲಿ, ಪ್ರತೀಕಾರ ಎಂಬ ಮಾತಿಗೆ ಅರ್ಥವಿಲ್ಲ ಅಥವಾ ಅದು ಪ್ರತಿಭಟನೆಗಿಂತ ಬೇರೆಯಲ್ಲ. ಸಾಹಿತ್ಯಸತ್ವ ಎಂಬ ಭಾಗದಲ್ಲಿ ಅಲಂಕಾರ, ರೂಪಕ, ಪ್ರಾಸ, ಇತ್ಯಾದಿಗಳನ್ನು ಬಳಸಿಕೊಂಡದ್ದರ ಬಗೆಗಿನ ವಿವರಣೆಗಳಿವೆ. ಕೊನೆಯಲ್ಲಿ ಕಾವ್ಯಶಿಲ್ಪವೆಂಬ ಒಳಶೀರ್ಷಿಕೆಯಲ್ಲಿ ಸರ್ವಜ್ಞನ ವಚನಗಳಲ್ಲಿ ಕಾವ್ಯಬಂಧವಿದೆಯೆಂಬುದನ್ನು ತೋರಿಸಲು ಪ್ರಯತ್ನಿಸಲಾಗಿದೆಯಾದರೂ ಅದು ಮನವೊಪ್ಪುವಂಥದಲ್ಲ.

ಈ ಸಂಬಂಧವಾಗಿ

"ತಂತ್ರಿವಾದ್ಯವು ಲೇಸು। ಮಂತ್ರಿಯು ಕೆಳೆ ಲೇಸು।
ಯಂತ್ರವಾಹಕನ ದಯೆ ಲೇಸು। ಜಗದಿ
ಸ್ವಾತಂತ್ರ್ಯವೆ ಲೇಸು ಸರ್ವಜ್ಞ ॥"

ಎಂಬ ವಚನಕ್ಕೆ ನೀಡಿದ ವಿವರಣೆ ಸರಿಯಿಲ್ಲವೆನಿಸುತ್ತದೆ. ಕೃತಿಯ ಕೊನೆಯಲ್ಲಿ ಸರ್ವಜ್ಞನ ವಚನಗಳನ್ನು ವೇಮನ ಹಾಗೂ ತಿರುವಳ್ಳುವರ್ ಸಾಹಿತ್ಯಗಳ ಜೊತೆಗೆ ಹೋಲಿಸಿದೆ ಹಾಗೂ ಸರ್ವಜ್ಞನ ವಚನಗಳು ಇಂದು ಎಷ್ಟರಮಟ್ಟಿಗೆ ಸಂಗತ?— ಎಂದು ಚರ್ಚಿಸಿದೆ. ಒಟ್ಟಿನಲ್ಲಿ ಸರ್ವಜ್ಞನ ವಚನಗಳಲ್ಲಿ ಜೀವನ-ಸಮಾಜ ಸಂಬಂಧಿಯಾದ ಎಲ್ಲ ಸಂಗತಿಗಳೂ ಒಳಗೊಂಡಿವೆ ಹಾಗೂ ಇದರಿಂದಾಗಿ ಈ ವಚನಗಳು ಇಂದೂ ಮೌಲಿಕವಾಗಿವೆ ಎಂಬುದನ್ನು ಹೇಳಲಾಗಿದೆ. ಆದರೆ ಈ ಅಭಿಪ್ರಾಯ ಹೊಸದೇನಲ್ಲ. ಆದರೆ ಸರ್ವಜ್ಞನ ವಚನಗಳನ್ನು ಎತ್ತಿಕೊಂಡಾಗ ಗಮನಿಸಬೇಕಾದ ಕೆಲವು ಸಂಗತಿಗಳಿವೆ : ಒಂದು, ಆತ ದೇಸಿ ಪರಂಪರೆಯ ಕವಿ. ಆದ್ದರಿಂದ ಆ ನೆಲೆಯಿಂದಲೇ ವಚನಗಳ ಇತಿ–ಮಿತಿಗಳನ್ನು ಚರ್ಚಿಸುವುದೊಳಿತು. ಎರಡು,

ಆತ ಸಾಮಾನ್ಯರಂತೆ ಸಾಂಪ್ರದಾಯಿಕ-ಸಮಾಜದೊಳಗಿದ್ದು ಬರೆದವನಾಗಿರದೆ (ಸಪ್ಪದ ನಂಬಿಕೆಯಂತೆ) ಸಮಾಜದಿಂದ ದೂರ ಸಿಡಿದು ನಿಂತವನು. ಇದರಿಂದಾಗಿ ಅವನ ಧೋರಣೆ ಉದಾರವೂ ವೈಚಾರಿಕವೂ ಆಗುವುದು ಸಾಧ್ಯವಾಗಿದೆ. ಮೂರ ನೆಯದಾಗಿ, ಸರ್ವಜ್ಞ ಯಾವುದೇ ಒಂದು ನಿರ್ದಿಷ್ಟವಾದ ಕಥೆಯನ್ನವಲಂಬಿಸಿಲ್ಲ. ವಿಷಯದ ಹರಹು ಹೆಚ್ಚಾಗಿರುವುದು ಸಾಧ್ಯವಾಗಿರುವುದಕ್ಕೆ ಮುಖ್ಯ ಕಾರಣ ಇದು. ಈ ಸಂಗತಿ ಅವನ ವಚನಗಳ ಒಂದು ಮಿತಿ ಕೂಡ. ಅವನ ಆಲೋಚನೆ ಗಳಿಗೆ ಒಟ್ಟಿನ ಸುಸಂಬದ್ಧವಾದ ಆಕಾರವಿದ್ದಂತಿಲ್ಲ ಹಾಗೂ ಇದಕ್ಕೆ ಕಾರಣ ಮೇಲೆ ಹೇಳಿದುದೇ. ಈ ಮೇಲೆ ಹೇಳಿದ ಮೂರೂ ಸಂಗತಿಗಳು ಪರಸ್ಪರ ಪೂರಕವಾಗಿವೆ ಎಂಬುದನ್ನು ಮರೆಯುವಂತಿಲ್ಲ.

ನಾಗಚಂದ್ರ, ಒಂದು ಅಧ್ಯಯನ – (ವಿಜಯಾ ದಬ್ಬೆ)

ನಾಗಚಂದ್ರನ ವ್ಯಕ್ತಿವಿಚಾರ ಹಾಗೂ ಅವನ ಎರಡು ಕಾವ್ಯಗಳ ಆಳವಾದ ಅಧ್ಯಯನದ ಫಲವೇ ಈ ಕೃತಿ. ಇಲ್ಲಿಯ ನಾಲ್ಕು ಅಧ್ಯಾಯಗಳಲ್ಲಿ ಮೊದಲನೆ ಯದು ಕವಿಯ ಕಾಲ, ಜೀವನ, ಸ್ಥಳ ಮೊದಲಾದ ವಿಚಾರಗಳಿಗೆ ಮೀಸಲಾಗಿದೆ. ಕವಿಯ ಕಾಲಕ್ಕೆ ಸಂಬಂಧಿಸಿದಂತೆ ಆವರೆಗೆ ಬಂದ ಅಭಿಪ್ರಾಯಗಳನ್ನು ಚರ್ಚಿಸಿ, ಮುಖ್ಯವಾಗಿ ಬಾಬಾನಗರದ ಶಾಸನವನ್ನಾಧರಿಸಿ ನಾಗಚಂದ್ರನ ಕಾಲವನ್ನು ಕ್ರಿ. ಶ. 1050 ರಿಂದ 1100ರ ಒಳಗೆ ಎಂದಿಟ್ಟುಕೊಳ್ಳಲಾಗಿದೆ. ಹಿಂದಿನ ವಿಜಯಪುರ ಹಾಗೂ ಈಗಿನ ಬಿಜಾಪುರವೇ ಅವನ ಸ್ಥಳವಾಗಿರಬೇಕು ಎಂದು ಹೇಳಲಾಗಿದೆ. ನಾಗಚಂದ್ರನ ಕಾಲದ ಗಡುವು ಹೆಚ್ಚು ಕಡಿಮೆ ಇದೇ ಆದರೂ ಅದನ್ನು ಕುರಿತ ಚರ್ಚೆ ಮುಂದುವರೆಯುತ್ತಲೇ ಇದೆ. ಈಚೆಗೆ ಹಂಪ. ನಾಗರಾಜಯ್ಯನವರು ನಾಗಚಂದ್ರ ಹೆಸರಿಸಿದ ಜೈನ ಸನ್ಯಾಸಿಗಳ ಪರಂಪರೆ ಹಾಗೂ ಕಾಲವನ್ನು ಊಹಿಸಿ, ಈ ಈ ಊಹೆಯನ್ನಾಧರಿಸಿ ನಾಗಚಂದ್ರನ ಜೀವಿತದ ಆದಿ ಅಂತ್ಯಗಳನ್ನು ಸೂಚಿಸಿ ದ್ದಾರೆ. ಇದು ಬೇರೊಂದು ದಿಕ್ಕಿನಿಂದ ಮಾಡಿದ ಪ್ರಯತ್ನ. ಹಾಗೆಯೇ ಈಗಿನ ಬಿಜಾಪುರಕ್ಕೂ ಮಲ್ಲಿನಾಥ ಬಸದಿಗೂ ಸಂಬಂಧವಿಲ್ಲವೆಂದು ತೋರಿಸುವ ಪ್ರಯತ್ನಗಳೂ ಆಗಿವೆ. ಆದ್ದರಿಂದ ನಾಗಚಂದ್ರನ ಸ್ಥಳವನ್ನು ಕುರಿತ ಪ್ರಶ್ನೆ ಹಾಗೆಯೇ ಉಳಿದಿದೆ. ನಾಗಚಂದ್ರನ ಎರಡು ಕಾವ್ಯಗಳಾದ ಮಲ್ಲಿನಾಥಪುರಾಣ ಹಾಗೂ ರಾಮಚಂದ್ರಚರಿತಪುರಾಣ ಅಥವಾ ಪಂಪರಾಮಾಯಣಗಳನ್ನು ಕುರಿತು ಎರಡು ಪ್ರತ್ಯೇಕ ಅಧ್ಯಾಯಗಳಲ್ಲಿ ಚರ್ಚಿಸಲಾಗಿದೆ. ಮಲ್ಲಿನಾಥ ಪುರಾಣವೇ ಮೊದಲು ರಚನೆಯಾದ ಕಾವ್ಯ ಎಂದು ಈ ಮೊದಲೇ ಲೇಖಕಿ ಮಂಡಿಸಿದ ಊಹೆ ಹಾಗೂ ಅದಕ್ಕೆ ಕೊಟ್ಟ ಸಮರ್ಥನೆ ಸರಿಯಾಗಿದೆಯೆಂದೇ ತೋರುತ್ತದೆ. ಮಲ್ಲಿ ನಾಥ ಪುರಾಣ ಹೇಳಿಕೊಳ್ಳುವಂತಹ ಕಾವ್ಯವಲ್ಲವಾದುದರಿಂದ ಲೇಖಕಿಗೆ ಇಲ್ಲಿ ಹೇಳ ಬೇಕಾದುದು ಹೆಚ್ಚಿನದೇನೂ ಇಲ್ಲ. ಪಂಪರಾಮಾಯಣ ಕವಿಯ ಪ್ರತಿಭೆಗೆ ಅವಕಾಶವಿತ್ತ ಕಾವ್ಯ. ಇಲ್ಲಿ ನಾಗಚಂದ್ರ ತನ್ನ ಕವಿತಾಶಕ್ತಿಯನ್ನು ಪ್ರಕಟಪಡಿಸಿ

ಕೊಂಡಿದ್ದಾನೆ. ಪಂಪರಾಮಾಯಣದ ಕೆಲವು ಮುಖ್ಯ ಪ್ರಸಂಗಗಳು ಹಾಗೂ ಪಾತ್ರಗಳನ್ನು ಈ ಅಧ್ಯಾಯದಲ್ಲಿ ವಿಮರ್ಶಿಸಲಾಗಿದೆ. ರಾವಣನ ಮನ ಪರಿವರ್ತನೆಯಾದ ಸಂದರ್ಭದಲ್ಲಿ ಬರುವ "ಕದಡಿದ ಸಲಿಲಂ ತಿಳಿವಂದದೆ ತನ್ನಿಂತಾನೆ ತಿಳಿದ ದಶವದನ" ಎಂಬ ಸಾಲಿನಲ್ಲಿಯ ಉಪಮೆಯನ್ನು ಅತಿಯಾಗಿ ಹಿಂಜಿ, ನೀರಿನಲ್ಲಿ ಕೆಸರು ತಳದಲ್ಲಿ ಉಳಿಯುವಂತೆ ರಾವಣನ ಮನಸ್ಸೂ ಪೂರ್ಣ ಪರಿವರ್ತನೆಗೊಳ್ಳಲಿಲ್ಲ ಎಂಬರ್ಥದ ವಿವರಣೆ ಸರಿಯಲ್ಲವೆನ್ನಿಸುತ್ತದೆ. ಯಾವುದೇ ಹೋಲಿಕೆಕೂಡ ಆಂಶಿಕವಾಗಿ ಮಾತ್ರ ಸರಿಯಿರಲು ಸಾಧ್ಯ. ಪೂರ್ಣ ಹೋಲಿಕೆ ಅಸಾಧ್ಯ. ಇಲ್ಲಿ ಕವಿಯ ಉದ್ದೇಶವೂ ಪರಿವರ್ತನೆಯಾದುದಕ್ಕಿಂತ ಹೆಚ್ಚಿನದೇನನ್ನೂ ಸೂಚಿಸುವುದಿದ್ದಂತಿಲ್ಲ. ಸೀತಾಪರಿತ್ಯಾಗ ಪ್ರಸಂಗವನ್ನು ಕುರಿತಾಗಿ ಹೇಳಿದ "ರಾಮನ ಪ್ರತಿಕ್ರಿಯೆ ಏಕಮುಖವಾದದ್ದು. ಇದೊಂದು ಸಿದ್ಧ ಪ್ರತಿಕ್ರಿಯೆ. ಆತನ ವರ್ತನೆ ಸಮರ್ಥನೀಯವಲ್ಲ" (ಪು. 156) ಎಂಬ ಮಾತೂ ಪ್ರಶ್ನಾರ್ಹವಾಗಿದೆ. ಈ ಪ್ರಸಂಗದಲ್ಲಿಯ ರಾಮನ ವರ್ತನೆ ಮಾನವೀಯವಾದುದಲ್ಲ ಎಂಬ ಅಭಿಪ್ರಾಯ (ಹೆಚ್ಚಿನವರ ವಿಮರ್ಶೆಯೂ ಇದೇ) ನಿಜವಾದುದೇ - ರಾಮನನ್ನು ವೈಯಕ್ತಿಕವಾಗಿ ನೋಡಿದಾಗ. ಆದರೆ ರಾಮನಿಗೆ ಹೆಚ್ಚು ಸಾಮಾಜಿಕವಾದ, ಜವಾಬ್ದಾರಿ ಯುತವಾದ, ರಾಜನಾಗಿ 'ಮಾದರಿ'ಯಾಗಿರಬೇಕಾದ ಆವಶ್ಯಕತೆಯಿತ್ತು ಎಂಬುದನ್ನು ಗಮನಿಸಿದರೆ ಅವನ ವರ್ತನೆಗೆ ಸ್ವಲ್ಪಮಟ್ಟಿನ ವಿನಾಯಿತಿಯನ್ನು ತೋರುವುದು ಸಾಧ್ಯವೋ ಏನೋ. ಕೊನೆಯ ಸಮಾರೋಪ ವಿಭಾಗದಲ್ಲಿ ನಾಗಚಂದ್ರನ ಭಾಷೆ, ಶೈಲಿ, ಇತರ ಕವಿಗಳ ಮೇಲೆ ಆತನ ಪ್ರಭಾವ ಹಾಗೂ ಆತನ ಮೇಲೆ ಇತರರ ಪ್ರಭಾವ ಇತ್ಯಾದಿಗಳನ್ನು ಚರ್ಚಿಸಲಾಗಿದೆ. ನಾಗಚಂದ್ರನ ಭಾಷೆ ಸಾಪೇಕ್ಷವಾಗಿ ಸರಳವಾದುದು ಎಂಬುದನ್ನು ದೃಷ್ಟಾಂತ ಸಹಿತ ತೋರಿಸಲಾಗಿದೆ. ಕೃತಿಯುದ್ದಕ್ಕೂ ಲೇಖಕಿ ತಾಳಿದ ನಿಲುವು ಹಾಗೂ ತೆಗೆದುಕೊಳ್ಳುವ ತೀರ್ಮಾನ ಎಚ್ಚರಿಕೆಯಿಂದ ಕೂಡಿದುವಾಗಿವೆ. ನಾಗಚಂದ್ರನನ್ನು ಕುರಿತ ಅಧ್ಯಯನಕ್ಕೆ ಇದರ ಓದು ಆವಶ್ಯಕವೆನಿಸಿದೆ.

ಹರಿಹರ ಕವಿಯ ಸ್ತ್ರೀಪಾತ್ರದರ್ಶನ-(ಬಿ. ಸಿ. ಜವಳಿ)

ಹರಿಹರ ಕವಿಯ ಕಾವ್ಯಗಳಲ್ಲಿಯ ಸ್ತ್ರೀಪಾತ್ರಗಳ ವಿಮರ್ಶೆ ಈ ಕೃತಿಯ ವಿಷಯ. ಕವಿಯ ಜೀವನ ಚರಿತ್ರೆ, (ಹರಿಹರನವರೆಗೆ) ಭಾರತದಲ್ಲಿ ಸ್ತ್ರೀಯರ ಸ್ಥಾನಮಾನ, ಹರಿಹರನ (ಇನ್ನುಮುಂದೆ ಹ.) ಪೌರಾಣಿಕ ಪಾತ್ರಗಳು, ಹ. ನ ಚಾರಿತ್ರಿಕ ಪಾತ್ರಗಳು, ಪ್ರಿಯತಮೆಯರು, ಗೃಹಿಣಿಯರು, ತಾಯಂದಿರು, ವಿಧವೆ-ವಿರಾಗಿಣಿಯರು, ಹ. ನ ಪಾತ್ರಗಳು ಹಾಗೂ ಇತರೇ ಕವಿಗಳ ಅದೇ ಪಾತ್ರಗಳು, ಹ. ಮತ್ತು ಕಾಲಿದಾಸ, ಹ.ನ ಸ್ತ್ರೀಪಾತ್ರಗಳು ಹಾಗೂ ಶೇಕ್ಸ್‌ಪೀಯರ್ ಹಾಗೂ ಶರಚಂದ್ರ ಹಾಗೂ ಪ್ರೇಮಚಂದ್ರರ ಸ್ತ್ರೀಪಾತ್ರಗಳು ಇವೇ ಮುಂತಾದವು ಈ ಕೃತಿಯೊಳಗಿನ ಅಧ್ಯಾಯಗಳು.

"ಹರಿಹರನು...ಸೃಷ್ಟಿಸಿರುವ ಮಹಿಳೆಯರು ಆಧುನಿಕ ಬದುಕಿಗೆ ಪ್ರೋತ್ಸಾಹ ನೀಡಬಲ್ಲರೋ ಹೇಗೆ ಎಂಬುದನ್ನು ವಿಚಾರಿಸುವುದೂ ಈ ಪ್ರಬಂಧದ ಉದ್ದೇಶವಾಗಿದೆ." (ಪು. 2) "ಕವಿಯ ದರ್ಶನ ಯಾವುದು ಎಂಬುದನ್ನು ತಿಳಿದುಕೊಂಡು ಆ ದರ್ಶನವು ಈ ಪಾತ್ರಗಳಲ್ಲಿ ಯಾವ ರೀತಿಯಲ್ಲಿ ಹೊರಹೊಮ್ಮಿದೆಯೆಂಬುದನ್ನು ತಿಳಿಸಲು ಪ್ರಯತ್ನಿಸಿದ್ದೇನೆ." (ಪು. 4) ಎಂದು ಲೇಖಕರು ತಮ್ಮ ಕೃತಿಯ ಬಗೆಗೆ ತಿಳಿಸಿದ್ದಾರೆ.

ಕೃತಿಯ ಹೆಚ್ಚಿನ ಭಾಗ ಮೇಲೆ ಹೇಳಿದ ರೀತಿಯಲ್ಲಿ ವಿಷಯಗಳನ್ನು ವಿಂಗಡಿಸಿಕೊಂಡು ಕೃತಿಯ ಭಾಗಗಳನ್ನು ದೀರ್ಘವಾಗಿ ಉದ್ಧರಿಸಿ ಅವನ್ನು ಪುನಃ ಸರಳ ಗದ್ಯದಲ್ಲಿ ಹೇಳಿದ 'ವಿವರಣೆ'ಗಳನ್ನು ಒಳಗೊಂಡಿದೆ. "ಇತರ ವಿದ್ವಾಂಸರು ಮಾಡಿದಂತೆ ಬಾಲಕಿಯರು, ಪ್ರಿಯತಮೆಯರು...ಎಂದು ವಿಭಾಗ ಮಾಡಿಕೊಂಡಿರುವುದಲ್ಲದೆ 'ವಿರಾಗಿಣಿಯರು' ಎಂಬುದನ್ನೊಂದು ಹೊಸತಾಗಿ ಸೇರಿಸಿದ್ದೇನೆ. ವೈರಾಗ್ಯ ಭಕ್ತಿಯ ಕೊನೆಯ ಹಂತವಾಗಿರುವುದರಿಂದ, ಹರಿಹರನಿಗೆ ವೈರಾಗ್ಯದಲ್ಲಿ ಆಸಕ್ತಿ ಇರುವುದರಿಂದ ಅಂತಹವನ್ನೊಂದು ಪ್ರತ್ಯೇಕ ವಿಭಾಗದಲ್ಲಿ ವಿವೇಚಿಸಿದ್ದೇನೆ" (ಪು. 6) ಎಂಬ ವಿಂಗಡಣೆಯ ಬಗೆಗಿನ ಹೇಳಿಕೆಯೊಂದನ್ನು ಈ ಸಂದರ್ಭದಲ್ಲಿ ಗಮನಿಸಬಹುದು. ವಿಷಯ ವಿಂಗಡಣೆಗೆ ಇದು ಸರಿಯಾದ ಸಮರ್ಥನೆಯಲ್ಲ ಹಾಗೂ ಇಲ್ಲಿಯ ವಿಂಗಡಣೆ ತೀರ ಸಾಂಪ್ರದಾಯಿಕವಾದುದು ಎಂಬುದನ್ನು ಬೇರೆ ಹೇಳಬೇಕಾಗಿಲ್ಲ. ಒಬ್ಬ ಕವಿಯ ವಸ್ತು ಪಾತ್ರಗಳನ್ನು ಇನ್ನೊಬ್ಬ ಕವಿಯದರೊಡನೆ ಹೋಲಿಸುವಾಗ ಎಂಥಹ ಕಡೆ ಹೋಲಿಕೆ ಅರ್ಥಪೂರ್ಣ, ಉಚಿತ ಎಂಬ ಅರಿವು ವಿಮರ್ಶಕನಿಗಿರುವುದು ಅವಶ್ಯಕ. ಯಾವುದೋ ದೇಶದ, ಯಾವುದೋ ಕಾಲದ ಕವಿಯೊಡನೆ ಹೋಲಿಸಿದರೆ ಅದಕ್ಕೆ ಸಂಬಂಧಿಸಿದಂತೆ ಏನನ್ನು ಹೇಳಬೇಕು ? ಎಷ್ಟು ಹೇಳುವುದು ಸಾಧ್ಯ ? ಈ ಪ್ರಶ್ನೆಗಳನ್ನು ಹಾಕಿಕೊಂಡಿರಬೇಕು. ಅಂತಹ ಯೋಚನೆಗಳೇನೂ ಈ ಕೃತಿಯ ಹಿಂದೆ ತೋರುವುದಿಲ್ಲ. ಮುಕ್ತ ಪ್ರಶಂಸೆಯೇ ಇಲ್ಲಿ ವಿಮರ್ಶೆಯಾಗಿ ಬಂದಿದೆ. (ಪು. 97–98ರಲ್ಲಿ ಕಣ್ವ ಎಂದಿರಬೇಕಾದ ಕಡೆಯಲ್ಲೆಲ್ಲ ಕಶ್ಯಪ ಎಂದಿದೆ. ಇದು ಆಕಸ್ಮಿಕ ದೋಷವೋ ಏನೋ.)

ವಿಜಯನಗರ ಕಾಲದ ಕನ್ನಡ ಸಾಹಿತ್ಯದಲ್ಲಿ ಜನಜೀವನ ಚಿತ್ರ– (ಕೆ. ಶ್ರೀಕಂಠಯ್ಯ)

ವಿಜಯನಗರ ಕಾಲದಲ್ಲಿ ರಚಿತವಾದ ಕೆಲವೊಂದು ಪ್ರಮುಖವಾದ ಹಾಗೂ ಇನ್ನಿತರ ಹಲವಾರು ಗೌಣವಾದ ಸಾಹಿತ್ಯ ಕೃತಿಗಳಲ್ಲಿ ಅಲ್ಲಲ್ಲಿ ಬರುವ ಜನಜೀವನಕ್ಕೆ ಸಂಬಂಧಿಸಿದ ಹೇಳಿಕೆ-ವರ್ಣನೆಗಳನ್ನು ಒತ್ತಟ್ಟಿಗಿರಿಸಿ ಆ ಕಾಲದ ಸಂಸ್ಕೃತಿಯ ಚಿತ್ರಣವನ್ನು ಕಟ್ಟಿಕೊಡುವ ಉದ್ದೇಶ ಇಲ್ಲಿದೆ. ವಿಜಯನಗರ ಕಾಲ ಎನ್ನುವುದು ರಾಜಕೀಯ ಇತಿಹಾಸದಲ್ಲಿ ಒಂದು ಘಟ್ಟವನ್ನು ಸೂಚಿಸುತ್ತದೆಯೇ ಹೊರತು

ಸಾಹಿತ್ಯದ ದೃಷ್ಟಿಯಿಂದ ಉಚಿತವಾದ ವಿಭಜನೆಯಲ್ಲ. ಆದರೆ ಸಂಸ್ಕೃತಿಯ ಚಿತ್ರಣಕ್ಕೆ ಈ ವಿಭಜನೆಯಿಂದ ಅನುಕೂಲ ಅನಾನುಕೂಲದ ಪ್ರಶ್ನೆ ಅಷ್ಟಾಗಿ ಏಳದು ಆಡಳಿತ ವ್ಯವಸ್ಥೆ, ಯುದ್ಧಪದ್ಧತಿ, ಗೃಹಜೀವನ, ಆರ್ಥಿಕವ್ಯವಸ್ಥೆ, ಆಹಾರ-ಪಾನೀಯಗಳು, ವಸ್ತ್ರ ಅಲಂಕಾರಗಳು, ಕ್ರೀಡೆಗಳು ಇತ್ಯಾದಿ ವಿಷಯಕ್ಕೆ ಸಂಬಂಧಿಸಿದಂತೆ ಆ ಕಾಲದ ಸಾಹಿತ್ಯ ಕೃತಿಗಳಲ್ಲಿ ದೊರಕುವ ಮಾಹಿತಿಗಳನ್ನು ಕಲೆಹಾಕಿ ವಿಂಗಡಿಸಿ ವಿವರಿಸಲಾಗಿದೆ. ಸಾಹಿತ್ಯಕೃತಿಗಳಲ್ಲಿಯ ಈ ವಿವರಗಳು ಶಾಸನ, ಬಖೈರು ಮುಂತಾದ ಸಾಹಿತ್ಯೇತರ ದಾಖಲೆಗಳ ಮೂಲಕ ಉಪಲಬ್ಧವಾದ, ಇತಿಹಾಸಕಾರರು ಕಟ್ಟಿಕೊಟ್ಟ ಮಾಹಿತಿ-ವಿವರಣೆಗಳಿಗೆ ಹೇಗೆ ಸರಿಯಾಗಿದೆ ಅಥವಾ ಪೂರಕವಾಗಿದೆ ಎಂಬುದನ್ನು ಅಲ್ಲಲ್ಲಿ ಹೋಲಿಸಿ ತೋರಿಸಲಾಗಿದೆ. ಈ ವಿಷಯದಲ್ಲಿ ಸಾಲೆತೊರೆ ಹಾಗೂ ಟಿ. ವಿ. ಮಹಾಲಿಂಗಂ ಅವರ ಕೃತಿಗಳನ್ನು ಚೆನ್ನಾಗಿ ಬಳಸಿಕೊಳ್ಳಲಾಗಿದೆ. (ಪು. 369ರಲ್ಲಿ 'ಗಡಿಗೆಯ ತುಪ್ಪವಿಕ್ಕ—' ಎಂಬ ಸಾಲಿಗೆ ಗಡಿಗೆಯಲ್ಲಿ ಸಂಗ್ರಹಿಸಿಟ್ಟಿದ್ದರಿಂದ ಉತ್ತಮವಾದ ತುಪ್ಪ ಎಂಬರ್ಥ ಹಚ್ಚಿದ್ದು ಸರಿಯಲ್ಲವೇನೋ. 'ಗಡಿಗೆಯ ತುಪ್ಪ' ಎಂಬುದು ಇಲ್ಲಿ ತುಪ್ಪದ ಪ್ರಮಾಣವನ್ನು ಹೇಳಲು ಬಳಕೆಯಾಗಿದೆಯೆಂದು ತೋರುತ್ತದೆ.) ಆದರೆ ಕೃತಿಯ ವಿವರಗಳನ್ನು ಒಟ್ಟಾಗಿ ನೋಡಿದಾಗ ಸಾಹಿತ್ಯೇತರ ದಾಖಲೆಗಳು ಕೊಡುವ ಐತಿಹಾಸಿಕ ವಿವರಗಳಿಗೆ—ಅವುಗಳನ್ನು ಸಮರ್ಥಿಸುವಂತೆ, ಅಡಿಟಿಪ್ಪಣಿಯೆಂಬಂತೆ ಸಾಹಿತ್ಯಿಕ ಸಾಮಗ್ರಿಗಳನ್ನು ಬಳಸಿಕೊಂಡಂತಿದೆ. ಸಾಹಿತ್ಯಿಕ ವಿವರಗಳೇ ಇಲ್ಲಿ ಪ್ರಧಾನವಾಗಿ ಬರಬೇಕಿತ್ತು ಎಂಬುದು ನಮ್ಮ ಅನಿಸಿಕೆ. ಇದನ್ನುಳಿದರೆ, ಈ ಕೃತಿ ಸಾಕಷ್ಟು ಪರಿಶ್ರಮದ ಫಲ ಎಂಬುದೂ ಸಾಕಷ್ಟು ಮಾಹಿತಿಗಳನ್ನೊಳಗೊಂಡಿದೆ ಎಂಬುದೂ ಉದ್ದಕ್ಕೂ ವ್ಯಕ್ತವಾಗುತ್ತದೆ.

ವಚನ ಸಾಹಿತ್ಯ : ಒಂದು ಸಾಂಸ್ಕೃತಿಕ ಅಧ್ಯಯನ – (ಪಿ. ವಿ. ನಾರಾಯಣ)

ಜೇಡರ ದಾಸಿಮಯ್ಯನಿಂದ ಮೊದಲಾಗಿ ಆದಯ್ಯನವರೆಗಿನ, ವಚನಸಾಹಿತ್ಯದ ಪ್ರಥಮ ಘಟ್ಟದ ಸಾಂಸ್ಕೃತಿಕ ಅಧ್ಯಯನ ಈ ಕೃತಿಯ ಉದ್ದೇಶ. ವಚನಸಾಹಿತ್ಯದ ಜೊತೆಗೆ ಆ ಕಾಲದ ಹಾಗೂ ಆ ಕಾಲಕ್ಕೆ ಹತ್ತಿರವಾದ ಶಾಸನಗಳು ಹಾಗೂ ಇತರ ಕಾವ್ಯಗಳನ್ನು ಇಲ್ಲಿ ಬಳಸಿಕೊಳ್ಳಲಾಗಿದೆ. ಆ ಕಾಲದ ಸಾಮಾಜಿಕ, ರಾಜಕೀಯ, ಆರ್ಥಿಕ ವ್ಯವಸ್ಥೆಗಳು ಕಲೆ, ಮನರಂಜನೆ, ಧರ್ಮ ಇತ್ಯಾದಿಗಳ ಪರಿಚಯವನ್ನು ಮಾಡಿಕೊಡಲಾಗಿದೆ. ಸಾಮಾನ್ಯವಾಗಿ ಸಂಸ್ಕೃತಿಯ ಅಧ್ಯಯನಗಳಲ್ಲಿ ಕಂಡುಬರುವ ಸಾಂಪ್ರದಾಯಿಕವಾದ ವಿಂಗಡಣೆಯನ್ನೇ ಇಲ್ಲಿಯೂ ಅನುಸರಿಸಲಾಗಿದೆ. ಲೇಖಕರ ಪರಿಶ್ರಮದಿಂದಾಗಿ ಈ ಕೃತಿ ವಚನ ಸಾಹಿತ್ಯದಲ್ಲಿ ಹುದುಗಿದ ಸಾಂಸ್ಕೃತಿಕ ವಿವರಗಳನ್ನು ಉತ್ತಮವಾದ ರೀತಿಯಲ್ಲಿ ಪರಿಚಯಿಸುವಂತಾಗಿದೆ. ಈ ನಿಟ್ಟಿನಲ್ಲಿ ಇದು ನಿಜವಾಗಿಯೂ ಒಂದು ಉತ್ತಮ ಸಂಶೋಧನ ಕೃತಿ.

ಕೃತಿಯು ಶೀರ್ಷಿಕೆ ಸೂಚಿಸುವ ವ್ಯಾಪ್ತಿ ಹಾಗೂ ಕೃತಿಯೊಳಗಿನ ವಿವರಗಳಿಗೆ ಸಂಬಂಧಿಸಿದಂತೆ ಒಂದು ಚಿಕ್ಕ ಪ್ರಶ್ನೆ ಏಳಬಹುದು, ಶೀರ್ಷಿಕೆ ವಚನಸಾಹಿತ್ಯದ ಸಾಂಸ್ಕೃತಿಕ ಅಧ್ಯಯನ ಎಂಬರ್ಥದಲ್ಲಿದೆ. ಆದರೆ ಕೃತಿಯೊಳಗಿನ ವಿವರಗಳು ಕೆಲವು ಉದಾ. ಸಂಸ್ಕಾರಗಳು–ವಚನೇತರ ಸಾಹಿತ್ಯಗಳ ಆಧಾರಗಳನ್ನು ಸಾಕಷ್ಟು ಬಳಸಿ ಕೊಂಡಿವೆ. ಇತರೇ ಸಾಮುಗ್ರಿಗಳನ್ನು ಬಳಸಿಕೊಂಡುದಾಗಿ ಲೇಖಕರೂ ಹೇಳಿದ್ದಾರೆ. ಆದ್ದರಿಂದ ಈ ಅಧ್ಯಯನವನ್ನು ವಚನಕಾಲದ ಸಾಂಸ್ಕೃತಿಕ ಅಧ್ಯಯನ ಎಂದಿಟ್ಟು ಕೊಳ್ಳಬಹುದು. ಆದರೆ ವೀರಶೈವೇತರ ಧರ್ಮಗಳ ಬಗೆಗಿನ ವಿಭಾಗದ ಮೊದಲಲ್ಲಿ ವಚನಗಳಲ್ಲಿ ಅಲ್ಲಲ್ಲಿ ಕಂಡುಬರುವ ಇತರ ಧರ್ಮಗಳ ಬಗೆಗಿನ ಉಲ್ಲೇಖಗಳನ್ನಾಧರಿಸಿ ಇತರ ಧರ್ಮಗಳ ವಿಚಾರವನ್ನು ಕಟ್ಟಿಕೊಡುವ ಉದ್ದೇಶ ಹೊಂದಲಾಗಿದೆ ಎನ್ನ ಲಾಗಿದೆ. ಅಂದರೆ ಇದು ವಚನಸಾಹಿತ್ಯದ ಅಧ್ಯಯನ ಮಾತ್ರವಾಗುತ್ತದೆ.

ಲೇಖಕರು ಲಭ್ಯವಿರುವ ಸಾಮಗ್ರಿಗಳನ್ನೆಲ್ಲ ಚೆನ್ನಾಗಿ ಬಳಸಿಕೊಂಡಿದ್ದಾ ರೆಂಬುದು ಕೃತಿಯುದ್ದಕ್ಕೂ ವ್ಯಕ್ತವಾಗುತ್ತದೆ. ಪಿ.ಎಚ್‌ಡಿ. ಪ್ರಬಂಧಗಳ ಸಾಲಿಗೆ ಇದು ನಿಜವಾಗಿಯೂ ಉತ್ತಮವಾದ ಸೇರ್ಪಡೆ.

x x x x

'ಆಧುನಿಕ ಕನ್ನಡ ನಾಟಕ' ಎಂಬ ನಿಬಂಧವನ್ನು ಬರೆದವರು ಕೆ. ಮರುಳಸಿದ್ಧಪ್ಪ. ಇದರ ಹೆಸರೇ ಒಂದು ನಿಶ್ಚಿತ ನಿಲುವನ್ನು ಸೂಚಿಸುವಂತಿದೆಯಷ್ಟೆ. ಕನ್ನಡದಲ್ಲಿ ಹೊಸಗನ್ನಡ ನಾಟಕಗಳು (ಸಂಗೀತ ನಾಟಕವನ್ನು ಬಿಟ್ಟು) ಮುಖ್ಯ ವಾಗಿ ಕೈಲಾಸಂ ಅವರ ಪ್ರಯೋಗಗಳಿಂದ ರೂಪತಾಳಿತೆನ್ನಬಹುದು. ಅಂದರೆ ಸುಮಾರು 1920 ರಿಂದೀಚೆಗೆ ಇದರ ಬೆಳವಣಿಗೆಯು, ವೃತ್ತಿ ನಾಟಕ ಸಂಸ್ಥೆಗಳು ದೂರುವಷ್ಟು ಮಟ್ಟಿಗಾದರೂ, ಒಂದು ಪ್ರಮುಖವಾದ ಕಲೆಯ ಆವಿಷ್ಕಾರ ವಾಗಿಯೇ ಬೆಳೆಯುತ್ತಿದೆ. ಇದರ ಅಭಿವೃದ್ಧಿಗೆ ಕನ್ನಡ ರಂಗಭೂಮಿಯಲ್ಲಿ ಪಾಶ್ಚಾತ್ಯ ಪ್ರಭಾವದಿಂದ ಮೂಡಿಬಂದ ಆಧುನಿಕ ಪ್ರದರ್ಶನಾ ಸಲಕರಣೆಗಳೂ ಕಾರಣವಾಗಿವೆ. ಹೊಸ ನಾಟಕವು ಹೊಸ ಪ್ರೇಕ್ಷಕರನ್ನೂ ಮುಖ್ಯವಾಗಿ ವಿದ್ಯಾ ವಂತರನ್ನೂ ಸಾಮಾಜಿಕ ಕಳಕಳಿ ಉಳ್ಳವರನ್ನೂ ಸೆಳೆದುಕೊಂಡು ಸಿನಿಮಾ ಪ್ರಪಂಚದ ಹಾವಳಿಯನ್ನು ಎದುರಿಸುತ್ತಾ ಬೆಳೆಯುತ್ತಿದೆ. ಇಂತಹ ರೀತಿ ನೀತಿ ಯನ್ನು ಪ್ರದರ್ಶನಗಳ ಮತು ಅಭ್ಯಾಸದ ಪರಿಶ್ರಮದಿಂದ ಮರುಳಸಿದ್ಧಪ್ಪ ನವರು ಒಂದು ವಿಮರ್ಶಾ ಪ್ರಬಂಧವನ್ನು ಈ ಗ್ರಂಥದ ರೂಪದಲ್ಲಿ ಪ್ರಕಟಿಸಿ ದ್ದಾರೆ.

ಡಾಕ್ಟರೇಟಿನ ಪ್ರಬಂಧವೆಂದ ಮೇಲೆ ವಿಷಯದ ಆಮೂಲಾಗ್ರ ಪರಿಶೀಲನೆ ಯಿರುವುದು ಸಹಜವಾಗಿದೆ. ಆದುದರಿಂದ ಇದರ ಪ್ರಾಮುಖ್ಯತೆಯನ್ನು ಎರಡು

ಮುಖ್ಯವಾದ ಕಾರಣಗಳಿಂದ ಗುರುತಿಸಬಹುದು. ನಮ್ಮ ಹೊಸಗನ್ನಡ ನಾಟಕವು ಕನ್ನಡ ರಂಗಭೂಮಿಯ ಹೆಮ್ಮೆಯಂತೆ ಆಗಿರುವಲ್ಲಿ ಇದರ ಸುಮಾರು 60 ವರ್ಷಗಳ ಬೆಳೆಸನ್ನು ಒಂದು ಮೌಲ್ಯ ಪ್ರಧಾನವಾದ ನಿಲುವಿನಿಂದ ಪರಿಶೀಲಿಸಲಾಗಿದೆ. 2. ಕಳೆದ 25 ವರ್ಷಗಳ ಕಾಲವಾದರೂ ಆಧುನಿಕ ನಾಟಕಗಳ ಪ್ರಯೋಗಗಳನ್ನು ಪರಿಶೀಲಿಸುತ್ತಾ ಬಂದವರಾಗಿ ಮರುಳಸಿದ್ಧಪ್ಪ ತಮ್ಮ ಪ್ರಬಂಧದ ಮೂಲಕ ಈ ಕಾಲದ ವಿಮರ್ಶಾ ಧೋರಣೆಯ ಒಂದು ಪ್ರಮುಖ ವಿಚಾರವಂತಿಕೆಯ ಪ್ರತಿನಿಧಿಯೂ ಆಗಿದ್ದಾರೆ. ಈ ಎರಡೂ ಕಾರಣಗಳಿಂದ ಕನ್ನಡ ನಾಟಕದ ಬೆಳವಣಿಗೆಯನ್ನು ಮುಂದಿನ ಪ್ರತಿ ತಲೆಮಾರುಗಳ ವಿದ್ಯಾವಂತರು ಅರ್ಥಮಾಡಿ ಕೊಳ್ಳಲು ಈ ಗ್ರಂಥವು ಒಂದು ಖಚಿತವಾದ ಆಧಾರಗ್ರಂಥವಾಗುತ್ತದೆ.

ಮರುಳಸಿದ್ಧಪ್ಪನವರ ತೀರ್ಪುಗಳೆಲ್ಲವನ್ನು ಬೇರೆಯ ವಿದ್ಯಾವಂತರು ಒಪ್ಪಿಕೊಳ್ಳಲೇಬೇಕಾದುದಿಲ್ಲ. ಆದರೆ ಅವರ ತೀರ್ಪಿನಲ್ಲಿರುವ ಶಿಸ್ತು ಸಂಯಮ ಗಳು ಇದೊಂದು ಅತ್ಯಂತ ಮಹತ್ವಪೂರ್ಣ ಕೃತಿಯನ್ನಾಗಿ ಮಾಡಿದೆ ಯೆಂಬುದಂತೂ ಗಮನಿಸಲೇಬೇಕಾದ ವಿಚಾರವಾಗುತ್ತದೆ.

ಈ ಕೃತಿಯಲ್ಲಿ ನಾಟಕಗಳ ಮಾಮೂಲು ಕಥಾನಕ, ಘಟನೆಗಳು ಮತ್ತು ಉದ್ದಿಶ್ಯಗಳೆಂದು ಬಿಡಿಸಿ ಹೇಳುವುದಕ್ಕೆ ಹೋಗದೆ ಇವುಗಳ ಅಸ್ತಿತ್ವವನ್ನು ಸಾಮಾಜಿಕ ಮತ್ತು ರಾಜಕೀಯ ನಿಲುವಿನಿಂದ ಇವುಗಳ ಯೋಗ್ಯತೆಯೇನೆಂಬು ದನ್ನು ಅಚ್ಚುಕಟ್ಟಾಗಿ ಸಂಯಮದಿಂದ ಪರಿಶೀಲಿಸಲಾಗಿದೆ. ಆದುದರಿಂದ ನಮ್ಮ ವಿಮರ್ಶಕರೆಲ್ಲರೂ ಇದನ್ನು ಓದಲೇಬೇಕಾದ ಗ್ರಂಥವೆಂದು ಅನ್ನಿಸುವುದು ಸಹಜ. ಇದರ ಗದ್ಯದಲ್ಲಿ ಎಲ್ಲಿಯೂ ಬೋರಾಗದಂತೆ ಹಿತಮಿತವಾದ ಮತ್ತು ಚುರುಕಾದ ವಿಚಾರವಂತಿಕೆ ತುಂಬಿರುವುದನ್ನು ಗಮನಿಸಿದಾಗ ವಿಮರ್ಶೆಗೆ ಇಂಥ ಓಟ ಮತ್ತು ಲವಲವಿಕೆಯ ಅವಶ್ಯಕತೆ ಎಷ್ಟೆಂಬುದನ್ನು ಈ ಕೃತಿಯು ಬೆರಳುಮಾಡಿ ತೋರಿಸು ವಂತಿದೆ.

ಒಟ್ಟಿನಲ್ಲಿ ನಮ್ಮ ಆಧುನಿಕ ನಾಟಕಗಳನ್ನು ಕುರಿತು ವಿಚಾರ ಪ್ರಚೋದಕ ವಾಗಬಲ್ಲ ಈ ನಿಬಂಧವನ್ನು ಪ್ರಕಟಿಸಿದ ಪ್ರಿಂಟರ್ಸ್ ಪ್ರಕಾಶನವು, ಒಂದು ಮೆಚ್ಚುಗೆಯ ಕೆಲಸಮಾಡಿದೆ. ಇಷ್ಟು ಅಚ್ಚುಕಟ್ಟಾದ ಪ್ರಕಟಣೆಗಾಗಿ ಅವರಿಗೆ ವಂದನೆಗಳು ಸಲ್ಲಬೇಕು.

ಕ. ವೆಂ. ರಾಜಗೋಪಾಲ

## ಜಾನಪದ

**ಸಿದ್ಧಲಿಂಗಯ್ಯ**

1983ನೇ ವರ್ಷದಲ್ಲಿ ನಮ್ಮ ಪರಿಶೀಲನೆಗೆ ಬಂದಿರುವ ಕೃತಿಗಳು ಅತ್ಯಲ್ಪ. ಹಿಂದಿನ ವರ್ಷಗಳ ಜಾನಪದ ಕೃತಿಗಳ ಸಂಖ್ಯೆಗೆ ಈ ಸಂಖ್ಯೆ ಹೋಲಿಕೆಗೂ ನಿಲ್ಲದು. ಸಂಗ್ರಹ, ಅಧ್ಯಯನ ಮತ್ತು ಪ್ರಕಟಣೆಯಲ್ಲಿ ಸಜೀವವಾಗಿದ್ದ ಜಾನಪದ ಈ ದಿನಗಳಲ್ಲಿ ವಿಚಾರಸಂಕಿರಣಗಳಲ್ಲಿ ಮಾತ್ರ ಕಾಣಿಸಿಕೊಳ್ಳುತ್ತಿರುವುದನ್ನು ನಾವು ನೋಡುತ್ತಿದ್ದೇವೆ. ಜಾನಪದ ಒಂದು ಸ್ವತಂತ್ರ ಶಿಸ್ತಾಗಿ, ವಿದ್ವತ್‌ಸ್ವರೂಪವನ್ನು ಪಡೆದುಕೊಳ್ಳಲು ವಿಚಾರಸಂಕಿರಣಗಳು ಪೂರಕವೆನ್ನುವುದರಲ್ಲಿ ಎರಡು ಮಾತಿಲ್ಲ. ಆದರೆ ಇದಕ್ಕೆ ಪೂರ್ವಸ್ಥಿತಿ ಎನ್ನಬಹುದಾದ ಸಂಗ್ರಹ ಮತ್ತು ಪ್ರಕಟಣೆಯ ಕಾರ್ಯ ಹಿಂದುಳಿಯುವುದು ಆರೋಗ್ಯಕರವಲ್ಲ. ಜಾನಪದ ಕಾಣೆಯಾಗುತ್ತಿದೆ ಎಂಬ ಮಾತು ಎಷ್ಟೇ ಜೋರಾಗಿ ಕೇಳಿಬಂದರೂ ನಮ್ಮಲ್ಲಿ ಸಂಗ್ರಹಕಾರ್ಯಕ್ಕೆ ಇನ್ನೂ ವಿಪುಲವಾದ ಅವಕಾಶವಿದೆ. ಜಾನಪದ ವಿದ್ವಾಂಸರೊಬ್ಬರು ಗಮನಿಸಿರುವಂತೆ ನಮ್ಮ ಪಾಲಿಗೆ ಜಾನಪದ ಇನ್ನೂ ಜೀವಂತ ಪ್ರತಿಕ್ರಿಯೆಯಾಗಿದೆ. ಆದ್ದರಿಂದ ಜಾನಪದದ ಬಗೆಗಿನ ಹತಾಶೆಗಾಗಲೀ, ಅದರ ವಿನಾಶದ ಹುಯಿಲಿನ ಶ್ರದ್ಧಾಂಜಲಿ ಮನೋಭಾವಕ್ಕಾಗಲೀ ಸಕಾರಣಗಳಿಲ್ಲ ಎನ್ನಬಹುದು. ಈ ಮಾತುಗಳ ಹಿನ್ನೆಲೆಯಲ್ಲಿ ಇಲ್ಲಿಯ ಜಾನಪದ ಕೃತಿಗಳನ್ನು ವಿವೇಚಿಸುವ ಪ್ರಯತ್ನ ಮಾಡಲಾಗಿದೆ.

ಮಲೆನಾಡು ಜಾನಪದ (ಸಂ. ಎಚ್. ಜೆ. ಲಕ್ಕಪ್ಪಗೌಡ)

ಶಿವಮೊಗ್ಗ ಜಿಲ್ಲೆಯ ಬಿ. ಆರ್. ಪ್ರಾಜೆಕ್ಟಿನ ಸ್ನಾತಕೋತ್ತರ ಕೇಂದ್ರದಲ್ಲಿ 1982ರ ಫೆಬ್ರವರಿ 5, 6 ಮತ್ತು 7ರಂದು ನಡೆದ ಜಾನಪದ ವಿಚಾರ ಸಂಕಿರಣದಲ್ಲಿ ಮಂಡಿತವಾದ ಪ್ರಬಂಧಗಳು ಕೃತಿರೂಪದಲ್ಲಿ ಪ್ರಕಟವಾಗಿವೆ. 'ಮಲೆನಾಡು ಜಾನಪದ' ಎಂಬ ಶೀರ್ಷಿಕೆಯಲ್ಲಿ ಒಂದು ಪ್ರದೇಶದ ಜಾನಪದದ ವಿವಿಧ ಮುಖಗಳನ್ನು ಅಧ್ಯಯನ ಮಾಡುವ ಈ ಪ್ರಯತ್ನ ಶ್ಲಾಘನೀಯ. ಈ ಬಗೆಯ ಅಧ್ಯಯನವು ಪ್ರಾದೇಶಿಕ ಜಾನಪದವನ್ನು ಅರ್ಥಮಾಡಿಕೊಳ್ಳುವ ದಿಕ್ಕಿನಲ್ಲಿ ಒಂದು ಮಹತ್ವದ ಹೆಜ್ಜೆ.

ಕರ್ನಾಟಕದಲ್ಲಿ ಮೂಲ ಜಾನಪದೀಯ ಗುಣವನ್ನು ಉಳಿಸಿಕೊಂಡಿರುವ ಮಲೆನಾಡು ಪ್ರದೇಶದ ಅಧ್ಯಯನವನ್ನು ಹಲವು ಸ್ತರಗಳಲ್ಲಿ ಅಭ್ಯಾಸ ಮಾಡ

ಲಾಗಿದೆ. ಜನಪದ ಸಾಹಿತ್ಯ, ಜನಪದ ಕಲೆಗಳು, ಜನಪದ ಸಂಪ್ರದಾಯಗಳು, ಜನಪದ ಸಂಕೀರ್ಣ ಎಂಬ ಶೀರ್ಷಿಕೆಯ ಅಡಿಯಲ್ಲಿ ಪ್ರಬಂಧಗಳು ಪ್ರಕಟವಾಗಿವೆ. ಈ ಎಲ್ಲಾ ಲೇಖನಗಳನ್ನು ಮಂಡಿಸಿರುವ ವಿದ್ವಾಂಸರುಗಳು ಬಹುಪಾಲು ಮಲೆನಾಡಿನವರೇ ಆಗಿದದ್ದು ಅಲ್ಲಿಯ ಜಾನಪದದ ಆಳ ಅಗಲಗಳನ್ನು ಬಲ್ಲವರು. ಉದ್ಘಾಟನಾ ಭಾಷಣದಲ್ಲಿ ಕಾನೂನು ಜಾನಪದವನ್ನು ಕುರಿತಂತೆ ದೇಜಗೌ ಕೆಲವು ಅಮೂಲ್ಯ ಸಂಗತಿಗಳನ್ನು ತಿಳಿಸಿದ್ದಾರೆ.

'ಜನಪದ ಸಾಹಿತ್ಯ' ಗೋಷ್ಠಿಯಲ್ಲಿ ಮಂಡಿತವಾಗಿರುವ ಚಂದ್ರು ಕಾಳೇನಹಳ್ಳಿ ಅವರ 'ಜನಪದ ಕಾವ್ಯ'ವನ್ನು ಕುರಿತ ವಿಚಾರಗಳು ಗಮನಾರ್ಹವಾಗಿವೆ. ಜನಪದ ಕಾವ್ಯಗಳನ್ನು ಅವರು ವಿಶ್ಲೇಷಣೆಗೆ ಒಳಪಡಿಸಿರುವ ರೀತಿ ಹೊಸಬಗೆಯಿಂದಾಗಿದೆ. 'ಕೆರೆಗೆಹಾರ ಮತ್ತು ಹಿರಿದಿಮ್ಮವ್ವ' ಕಾವ್ಯಗಳನ್ನು ಅವರು ಅರ್ಥೈಸಿರುವ ರೀತಿ ಮನಶಾಸ್ತ್ರೀಯ ಹಿನ್ನೆಲೆಯದಾಗಿದ್ದು, ಜನಪದ ಸಾಹಿತ್ಯದ ವೈಭವೀಕರಣದ ನೆಲೆ ಯಿಂದ ಬಹುದೂರ ಸಾಗಿದೆ. ಜಾನಪದದ ಎಲ್ಲ ಮಗ್ಗುಲುಗಳನ್ನು ಹೊಸಬಗೆಯಲ್ಲಿ ಅರ್ಥೈಸಬೇಕೆಂಬುದರ ಹಿನ್ನೆಲೆಯಲ್ಲಿ ಚಂದ್ರುಕಾಳೇನಹಳ್ಳಿಯವರ ಲೇಖನ ಅಭ್ಯಾಸ ಯೋಗ್ಯವಾಗಿದೆ.

ಜನಪದ ಕಥೆಗಳನ್ನು ಕುರಿತ ಎಂ. ಎ. ಜಯಚಂದ್ರ ಅವರ ಪ್ರಬಂಧ ಕೆಲವು ಒಳನೋಟಗಳಿಂದ ಕೂಡಿದ್ದು ಹಲವು ಕನ್ನಡ ಜನಪದ ಕತೆಗಳ ಮೂಲವನ್ನು ಶಿಷ್ಟ ಕಾವ್ಯಗಳಲ್ಲಿ ಗುರುತಿಸುತ್ತದೆ. ಜನಪದ ಕತೆಗಳನ್ನು ಸಂಗ್ರಹಿಸುವುದಷ್ಟೇ ಸಾಲದು, ಅವುಗಳ ಸತ್ವಪೂರ್ಣ ಅಧ್ಯಯನದ ಅಗತ್ಯವೆನ್ನುವವರು ಈ ಲೇಖನವನ್ನು ಗಮನಿಸ ಬೇಕಾಗಿದೆ. 'ಗಾದೆಗಳು ಮತ್ತು ಒಗಟು'ಗಳನ್ನು ಕುರಿತ ಎಚ್.ಜೆ. ಲಕ್ಕಪ್ಪಗೌಡರ ಲೇಖನ ಜಾನಪದ ಅಭ್ಯಾಸಿಗಳಿಗೆ ಪ್ರಯೋಜನಕಾರಿಯಾದುದು. ಮತಿಘಟ್ಟ ಕೃಷ್ಣಮೂರ್ತಿಯವರು ಅಧ್ಯಕ್ಷ ಭಾಷಣದಲ್ಲಿ, ಹಲವಾರು ಸ್ವಾರಸ್ಯಕರ ಮಾಹಿತಿ ಗಳನ್ನು ಹೊರಗೆಡಹಿದ್ದಾರೆ. ಜಾನಪಪದ ಅಳಿವು-ಉಳಿವನ್ನು ಕುರಿತಂತೆ ಅವರು ಹೇಳಿರುವ ವಿಚಾರಗಳು ಭಾವುಕತೆಯಿಂದ ಹುಟ್ಟಿವೆ ಎಂದು ಹೇಳಬಹುದು.

'ಜನಪದ ಕಲೆಗಳು' ಎಂಬ ವಿಭಾಗದಲ್ಲಿ 'ನೃತ್ಯ ಮತ್ತು ಮೇಳಗಳು' (ಸಿ. ಎಸ್. ಶಿವಕುಮಾರಸ್ವಾಮಿ), 'ವಾದ್ಯಗಳು' (ತೀ. ನಂ. ಶಂಕರ ನಾರಾಯಣ), 'ಯಕ್ಷಗಾನ ಬಯಲಾಟ' (ಎಚ್. ಎಸ್. ಸಿದ್ಧಗಂಗಪ್ಪ), 'ಕುಶಲ ಕಲೆಗಳು' (ರಂಗಾರೆಡ್ಡಿ ಕೋಡಿರಾಂಪುರ) ಲೇಖನಗಳಿವೆ. ನೃತ್ಯ ಮತ್ತು ಮೇಳಗಳನ್ನು ಕುರಿತ ಪ್ರಬಂಧದಲ್ಲಿ ಮಟ್ಟಪಾದ ಮಾಹಿತಿಗಳಿವೆ. ವಾದ್ಯಗಳನ್ನು ಕುರಿತ ಬರವಣಿಗೆ ಆಳವಾದ ಅಧ್ಯಯನ ಮತ್ತು ಪರಿವೀಕ್ಷಣೆಯ ನಿಷ್ಪನ್ನವಾಗಿದೆ. ಯಕ್ಷಗಾನ

ಬಯಲಾಟ ಸಪುಷ್ಟವಾಗಿಲ್ಲ. ಕುಶಲ ಕಲೆಗಳು ಕುತೂಹಲಕರ ವಿವರಗಳಿಂದ ಕೂಡಿದೆ. ಗೋಷ್ಠಿಯ ಅಧ್ಯಕ್ಷ ಸುಂಕಾಪುರ ಅವರ ಭಾಷಣದಲ್ಲಿ ಈ ನಾಲ್ಕೂ ಪ್ರಬಂಧಗಳನ್ನು ಬೆಂಬಲಿಸುವ ಮಾತುಗಳಿವೆ.

'ಜನಪದ ಸಂಪ್ರದಾಯಗಳು' ಗೋಷ್ಠಿಯಲ್ಲಿ ಮಂಡಿತವಾದ 'ಹಬ್ಬ, ಜಾತ್ರೆಗಳು, (ಅಂಬಳಿಕೆ ಹಿರಿಯಣ್ಣ) ಲೇಖನಕ್ಕೆ ವಿಸ್ತಾರವಾದ ಕ್ಷೇತ್ರಕಾರ್ಯವೇ ಬೆನ್ನೆಲುಬು. ಹಬ್ಬ ಜಾತ್ರೆಗಳ ಬಗ್ಗೆ ಲೇಖನದ ಕೊನೆಯಲ್ಲಿ ಹೇಳಿರುವ ಮಾತುಗಳು ಆಳವಾದ ಚಿಂತನೆಯ ಫಲ. ಈ ಕ್ಷೇತ್ರದಲ್ಲಿ ಆಸಕ್ತಿ ಉಳ್ಳವರು ಪ್ರಸ್ತುತ ಬರಹ ವನ್ನು ಗಮನಿಸುವುದು ಅತ್ಯಂತ ಉಪಯುಕ್ತವಾಗಿದೆ. ಗ್ರಾಮದೇವತೆಗಳು (ಬಸವರಾಜ ನೆಲ್ಲಿಸರ) ಮಲೆನಾಡಿನ ಗ್ರಾಮದೇವತೆಗಳ ಕಿರು ಸಮೀಕ್ಷೆಯಾಗಿದೆ. ನಂಬಿಕೆ ಆಚರಣೆಗಳು (ಜೀನಹಳ್ಳಿ ಸಿದ್ಧಲಿಂಗಪ್ಪ) ವಿವರ ಪೂರ್ಣವಾಗಿದೆ. ಮಲೆನಾಡಿಗೇ ವಿಶಿಷ್ಟವೆನ್ನಿಸುವ ಕೆಲವು ಆಚರಣೆಗಳು ಇಲ್ಲಿ ದಾಖಲಾಗಿವೆ. ಚಿತ್ರದುರ್ಗ ಜಿಲ್ಲೆಯ ಮೂರು ಬುಡಕಟ್ಟುಗಳು (ಕೃಷ್ಣಮೂರ್ತಿ ಹನೂರು) ಉಪಯುಕ್ತವಾದ ಲೇಖನ. ಈ ಗೋಷ್ಠಿಯ ಕಕ್ಷೆಗೆ ಪ್ರಸ್ತುತ ಲೇಖನ ಒಳಪಡು ವುದರ ಬಗ್ಗೆ ಆಕ್ಷೇಪಣೆ ಇದ್ದರೂ ಕೂಡ ಪ್ರಬಂಧಕಾರರ ಶ್ರಮ ವ್ಯರ್ಥವಲ್ಲ. ಗೋಷ್ಠಿಯ ಅಧ್ಯಕ್ಷರಾಗಿದ್ದ ಎಂ. ಚಿದಾನಂದಮೂರ್ತಿ ಅವರ 'ಜನಪದ ಶಾಸ್ತ್ರದಲ್ಲಿ ಅಂತರ ಶಿಸ್ತೀಯ ಅಧ್ಯಯನ: ಕಬ್ಬಿಣ ಒಂದು ನಿದರ್ಶನ' ಎಂಬ ಲೇಖನ ಬಹಳ ವಿದ್ವತ್ಪೂರ್ಣವಾಗಿದೆ. ಈ ಬಗೆಯ ಚಿಂತನೆ ನಮ್ಮ ಸಂದರ್ಭಕ್ಕೆ ಹೊಸದಾಗಿದೆ.

'ಜನಪದ ಸಂಕೀರ್ಣ' ಗೋಷ್ಠಿಯಲ್ಲಿ 'ಆಟಗಳು ಮತ್ತು ಕ್ರೀಡೆಗಳು' (ಎಸ್. ಪಿ. ಪದ್ಮಪ್ರಸಾದ್), 'ಶಿಶುಪ್ರಾಸಗಳು' (ಶ್ರೀಕಂಠ ಕೂಡಿಗಿ), 'ಜನಪದ ವೈದ್ಯ' (ಎಸ್. ಬಿ. ರವಿಕಲಾ), 'ಸ್ಥಳನಾಮಗಳು' (ಶಿ. ಕುಮಾರಸ್ವಾಮಿ) ಈ ಲೇಖನ ಗಳಿವೆ. ಶಿಶು ಪ್ರಾಸಗಳನ್ನು ಕುರಿತು ಹೊಸದನ್ನು ಹೇಳುವ ಪ್ರಯತ್ನವಿದ್ದು ಉಳಿದ ಲೇಖನಗಳು ವಿವರ ಸಂಗ್ರಹಗಳಾಗಿವೆ. ಅಧ್ಯಕ್ಷ ಭಾಷಣದಲ್ಲಿ ಎಲ್. ಆರ್. ಹೆಗಡೆಯವರು ತಮ್ಮ ಬದುಕಿನ ಅನುಭವವನ್ನು ಓದುಗರೊಂದಿಗೆ ಹಂಚಿಕೊಂಡಿ ದ್ದಾರೆ.

ಈ ವಿಚಾರ ಸಂಕಿರಣದ ಕಾರಣದಿಂದ ಜನಪದ ತಜ್ಞರು ನಾನಾ ಸಂಗತಿಗಳನ್ನು ಸ್ಪರ್ಶಿಸಿ, ಚಿಂತಿಸುವ ಯತ್ನ ಮಾಡಿದ್ದಾರೆ. ಜಾನಪದ ವಿದ್ಯಾರ್ಥಿಗಳಿಗೆ ಇದೊಂದು ಉತ್ತಮ ಆಕರ ಗ್ರಂಥವೆನ್ನುವುದರಲ್ಲಿ ಎರಡು ಮಾತಿಲ್ಲ. ಈ ಕೃತಿ ಬರಲು ಕಾರಣ ವಾದವರಿಗೆ ಜನಪದಾಸಕ್ತರು ಕೃತಜ್ಞರಾಗಿರಲೇಬೇಕಾಗಿದೆ.

ಜಾನಪದದ ಮೂಲತತ್ವಗಳು, ಜಾನಪದ ಸಮ್ಮುಖ (ದೇವೇಂದ್ರಕುಮಾರ ಹಕಾರಿ), 'ಜಾನಪದ ಮೂಲತತ್ವಗಳು' ಕೃತಿ ಹಲವು ಕಾರಣಗಳಿಂದ ವಿಶಿಷ್ಟ

ವಾಗಿದೆ. ಪಾಶ್ಚಾತ್ಯ ಜಾನಪದ ಸಿದ್ಧಾಂತಗಳನ್ನು ಅರಗಿಸಿಕೊಂಡು ಅದನ್ನು ಕನ್ನಡದಲ್ಲಿ ಅನಾವರಣಗೊಳಿಸುವ ಪ್ರಾಮಾಣಿಕ ಪ್ರಯತ್ನ ಇಲ್ಲಿದೆ. ಹಿನ್ನೆಲೆ ಮತ್ತು ನೆಲೆ ಎಂಬ ಎರಡು ವಿಭಾಗಗಳಲ್ಲಿ ಲೇಖಕರು ಅನೇಕ ವಿಷಯಗಳನ್ನು ವಿವರಿಸಿದ್ದಾರೆ. ಜಾನಪದದ ಅಧ್ಯಯನದ ಸ್ವರೂಪ–ವ್ಯಾಪ್ತಿ, ಜಾನಪದ ಮತ್ತು ಇತರ ವಿಜ್ಞಾನಗಳು, ಜಾನಪದ-ಕ್ಷೇತ್ರಕಾರ್ಯ ವಿಧಾನಗಳು, ಸಿದ್ಧಾಂತಗಳು ಮೊದಲ ಭಾಗದಲ್ಲಿವೆ. ಎರಡನೆಯ ಭಾಗದಲ್ಲಿ ಜಾನಪದದ ಮೂಲಭೂತ ತತ್ವಗಳನ್ನು ಐದು ದೃಷ್ಟಿಕೋನಗಳಿಂದ ವಿಶ್ಲೇಷಣೆಗೆ ಒಳಪಡಿಸಿದ್ದಾರೆ.

ಈ ಎಲ್ಲಾ ಲೇಖನಗಳು ಕೃತಿಕಾರರ ಆಳವಾದ ಅಧ್ಯಯನವನ್ನೂ, ಅವರ ಚಿಂತನ ಶೀಲತೆಯನ್ನೂ ಓದುಗರಿಗೆ ಮನದಟ್ಟು ಮಾಡಿಕೊಡುತ್ತವೆ. ಆದರೆ ತಾವು ಓದಿದ್ದನ್ನು ಕನ್ನಡದಲ್ಲಿ ಪಡಿಮೂಡಿಸಬೇಕೆಂಬ ಆತುರದಿಂದಲೋ, ಅಸ್ಪಷ್ಟತೆ ಯಿಂದಲೋ ಅವರ ಬರವಣಿಗೆ ಕೆಲವು ಕಡೆ ಕ್ಲಿಷ್ಟವಾಗುತ್ತದೆ. ಉದಾ : ಆ. ಇವು ಗಳ ಹುಟ್ಟು, ರೂಪಣ, ಸ್ಥಿರೀಕರಣ ಮತ್ತು ಚಲಾವಣೆಗಳಿಗೆ ಕಾರಣವಾದ ಸಾಮಾಜಿಕ ನಿರ್ಬಂಧ ಶಕ್ತಿಗಳು ಯಾವುವು (ಪು.2) ಇಂಥ ಸಾಲುಗಳು ಅಲ್ಲಲ್ಲಿ ತಲೆ ಹಾಕುವ ದೋಷವನ್ನು ಬಿಟ್ಟರೆ ಈ ಕೃತಿ ತುಂಬ ಉಪಯುಕ್ತವಾದುದು ಎನ್ನ ಬಹುದು. ಹೆಣ್ಣು ಕೊಂಡ ಕೆಂಡದಲ್ಲಿ ಉರಿಯುವಾಗ ನಮ್ಮ ಶಿಷ್ಟಪದ "ಕವಿಗಳು ಏನು ಮಾಡಿದರು ? ಒಬ್ಬ ತಾಯಿ, ಒಬ್ಬ ತಂಗಿ ಯಾರ ನಿಟ್ಟುಸಿರೂ ಇವರನ್ನು ತಟ್ಟಲಿಲ್ಲವಲ್ಲ ! ಯಾರ ಯಾತನೆಯೂ ಇವರ ಸಂವೇದನಾಶೀಲತೆಗೆ, ಸೃಜನ ಶಕ್ತಿಗೆ ವಸ್ತುವಾಗಲಿಲ್ಲವಲ್ಲ ! ಇಲ್ಲಿಯೇ ಜನಪದ ಕಾವ್ಯದ ಹೆಗ್ಗಳಿಕೆಯಿರುವುದು" (ಪು.59), ಇಂಥ ಮಾತುಗಳಲ್ಲಿ ಭಾವಾವೇಶದ ಸುಳಿವು ಕಂಡರೂ, ಇಲ್ಲಿಯ ಒಳ ನೋಟವನ್ನು ಯಾರೂ ಅಲ್ಲಗಳೆಯಲಾರರು.

'ಜಾನಪದ ಸಮ್ಮುಖ' ಆರು ಪ್ರಬಂಧಗಳನ್ನು ಒಂದು ಕಿರುಟಿಪ್ಪಣಿಯನ್ನೂ ಉಳ್ಳ ಕೃತಿ. ಕರ್ನಾಟಕ ಜಾನಪದದ ವಿವಿಧ ವಿಷಯಗಳ ಸ್ಪರ್ಶ ಇಲ್ಲಿದೆ. 'ದೇವರು ಗುಡ್ಡದ ಮೈಲಾರಲಿಂಗ' ಎನ್ನುವ ಲೇಖನ ಈ ದೇವತೆಯನ್ನು ಹಲವು ನಿಟ್ಟಿನಿಂದ ಅಧ್ಯಯನ ಮಾಡಿದ್ದರ ಫಲ. 'ಜನಪದ ಕಲೆಗಳು ಮತ್ತು ಶರಣರು' ಕುತೂಹಲಕರ ಮಾಹಿತಿಗಳನ್ನುಳ್ಳ, ಲೇಖನ. ಸಣ್ಣಾಟಗಳನ್ನು ಕುರಿತು ಬರೆಯುವಾಗ 'ಜಾನಪದದ ಮೂಲ ತತ್ವಗಳು' ಕೃತಿಯ ಕೆಲವು ವಿಚಾರಗಳನ್ನು ಯಥಾವತ್ತಾಗಿ ಯಾವ ಸೂಚನೆಯೂ ಇಲ್ಲದೆ ಪುಟಗಟ್ಟಲೆ ಪುನರ್ಪ್ರಕಟಿಸಲಾಗಿದೆ. ಮೂಲಕೃತಿಯು ಇದೇ ಲೇಖಕರದಾದ್ದರಿಂದ ಈ ಬಗ್ಗೆ ಆಕ್ಷೇಪ ಅಸಾಧುವಾಗುತ್ತದೆ. ಆದರೆ ಕೊನೇಪಕ್ಷ ಸೂಚನೆಯನ್ನು ನಿರೀಕ್ಷಿಸುವುದು ತಪ್ಪಲ್ಲ. ಇನ್ನುಳಿದ ಲೇಖನಗಳು ಸಾಧಾರಣ ವಾಗಿವೆ.

ಜಾನಪದ ಸಿದ್ಧಾಂತದ ಬಗ್ಗೆ ದೇವೇಂದ್ರ ಕುಮಾರ ಹಕಾರಿಯವರ ಅಧಿಕಾರ ವಾಣಿ ಮೆಚ್ಚಬೇಕಾದುದು. ಇವರ ಬರವಣಿಗೆಯ ಒಂದು ದೋಷ ಪುನರುದ್ಧರಣೆ. ಹಸ್ಕೊವಿಟ್ಸ್, ಮಲಿನೋವಸ್ಕಿ ಇನ್ನೂ ಮುಂತಾದ ವಿದ್ವಾಂಸರ ಅದೇ ಸಾಲುಗಳು ಮತ್ತೆ ಮತ್ತೆ ಇವರ ಕೃತಿಗಳಲ್ಲಿ ಸಂಬಂಧವಿಲ್ಲದೆಯೂ ಕೆಲವು ಸಲ ಕಾಣಸಿಗುತ್ತದೆ.

ಅಣ್ಣಪ್ಪ ದೈವ (ಸಾ. ಕೃ. ರಾಮಚಂದ್ರರಾವ್) ಅಣ್ಣಪ್ಪ ದೈವವನ್ನು ಆಮೂಲಾಗ್ರವಾಗಿ ಇಲ್ಲಿ ಅಭ್ಯಾಸ ಮಾಡಿರುವ ಬಗೆ ಹೊಸ ರೀತಿಯದು. ಆದಿ ಮಾನವ ತನ್ನ ಬದುಕಿನ ಮುನ್ನಡೆಗಾಗಿ ದೈವವನ್ನು ಹುಟ್ಟು ಹಾಕಿದ ಕತೆಯ ಮನೋಜ್ಞ ನಿರೂಪಣೆ ಇಲ್ಲಿದೆ. ತಮ್ಮದೇ ಆದ ರೀತಿಯಲ್ಲಿ ದೈವ ಮತ್ತು ಮನುಷ್ಯನ ಮೊದಲ ದಿನಗಳನ್ನು ಲೇಖಕರು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾರೆ! ಅವನ ಎದೆಯೊಳಗೆ ನೂರಾರು ಹಾವುಗಳು ಹರಿದಾಡುವ ಹುತ್ತವೊಂದು ಬೆಳೆದಿತ್ತು. ಹೊರಗೊಂದು ಕಾಡಾದರೆ ಒಳಗಿನ್ನೊಂದು ಕಾಡು, (ಪು. 21). 2. ದೈವದ ತಾಣದಲ್ಲಿ ಮಾಯದ ಹಂದಿಯನ್ನು ಕಂಡು ಕಟ್ಟಿಗೆಯಾಗಿ ಕೆಳಗೆ ಬಿದ್ದವಳು ಮತ್ತೆ ಎದ್ದಿರಲಿಲ್ಲ (ಪು.38). ಇನ್ನಿತರ ಸಾಲುಗಳು ಇಲ್ಲಿಯ ಬರವಣಿಗೆಯ ಕಾವ್ಯಗುಣಕ್ಕೆ ಸಾಕ್ಷಿಯಾಗಿವೆ. ಈ ಕೃತಿ ಆದಿಮಾನವನ ಬದುಕನ್ನು ಚಿತ್ರಿಸುವ ಕಾದಂಬರಿಯಂತೆ ಕಂಡರೂ, ನಮ್ಮ ಸಂಸ್ಕೃತಿಯ ಮೂಲ ಸಂಗತಿಗಳ ಹುಟ್ಟು ಬೆಳವಣಿಗೆಯನ್ನು ಹೇಳುವ ಚರಿತ್ರೆಯೂ ಹೌದು, ಕೊನೆಯಲ್ಲಿ ಕೊಟ್ಟಿರುವ ಅನುಬಂಧ ವಿದ್ವತ್ಪೂರ್ಣ ವಾಗಿದ್ದು ಲೇಖಕರ ಪರಿಶ್ರಮವನ್ನು ಸೂಚಿಸುತ್ತದೆ. "ಭೂತ ಹೊರಗಿರುವ ವಸ್ತುವೋ ಹೇಗೋ ನನಗೆ ತಿಳಿಯದು; ಆದರೆ ಅದು ಒಳಗಣ ಪ್ರವೃತ್ತಿ ಯೆಂಬುದೇನೋ ನನಗೆ ಮನದಟ್ಟಾಗಿದೆ. ಭೂತದ ಕತೆಯೆಂದರೆ ಮನುಷ್ಯನ ಒಡಲಲ್ಲಿ ನಡೆದಿರುವ ಹಗರಣವೆಂದೇ ನನ್ನ ಎಣಿಕೆ", ಎನ್ನುವ ಕೃತಿಕಾರರು ದೈವ, ಭೂತಗಳನ್ನು ಅಧ್ಯಯನ ಮಾಡುವವರಿಗೆ ಉಪಯುಕ್ತವಾದ ಸಲಹೆ ನೀಡಿದ್ದಾರೆ ಎಂದು ಹೇಳಬಹುದು.

ಮುಂಗೋಳಿ (ತ. ಚಿ. ಚಲುವೇಗೌಡ) 'ಕೆಲವು ಜನಪದ ಸಂಪ್ರದಾಯಗಳು' ಕೃತಿಯಿಂದ ಜಾನಪದಾಸಕ್ತರ ಗಮನ ಸೆಳೆದಿರುವ ಲೇಖಕರ ಇನ್ನೊಂದು ಕೃತಿಯಿದು. ಒಟ್ಟು ಏಳು ಲೇಖನಗಳಿವೆ. ಮೊದಲ ಐದು ಲೇಖನಗಳು ಹೆಣ್ಣು ಮತ್ತು ತೌರಿನ ಸಂಬಂಧವನ್ನೂ, ಗಂಡನ ಮನೆಯನ್ನು ಸೇರಿದ ಹೆಣ್ಣಿನ ಬದುಕನ್ನೂ ಹೇಳುವ ಈ ಬರವಣಿಗೆಯಲ್ಲಿ ಕಂಡು ಬರುವ ಮುಖ್ಯ ಗುಣ ಹೃದಯಸ್ಪರ್ಶಿಯಾದ ನಿರೂಪಣೆ. ವಸ್ತುವೇ ಮೃದುವಾಗಿದ್ದು ಇದರ ನಿರೂಪಣೆ, ಭಾವನಾತ್ಮಕವಾಗಿರುವುದರಿಂದ ವಿಚಾರ ವಿಶ್ಲೇಷಣೆಯು ಹಿಂದೆ ಬಿದ್ದಿರುವುದನ್ನು ಹಲವಾರು ಕಡೆ ಕಾಣುತ್ತೇವೆ. ಕೊನೆಯ ಎರಡು ಲೇಖನಗಳು ಭಿನ್ನವಾಗಿವೆ. ಶಿಶುಪ್ರಾಸಗಳನ್ನು ಈಗಾಗಲೇ ಹಲವು ಸಂಗ್ರಹಕಾರರು ಪ್ರಕಟಿಸಿರುವ ಕೃತಿಗಳಿಂದ ಆಯ್ದು ವಿಶ್ಲೇಷಿಸುವ

ಪ್ರಯತ್ನವನ್ನು ನೋಡಬಹುದು ಜನಪದ ನೃತ್ಯಗಳನ್ನು ಕುರಿತ ಲೇಖನ ವಿವರ ಪೂರ್ಣವಾಗಿದ್ದು ಉಪಯುಕ್ತವಾಗಿದೆ. ತಮ್ಮ ಊರನ್ನೇ ಕೇಂದ್ರವಾಗಿಸಿಕೊಂಡು ಜಾನಪದ ಸಂಗ್ರಹ ಮತ್ತು ಅಧ್ಯಯನವನ್ನು ಮಾಡುವ ಈ ಲೇಖಕರ ವಿಧಾನ ಸ್ವಾಗತಾರ್ಹವಾಗಿದೆ. ಅದು ಗಟ್ಟಿಯೂ ಆಗಲೆಂಬುದು ನಮ್ಮ ಹಾರೈಕೆ.

ನೂರ ಇಪ್ಪತ್ತೆಂಟು ಪುಟಗಳ ಈ ಕೃತಿಗೆ ಇಟ್ಟಿರುವ ಬೆಲೆ ಇಪ್ಪತ್ತೆರಡು ರೂ.ಗಳು. ಈ ಬೆಲೆಯು ಕೃತಿಯನ್ನು ಕೊಳ್ಳುವ ಮನಸ್ಸುಳ್ಳ ಆಸಕ್ತರಿಗೆ ನಿರುತ್ಸಾಹವನ್ನುಂಟುಮಾಡುತ್ತದೆ.

'ಗುಲ್ಬರ್ಗ ಜಿಲ್ಲೆಯ ಮೊಹರ್‍ರಂ ಪದಗಳು', (ಚೆನ್ನಣ್ಣ ವಾಲೀಕಾರ) ಕರ್ಬಲಾ ಪದಗಳು, ಧಾರ್ಮಿಕ ಪದಗಳು, ಸಾಮಾಜಿಕ ಪದಗಳು, ಇತರ ಪದಗಳು ಎಂಬ ವಿಭಾಗಗಳಲ್ಲಿ ಹಾಡುಗಳು ಪ್ರಕಟಗೊಂಡಿವೆ. ಗುಲ್ಬರ್ಗ ಜಿಲ್ಲೆಯ ಚಿತ್ತಾಪುರ ತಾಲೂಕಿನಲ್ಲಿ ಈ ಹಾಡುಗಳನ್ನು ಸಂಗ್ರಹಿಸಲಾಗಿದೆ. ಧಾಟಿ, ವಸ್ತುವಿನ ದೃಷ್ಟಿಯಲ್ಲಿ ಇಲ್ಲಿಯ ಸಾಹಿತ್ಯದಲ್ಲಿ ವೈವಿಧ್ಯತೆಯಿದೆ. ಹಿಂದೂ ಮುಸಲ್ಮಾನರಿಬ್ಬರೂ ಸೇರಿ ಆಚರಿಸುವ ಮೊಹರ್‍ರಂ ಹಬ್ಬ ಮತೀಯ ಭಾವೈಕ್ಯತೆಗೆ ಸಾಕ್ಷಿಯಾಗಿದೆ. ಮೊಹರ್‍ರಂ ಹಾಡುಗಳನ್ನು ಹಾಡಿದವರೆಲ್ಲ ಮುಸ್ಲಿಮೇತರರೇ ಆಗಿರುವುದು ಒಂದು ವೈಶಿಷ್ಟ್ಯ ವಾಗಿದೆ. ಸಾಮಾಜಿಕ ಪದಗಳು ಎಂಬ ವಿಭಾಗದಲ್ಲಿ ಕೆಲವು ಅಪರೂಪದ ಹಾಡುಗಳು ಪ್ರಕಟಣಗೊಂಡಿವೆ.

ಈ ಸಂಗ್ರಹಕ್ಕೆ ಚೆನ್ನಣ್ಣ ವಾಲೀಕಾರರು ಆಪ್ತವೂ, ಹೃತ್ಪೂರ್ವಕವೂ ಆದ ಪ್ರಸ್ತಾವನೆಯೊಂದನ್ನು ಬರೆದಿದ್ದಾರೆ. ಇಲ್ಲಿಯ ಹಾಡುಗಳನ್ನು ಅರ್ಥ ಮಾಡಿ ಕೊಳ್ಳಲು ಸೂಕ್ತವಾದ ಹಿನ್ನೆಲೆಯನ್ನು ಒದಗಿಸಿದ್ದಾರೆ.

ವಿದೇಶಿ ಗಾದೆಗಳು (ಕೆ. ಎಸ್. ಉಮಾಪತಿ) ನಾನಾ ಸಂಗತಿಗಳನ್ನು ಕುರಿತು ಆರಿಸಿದ ವಿದೇಶೀ ಗಾದೆಗಳನ್ನು ಇಲ್ಲಿ ಕಲೆ ಹಾಕಿದ್ದಾರೆ. ಈ ಕೃತಿಯಲ್ಲಿ ಪ್ರಪಂಚದ ನಾನಾ ದೇಶಗಳ ಜನತೆಯ ಅನುಭವ ಸಾರವಿದೆ. ಸಂಗ್ರಹ, ಸಂಪಾದನೆ, ಅನುವಾದ, ಈ ನೆಲೆಗಳಲ್ಲಿ ರೂಪುಗೊಂಡ ಈ ಪುಸ್ತಕದಲ್ಲಿ ಎದ್ದು ಕಾಣುವ ಅಂಶ ಅಚ್ಚುಕಟ್ಟುತನ. ಅರ್ಥಪೂರ್ಣವಾದ ಚಿತ್ರಗಳು ಇಲ್ಲಿಯ ಇನ್ನೊಂದು ಆಕರ್ಷಣೆ. ಈ ಗಾದೆಗಳ ಗೊಂಚಲು ಆಸಕ್ತ ಓದುಗರ ಕುತೂಹಲವನ್ನು ತಣಿಸುವುದರಲ್ಲಿ ಸಂಶಯವಿಲ್ಲ. ವಿದೇಶೀ ಗಾದೆಗಳಿಗೆ ಸಂಬಂಧಿಸಿದಂತೆ ಆರಂಭದಲ್ಲಿ ಒಂದು ಪ್ರಸ್ತಾವನೆಯೋ, ಪೀಠಿಕೆಯೋ ಇದ್ದಿದ್ದರೆ ಕೃತಿ ಇನ್ನೂ ಕಳೆಗಟ್ಟುತ್ತಿತ್ತು.

## ಸಂಕೀರ್ಣ

**ಜಿ. ಎಸ್. ಶಿವರುದ್ರಪ್ಪ**

ಈ ವರ್ಷ ಸಂಕೀರ್ಣ ವಿಭಾಗದ ಪರಿಶೀಲನೆಗೆ ನಮಗೆ ದೊರೆತ ಕೃತಿಗಳ ಸಂಖ್ಯೆ ಹೆಚ್ಚಿಲ್ಲವಾದರೂ, ಎಸ್. ವೆಂಕಟರಾಂ ಅವರ 'ದುಡಿಯುವವರ ದನಿ ಮತ್ತಿತರ ಲೇಖನಗಳು' ಮತ್ತು 'ಅಡಿಗರ ಲೇಖನಗಳು ಮತ್ತು ಮುನ್ನುಡಿಗಳು' ಎಂಬ ಕೃತಿಗಳನ್ನು ಬಿಟ್ಟರೆ ಉಳಿದವು ಅಂಥ ವಿಶೇಷತೆಯನ್ನು ಪಡೆದುಕೊಂಡಂತೆ ತೋರುವುದಿಲ್ಲ.

ದಿವಂಗತ ಎಸ್. ವೆಂಕಟರಾಂ ಅವರ 'ದುಡಿಯುವವರ ದನಿ ಮತ್ತಿತರ ಲೇಖನಗಳು' ಎಂಬ 191 ಪುಟಗಳ ಕೃತಿ ನಿಜವಾದ ಅರ್ಥದಲ್ಲಿ ಸಂಕೀರ್ಣ ಸ್ವರೂಪದ್ದು. ಅಷ್ಟೆ ಅಲ್ಲ ವೆಂಕಟರಾಂ ಅವರ ವ್ಯಕ್ತಿತ್ವದ ಬಹುಮುಖತೆಯನ್ನು ತೆರೆದು ತೋರುವ ಒಂದು ವಿಶೇಷ ರೀತಿಯ ಕೃತಿಯಾಗಿದೆ.

ಈ ಕೃತಿಯಲ್ಲಿ ಒಟ್ಟು ಹದಿನೈದು ಲೇಖನಗಳಿವೆ. ಸಾಹಿತ್ಯ ವಿಮರ್ಶೆಯನ್ನು ಕುರಿತು ಐದು ; ಶಿಕ್ಷಣವನ್ನು ಕುರಿತು ಎರಡು ; ರಾಜಕೀಯ ಹಾಗೂ ಇನ್ನಿತರ ಸಂಗತಿಗಳನ್ನು ಕುರಿತು ಏಳು ; ಜತೆಗೆ ಐವತ್ತು ಪುಟಗಳಷ್ಟು ದೀರ್ಘವಾದ ಪ್ರವಾಸ ಕಥನ ಒಂದು. ಇದು ಈ ಕೃತಿಯ ಸ್ವರೂಪ.

ಈ ಕೃತಿಯಲ್ಲಿ ವೆಂಕಟರಾಂ ಅವರ ವಿಶೇಷವಾದ ಲೋಕಜ್ಞಾನ, ಸಾಹಿತ್ಯ, ತತ್ವಜ್ಞಾನ, ಶಿಕ್ಷಣ ಹಾಗೂ ರಾಜಕಾರಣಗಳಬಗ್ಗೆ ಅವರಿಗಿದ್ದ ಗಾಢವಾದ ಕಾಳಜಿ ಮತ್ತು ಚಿಂತನೆಗಳು, ಅತ್ಯಂತ ಮಾನವೀಯ ವಿಚಾರವಂತನೊಬ್ಬನ ವ್ಯಕ್ತಿತ್ವವನ್ನು ಪರಿಚಯ ಮಾಡಿಕೊಡುತ್ತವೆ. ಅನಂತಮೂರ್ತಿಯವರ 'ಸಂಸ್ಕಾರ', 'ಭಾರತೀಪುರ' ಶ್ರೀಕೃಷ್ಣ ಆಲನಹಳ್ಳಿಯವರ 'ಕಾಡು', ಕಾರಂತರ, ತ್ರಿವೇಣಿಯವರ ಹಾಗೂ ನಿರಂಜನರ ಕಾದಂಬರಿಗಳು—ಇವುಗಳನ್ನು ಕುರಿತು ವೆಂಕಟರಾಂ ಮಾಡಿರುವ ವಿಮರ್ಶೆಗಳು, ಈ ದಿನ ನಮಗೆ ಅಗತ್ಯವಾಗಿದ್ದ ವಿಮರ್ಶನ ಪ್ರಜ್ಞೆಯೊಂದನ್ನು ಪರಿಚಯ ಮಾಡಿಕೊಡುತ್ತವೆ. ಭಗವದ್ಗೀತೆ ಮತ್ತು ದಾಸ್ತೋವಸ್ಕಿಯ 'ಅಪರಾಧ ಮತ್ತು ಶಿಕ್ಷೆ' ಕಾದಂಬರಿಯ – ತೌಲನಿಕ ಚಿಂತನೆಯಂತೂ, ಸಾಹಿತ್ಯ ವಿಮರ್ಶಕನೊಬ್ಬನಿಗೆ ಇರಬೇಕಾದ ತಾತ್ವಿಕ ಹಿನ್ನೆಲೆಯ ಸ್ವರೂಪವೇನೆಂಬುದನ್ನು ಮನದಟ್ಟು ಮಾಡಿ ಕೊಡುತ್ತದೆ. ಈ ಎಲ್ಲ ಕಾದಂಬರಿಗಳ ಬಗ್ಗೆ ವೆಂಕಟರಾಂ ಅವರಿಗಿದ್ದ ಒಳನೋಟಗಳು

ಮತ್ತು ತಕ್ಕ ವೈಚಾರಿಕ ನೆಲೆಗಳು, ಅವರ ವಿಮರ್ಶೆಯಲ್ಲಿ ವಿಶೇಷ ರೀತಿಯು ವಾಗಿವೆ. ಮತ್ತು ಇಂದು ಆ ಕಾದಂಬರಿಗಳನ್ನು ಕುರಿತು ಮಾತನಾಡುವವರು ಅಗತ್ಯವಾಗಿ ಗಮನಿಸಬೇಕಾದವುಗಳಾಗಿವೆ. ಶಿಕ್ಷಣವನ್ನು ಕುರಿತು, ಶಿಕ್ಷಣ ಮಾಧ್ಯಮ ವನ್ನುಕುರಿತು ಮತ್ತು ಹೈಸ್ಕೂಲಿನ ಪಠ್ಯ ಪುಸ್ತಕಗಳೊಳಗಿನ ಅಸಾಂಗತ್ಯ, ಅಸಮರ್ಪಕತೆ ಹಾಗೂ ಅವಿವೇಕಗಳನ್ನು ಕುರಿತು, ವೆಂಕಟರಾಂ ಅವರು ಬರೆದಿರುವ ಸಂಗತಿಗಳನ್ನು, ಆಕ್ಷೇತ್ರಗಳಿಗೆ ಸಂಬಂಧಪಟ್ಟವರು ಗಮನಿಸುವುದು ಅಗತ್ಯವಾಗಿದೆ. ರಾಜಕೀಯವನ್ನು ಕುರಿತ ಲೇಖನವೊಂದರಲ್ಲಿ ಒಂದೆಡೆ "ಭಾರತದಲ್ಲಿ ಕೇಂದ್ರ ಮತ್ತು ರಾಜ್ಯಗಳಲ್ಲಿ ಕಳೆದ ಇಪ್ಪತ್ತೈದು ವರ್ಷಗಳಲ್ಲಿ ಅಧಿಕಾರ ನಡೆಸಿದ ಸರ್ಕಾರಗಳಿಗೆ ಯಾವುದಕ್ಕೂ ಭಾರತೀಯ ಬುದ್ಧಿ ಇರಲಿಲ್ಲ... 'ಭಾರತೀಯಬುದ್ಧಿ' ಎಂಬುದನ್ನು ನಾವು ಇಲ್ಲಿ ಸಾಂಸ್ಕೃತಿಕ ಅಥವಾ ಆಧ್ಯಾತ್ಮಿಕ ಅರ್ಥದಲ್ಲಿ ಬಳಸುತ್ತಿಲ್ಲ, ಭಾರತೀಯ ವಸ್ತುಸ್ಥಿತಿಗೆ ನಿಷ್ಠವಾದ, ಆ ವಸ್ತುಸ್ಥಿತಿಯನ್ನು ಗ್ರಹಿಸಿ ಅದಕ್ಕೆ ಅನುರೂಪವಾದ ಪರಿಹಾರಗಳನ್ನು ಹುಡುಕಿ ಅನ್ವಯಿಸಬಲ್ಲ ಬುದ್ಧಿ ಎಂಬುದು ನಮ್ಮ ತಾತ್ಪರ್ಯ" (ಪು. 123). – ಎಂದು ವೆಂಕಟರಾಂ ಬರೆಯುತ್ತಾರೆ. ಇಪ್ಪತ್ತೊಂದನೆಯ ಶತಮಾನಕ್ಕೆ ನಮ್ಮ ರಾಷ್ಟ್ರವನ್ನು ತೆಗೆದುಕೊಂಡು ಹೋಗು ತ್ತಿದ್ದೇವೆ ಎಂದು ಘೋಷಿಸುವ ನಮ್ಮ ನಾಯಕರು ಈ ಮಾತನ್ನು ಕುರಿತು ಗಂಭೀರ ವಾಗಿ ಯೋಚಿಸಬೇಕು.

ಅತ್ಯಂತ ಪ್ರಖರವಾದ ವಿಚಾರವಂತರೂ, ಸಮಾಜವಾದಿಗಳೂ, ಆದ ವೆಂಕಟರಾಂ ಅಂಥವರ ನಿಧನದಿಂದ ನಮಗೆ ಆಗಿರುವ ನಷ್ಟ ಎಂಥದೆಂಬುದು, ಈ ಪುಸ್ತಕವನ್ನು ಓದಿದಮೇಲೆ ನಮ್ಮನ್ನು ಕಾಡುವ ಹಾಗೂ ಕಲಕುವ ಸಂಗತಿಯಾಗಿದೆ.

'ಅಡಿಗರ ಲೇಖನಗಳು ಮತ್ತು ಮುನ್ನುಡಿಗಳು', ಒಟ್ಟು ಇಪ್ಪತ್ತಾರು ಲೇಖನಗಳು ಮತ್ತು ಎಂಟು ಮುನ್ನುಡಿಗಳನ್ನು ಒಳಗೊಂಡ 176 ಪುಟಗಳ ಒಂದು ಪುಸ್ತಕವಾಗಿದೆ. ಮೊದಲ ಇಪ್ಪತ್ತಾರು ಲೇಖನಗಳಲ್ಲಿ, ಮೊದಲನೆಯದೊಂದನ್ನು ಬಿಟ್ಟರೆ, ಉಳಿದವೆಲ್ಲ ಕೇವಲ ನಾಲ್ಕು ಪುಟಗಳ ಚೌಕಟ್ಟನ್ನುಳ್ಳವು. ಈ ಒಂದೊಂದು ಕಿರುಲೇಖನಗಳೂ, ಈ ದೇಶದ ಸಾಮಾಜಿಕ, ಶೈಕ್ಷಣಿಕ, ರಾಜ ಕೀಯ ಸಂಗತಿಗಳನ್ನು ಕುರಿತವು. ಒಂದೊಂದು ಲೇಖನವೂ ಹರಳುಗೊಳಿಸಿದ ಆಲೋಚನೆಯ ಪರಿಣಾಮಗಳಾಗಿವೆ. ನಮ್ಮ ದೇಶ ಎದುರಿಸುತ್ತಿರುವ ಬಿಕ್ಕಟ್ಟು ಗಳನ್ನು ಕುರಿತು, ರಾಜಕೀಯ ಭ್ರಷ್ಟಾಚಾರಗಳನ್ನು ಕುರಿತು, ಮೌಲ್ಯಪ್ರಜ್ಞೆ ಯುಳ್ಳ ಮನಸ್ಸೊಂದು ತೋರುವ ವ್ಯಗ್ರವಾದ ಹಾಗೂ ಪ್ರಾಮಾಣಿಕವಾದ ಪ್ರತಿಕ್ರಿಯೆಗಳಾಗಿವೆ. ಎಲ್ಲಾ ಲೇಖನಗಳಲ್ಲಿಯೂ, ತೀರಾ ಖಚಿತವಾದ ನೇರವಾದ ನಿರ್ಭೀತ ವಿಚಾರಗಳು ಮಡುಗಟ್ಟಿವೆ.

ಇನ್ನುಳಿದ ಎಂಟು ವಿಮರ್ಶೆಯ ಬರೆಹಗಳು, ಅನಂತ ಮೂರ್ತಿ, ಲಂಕೇಶ್, ಕಂಬಾರ, ಚಿತ್ತಾಲ, ಜಿ. ಹೆಚ್. ನಾಯಕ ಇಂಥವರ ಕೃತಿಗಳಿಗೆ ಬೇರೆ ಬೇರೆಯ ಕಾಲಗಳಲ್ಲಿ ಅಡಿಗರು ಬರೆದ ಮುನ್ನುಡಿಗಳಾಗಿವೆ. ಈ ಸಮಗ್ರ ಕೃತಿಯು ಗದ್ಯ ತನ್ನದಿಟ್ಟತನ ಹಾಗೂ ಹೊಳಪಿನಿಂದ ಓದುಗರನ್ನು ಹಿಡಿದು ನಿಲ್ಲಿಸಿಕೊಳ್ಳುವ ಗುಣದಿಂದ ತುಂಬಿದೆ.



'ಶ್ರೀ ಕೃಷ್ಣದೇವರಾಯನ ದಿನಚರಿ' ಎಂಬುದು, ಎಂ. ವಿ. ಸೀತಾರಾಮಯ್ಯ ಹಾಗೂ ಎಸ್. ಆಚಾರ್ಯ ಇವರಿಂದ ಸಂಪಾದಿತವಾದ, ಹದಿನಾರನೆಯ ಶತಮಾನದ ಒಂದು ಗದ್ಯ ಕೃತಿಯಾಗಿದೆ. ಕೇವಲ ಐವತ್ತೂರು ಪುಟಗಳ ಈ ಕೃತಿಯಲ್ಲಿ ವಿಜಯನಗರದ ಚಕ್ರವರ್ತಿಯಾಗಿದ್ದ ಶ್ರೀಕೃಷ್ಣದೇವರಾಯನ ಆಳ್ವಿಕೆಯ ಇಪ್ಪತ್ತು ವರ್ಷಗಳ (ಕ್ರಿ. ಶ. 1509-1529) ವಿವರಗಳಿವೆ. ಈ ಕೃತಿಯು ಮೊದಲಲ್ಲಿ, 'ಶ್ರೀ ಕೃಷ್ಣರಾಯರ ದಿನಚರಿಯ ಕೃತ್ಯಗಳ ವಿಸ್ತಾರ' ಎಂಬ ಸೂಚನೆಯೊಂದರ ಆಧಾರದಮೇಲೆ, ಸಂಪಾದಕರು, ಈ ಕೃತಿಯನ್ನು 'ಶ್ರೀ ಕೃಷ್ಣದೇವರಾಯನ ದಿನಚರಿ' ಎಂದು ಕರೆದಂತೆ ತೋರುತ್ತದೆ. ಆದರೆ ಈ 'ದಿನಚರಿ'ಯನ್ನು ಆಧುನಿಕ ಅರ್ಥದಲ್ಲಿ 'ಡೈರಿ' ಎನ್ನುವುದಕ್ಕೆ ಸಂವಾದಿಯಾಗಿ ಭಾವಿಸುವುದು ಕಷ್ಟ. ಯಾಕೆಂದರೆ ಇವತ್ತು ದಿನಚರಿ (ಡೈರಿ) ಎಂದರೆ, ವ್ಯಕ್ತಿಗಳು ತಾವೇ ತಮ್ಮ ದೈನಂದಿನ ಕಾರ್ಯವಿಶೇಷಗಳನ್ನು ಅಥವಾ ವಿವರಗಳನ್ನು ಬರೆದಿಡುವ ಕ್ರಮ ಎಂದು ಅರ್ಥವಾಗುತ್ತದೆ; ಆದರೆ, ಈ 'ದಿನಚರಿ' ಶ್ರೀ ಕೃಷ್ಣದೇವರಾಯ ತಾವೇ ಸ್ವತಃ ಬರೆದು ಕೊಂಡದ್ದಲ್ಲ; ದೊರೆಯ ಅಪ್ಪಣೆಯಂತೆ ಇದನ್ನು ಮುಕ್ಕು ತಿಮ್ಮಯ್ಯ ಮತ್ತು ಮಾದಯ್ಯನವರ ಮಲ್ಲಯ್ಯ ಎಂಬ ಇಬ್ಬರು, ತಾಳೆಗರಿಗಳ ಮೇಲೆ ಬರೆದದ್ದು. ಹೀಗಾಗಿ 'ದಿನಚರಿ'ಗಿರುವ ವ್ಯಕ್ತಿ ವಿಶಿಷ್ಟತೆ ಇದಕ್ಕೆ ಇಲ್ಲ. ಆದರೂ ಇದರಲ್ಲಿ ಒಬ್ಬ ರಾಜನಾದವನು ಪ್ರತಿ ನಿತ್ಯ, ಬೆಳಿಗ್ಗೆ ಎದ್ದ ಹೊತ್ತಿನಿಂದ ರಾತ್ರಿ ಮಲಗುವವರೆಗೆ, ಏನೇನನ್ನು ಶಾಸ್ತ್ರ ಸಮ್ಮತವಾಗಿ ನಡೆಸಬಹುದೋ ಆ ಎಲ್ಲದರ ವಿವರಗಳೂ ಇಲ್ಲಿವೆ. ಹಾಗೆ ನಿಜವಾದ ರಾಜರು ನಡೆಸಬೇಕಾದ ದಿನ ನಿತ್ಯದ ವ್ಯವಹಾರಗಳ ಒಂದು ನಿರ್ದೇಶನ ಕೂಡಾ ಇದಾಗಬಹುದು. ಜವಾಬ್ದಾರಿ ಯುತವಾದ ಪ್ರಭುವೊಬ್ಬನು, ತನ್ನ ರಾಜ್ಯದ ಹಾಗೂ ಪ್ರಜೆಗಳ ಕ್ಷೇಮಕ್ಕಾಗಿ ಯಾವ ಎಚ್ಚರದಲ್ಲಿ ಇರಬೇಕೆಂಬುದನ್ನು ಈ ಬರೆಹ ಸೂಚಿಸುತ್ತದೆ. ಜತೆಗೆ ಈ 'ದಿನಚರಿ' ಒಳಕೊಳ್ಳುವ ಇಪ್ಪತ್ತು ವರ್ಷಗಳ ಅವಧಿಯಲ್ಲಿ ನಡೆದ ಅನೇಕ ಘಟನೆಗಳನ್ನೂ, ಸಂಗತಿಗಳನ್ನೂ ಇದು ದಾಖಲಿಸುತ್ತದೆ. ಈ ದಾಖಲೆಗಳಲ್ಲಿನ, ಚಾರಿತ್ರಿಕ ಅಂಕಿ-ಅಂಶಗಳಿಗೂ, ಅಂದಿನ ನಿಜವಾದ ಚರಿತ್ರೆಯಲ್ಲಿನ ಅಂಕಿ-ಅಂಶಗಳಿಗೂ ಅಲ್ಪ-ಸ್ವಲ್ಪ ಅಸಾಂಗತ್ಯಗಳಿದ್ದರೂ, ಈ ದಾಖಲೆಗಳಲ್ಲಿನ ಎಷ್ಟೋ ಸಂಗತಿಗಳು ಚರಿತ್ರೆಯ ದೃಷ್ಟಿಯಿಂದ ಮಹತ್ವದವುಗಳಾಗಿವೆ. ಎಲ್ಲಕ್ಕಿಂತ ಮಿಗಿಲಾಗಿ

ಹದಿನಾರನೆಯ ಶತಮಾನದ ಕನ್ನಡ ಗದ್ಯದ ಸ್ವರೂಪವನ್ನು ಈ ಕೃತಿ ಪರಿಚಯ ಮಾಡಿಕೊಡುತ್ತದೆ. ಈ ಗದ್ಯ ಅಂದಿನ ಆಡು ನುಡಿಯ ಧಾಟಿಯನ್ನು ದಾಖಲಿಸುತ್ತದೆ. ಇಂಥ ಒಂದು ಕೃತಿಯ ಸಂಪಾದಕರು ಅಭಿನಂದನೆಗೆ ಅರ್ಹರಾಗಿದ್ದಾರೆ,

'ಇಂಗ್ಲೆಂಡಿನ ರಂಗಭೂಮಿ' ಗಿರಡ್ಡಿ ಗೋವಿಂದರಾಜ ಅವರ ಮೂವತ್ತೇಳು ಪುಟಗಳ ಒಂದು ಪುಸ್ತಕ. 1972ನೇ ಅಕ್ಟೋಬರ್‌ದಿಂದ 1973 ನೇ ಸೆಪ್ಟಂಬರ್ ವರೆಗೆ, ಗಿರಡ್ಡಿಯವರು, ಇಂಗ್ಲೆಂಡಿನಲ್ಲಿ ವಿಶೇಷ ಅಧ್ಯಯನಕ್ಕೆಂದು ಹೋದಾಗ, ಅವರು ಅಂದು ಅಲ್ಲಿಂದ ನೋಡಿದ ನಾಟಕಗಳ ಆಧಾರದ ಮೇಲೆ, ಇಂಗ್ಲೆಂಡಿನ ಸಮಕಾಲೀನ ರಂಗಭೂಮಿಯ ಚಿತ್ರವನ್ನು ಈ ಕೃತಿಯಲ್ಲಿ ಮಾಡಿಕೊಟ್ಟಿದ್ದಾರೆ. ಲಂಡನ್ ನಗರವೊಂದರಲ್ಲೆ ಏಕಕಾಲಕ್ಕೆ ಸುಮಾರು ಐವತ್ತರಷ್ಟು ನಾಟಕಗಳು ನಡೆಯುವ ಸಂಗತಿಯನ್ನೂ ಅಗಾಥಾ ಕ್ರಿಸ್ತಿಯ ಪತ್ತೇದಾರಿ ಕಾದಂಬರಿಯ ಅಧಾರದ ಮೇಲೆ ರಚಿತವಾದ 'ಮೌಸ್‌ಟ್ರ್ಯಾಪ್' ಎಂಬ ಸಾಮಾನ್ಯನಾಟಕವೊಂದು, ಕಳೆದ ಇಪ್ಪತ್ತೊಂದು ವರ್ಷಗಳಿಂದಲೂ ಸತತವಾಗಿ ಪ್ರದರ್ಶಿತವಾಗುತ್ತಿರುವ ವಿಷಯವನ್ನೂ ಗಿರಡ್ಡಿಯವರು ಪ್ರಸ್ತಾಪಿಸಿ, ನಮ್ಮ ದೇಶದಲ್ಲಿ, ಅದರಲ್ಲೂ ಕರ್ನಾಟಕದಲ್ಲಿ ನಡೆಯುವ ರಂಗಚಟುವಟಿಕೆಗಳನ್ನು ತೌಲನಿಕವಾಗಿ ವಿಮರ್ಶೆಗೆ ಗುರಿಪಡಿಸುತ್ತಾರೆ. ಇಂಗ್ಲೆಂಡಿನಲ್ಲಿ, ಅವರಿಗೆದೊರೆತ ಅವಕಾಶಗಳಲ್ಲಿ, ಅವರು ಕಂಡ ನಾಟಕಗಳ ವೈವಿಧ್ಯತೆಗಳು, ರಂಗ ಪರಿಕರಗಳು, ಅಭಿನಯ ವಿಶೇಷಗಳು, ಪ್ರೇಕ್ಷಕರ ಅಭಿರುಚಿಗಳು, ನಾಟಕಕಾರರಿಗೂ, ನಿರ್ದೇಶಕರಿಗೂ, ನಟರಿಗೂ ರಂಗ ನಿರ್ದೇಶಕರಿಗೂ ಒದಗುವ ಸಂಘರ್ಷಗಳು ಮತ್ತು ರಂಗಭೂಮಿಯ ಬೆಳವಣಿಗೆಯಲ್ಲಿ ಅಲ್ಲಿನ ಪತ್ರಿಕೆಗಳು ವಹಿಸುವ ಪಾತ್ರ-ಇತ್ಯಾದಿಗಳನ್ನು, ಸ್ವಾರಸ್ಯವಾಗಿ ನಿರೂಪಿಸುವ ಈ ಪುಸ್ತಕದಿಂದ ಕನ್ನಡ ರಂಗಭೂಮಿಯಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡವರು ಕಲಿಯಬಹುದಾದದ್ದು ಸಾಕಷ್ಟಿದೆ.

ಮು. ನಿ. ತೋಳನೂರ ಅವರ ಬರೆದಿರುವ 'ಕೆನೆ ಮೊಸರು' ಎನ್ನುವುದು ನಲವತ್ತೈದು ಐತಿಹಾಸಿಕ ಘಟನೆಗಳನ್ನು ಕುರಿತು ಮಕ್ಕಳಿಗಾಗಿ ಬರೆದ, 88 ಪುಟಗಳ ಒಂದು ಪುಸ್ತಕ. ಒಂದೊಂದು ವೃತ್ತಾಂತವೂ, ನೀತಿ, ಆದರ್ಶ ಹಾಗೂ ಮೌಲ್ಯಗಳನ್ನು ಪರಿಚಯಮಾಡಿಕೊಡುವ ಉದ್ದೇಶದ್ದಾಗಿದೆ. ಒಂದರ್ಥದಲ್ಲಿ 'ನೀತಿಚಿಂತಾಮಣಿ'ಯ ಮುಂದುವರಿಕೆ ಇದು. ಹೀಗಾಗಿ ಇದು ಅಂಥ ವಿಶೇಷವನ್ನೇನೂ ಪ್ರಕಟಿಸುವುದಿಲ್ಲ.

ಹರಿಹರಪ್ರಿಯರ 'ಸಾಂಸ್ಕೃತಿಕ ದಾಖಲೆಗಳು' ಮತ್ತು ಆರ್. ವೆಂಕಟೇಶ್ ಅವರ 'ವಿಚಾರ ತರಂಗ'—ಈ ಎರಡೂ ಹೆಚ್ಚು ಕಡಮೆ ಒಂದೇ ವರ್ಗಕ್ಕೆ ಸೇರುವ ಕೃತಿಗಳು. ಅಂದರೆ ಈ ಎರಡೂ ಕೃತಿಗಳೊಳಗಿನ ಲೇಖನಗಳು, ಬೇರೆ ಬೇರೆಯ ಪತ್ರಿಕೆಗಳಿಗೆ ಬರೆದಂಥ ಲೇಖನಗಳು. ಹರಿಹರಪ್ರಿಯರ ಕೃತಿಯನ್ನು

ಓದಬಹುದು, ಆದರೆ ವೆಂಕಟೇಶ್ ಅವರ ಕೃತಿ ಮಾತ್ರ ತನ್ನ ಗೊಂದಲದಿಂದ ಸಲೀಸಾಗಿ ಓದಿಸಿಕೊಳ್ಳುವ ಗುಣವನ್ನು ಕೂಡಾ ಪಡೆದುಕೊಂಡಿಲ್ಲ.

ಹರಿಹರಪ್ರಿಯರ 'ಸಾಂಸ್ಕೃತಿಕ ದಾಖಲೆ'ಗಳ ವಸ್ತು, ಬೆಂಗಳೂರಿನಲ್ಲಿ ಮತ್ತಿತರ ಕಡೆ ನಡೆದ ಸಾಂಸ್ಕೃತಿಕ ಸಮಾರಂಭಗಳ ಮತ್ತು ಚಲನಚಿತ್ರನಟಿ ಜಯಮಾಲಾ ಅವರೊಂದಿಗೆ ನಡೆಸಿದ ಸಂದರ್ಶನದ ವರದಿಗಳಾಗಿವೆ. ಇಲ್ಲಿರುವ ಹದಿಮೂರು ಲೇಖನಗಳಲ್ಲಿ 'ಪರ್ವ: ಒಂದು ಅಪೂರ್ವಗೋಷ್ಠಿ', ಎಂಬ ಬರೆಹವನ್ನು ಹೊರತು ಪಡಿಸಿದರೆ, ಇನ್ನುಳಿದವೆಲ್ಲ ಕೇವಲ 'ವರದಿ'ಗಳ ಮಟ್ಟದಲ್ಲೇ ಉಳಿದಿವೆ. ಸಮಕಾಲೀನ ಸಾಹಿತ್ಯಕ ಚಳುವಳಿಗಳ ಬಗ್ಗೆ ಮತ್ತು 'ಯೂನಿವರ್ಸಿಟಿ ಸಾಹಿತಿ'ಗಳ ಬಗ್ಗೆ ಹರಿಹರಪ್ರಿಯರು ತಾಳುವ ಧೋರಣೆಗಳು ಯಾವುದೇ ಮೌಲ್ಯ ಪ್ರಜ್ಞೆಯ ನ್ನಾಗಲೀ, ವಿವೇಕವನ್ನಾಗಲಿ ಪ್ರಕಟಿಸುವಂತೆ ತೋರುವುದಿಲ್ಲ. ಒಂದು ಕಡೆ, "ದುಃಖದ ದುರಂತದ ಸಂಗತಿಯೆಂದರೆ, ಈ ಪ್ರಗತಿಶೀಲ ಹಾಗೂ ನವ್ಯ ಎಂಬ ಎರಡು ಪಂಥಗಳು ಬೆಳೆದು ಉಪಕಾರ ಮಾಡುವುದಕ್ಕೆ ಬದಲು ಆ ಪಂಥಗಳಲ್ಲಿ ಅಪರವರೊಳಗೇ ಕಿತ್ತಾಡಿ, ಕಚ್ಚಾಡಿ ಒಬ್ಬರನ್ನೊಬ್ಬರು ಹೀನಾಮಾನಾ ಜಾಲಾಡಿ ಕೊನೆಗೆ ಸೊಲ್ಲೇ ಇಲ್ಲದಂತೆ ಉಡುಗಿ ಹೋದದ್ದು ಪರಮಾಶ್ಚರ್ಯ" (ಪು. 21) ಎಂದು ಬರೆದಿದ್ದಾರೆ. 'ಸಾಂಸ್ಕೃತಿಕ ದಾಖಲೆ'ಗಳನ್ನು ಹರಿಹರ ಪ್ರಿಯರು ಮಾಡುವ ವಿಧಾನ ಇದು! ಇನ್ನೊಂದು ಇಂಥದೇ ಆಣಿಮುತ್ತು ಹೀಗಿದೆ: "ಯೂನಿವರ್ಸಲ್ ಕಡೆ ಮುಖ ಮಾಡಬೇಕಾಗಿದ್ದ ಸಾಹಿತ್ಯ ಯೂನಿವರ್ಸಿಟಿಯ ಕಡೆಗೆ ತಿರುಗಿ ವಿರೂಪ ಗೊಳ್ಳತೊಡಗಿತು. ಅಲ್ಲಿ ಜನ್ಮ ತಳೆದ ನವೋದಯ ಇರಲಿ; ನವ್ಯ, ಬಂಡಾಯ, ಕೊನೆಗೆ ದಲಿತಪಂಥಗಳು ಪೂತನಿಯಂತೆ ತಮ್ಮ ಹುಟ್ಟಿಗೇನೇ ಅಸಹ್ಯಗೊಳ್ಳು ವಂತಾದವು.'' (ಪು. 90). ಯಾವುದೇ ಸಾಂಸ್ಕೃತಿಕ ಜವಾಬ್ದಾರಿ ಇಲ್ಲದವರ ಈ 'ಸಾಂಸ್ಕೃತಿಕ ದಾಖಲೆ'ಗಳನ್ನು ಏನೆಂದು ಕರೆಯಬೇಕೋ ನಮಗಂತೂ ಗೊತ್ತಾಗು ವುದಿಲ್ಲ.

ಇನ್ನು ಆರ್. ವೆಂಕಟೇಶ್ ಅವರ 'ವಿಚಾರ ತರಂಗ' ತೀರಾ ಗೊಂದಲದಿಂದ ತುಂಬಿದ, 294 ಪುಟಗಳ ಒಂದು ಕೃತಿ. 'ಹರಿಹರ ಪ್ರಿಯ'ರ ಬರೆಹಕ್ಕಾದರೂ ಒಂದು ಆಕಾರವಿದೆ; ಆದರೆ ವೆಂಕಟೇಶ್ ಅವರ 'ವಿಚಾರ ತರಂಗ'ದೊಳಗಿನ 'ವಿಚಾರ'ದ 'ತರಂಗ'ಗಳು ಹರಿದದ್ದೇ ಒಂದುದಾರಿ–ಎಂಬಂತಿದೆ, ಒಂದೊಂದು ಲೇಖನದ ಸ್ವರೂಪ. ನಾಲ್ಕು ಉಪವಿಭಾಗಗಳಲ್ಲಿ ಅಳವಡಿಕೆಯಾಗಿರುವ ಒಟ್ಟು ಎಂಭತ್ತೂರು ಲೇಖನಗಳನ್ನು ವೆಂಕಟೇಶ್ ಅವರು 1972 ರಿಂದ 1974ರ ಅವಧಿಯ ಹಲವು ಪತ್ರಿಕೆಗಳಿಗೆ ಮತ್ತು ಇತ್ತೀಚೆಗೆ ಬರೆದದ್ದಾಗಿ ಹೇಳಿಕೊಂಡಿದ್ದಾರೆ. ''ದೇವರುಗಳನ್ನೆಲ್ಲಾ ನೂಕಾಚೆ ತಳ್ಳಿ'' ಎಂದೆಂದೂ ರಾಮಾಯಣ ಬರೆದು, ವಾಲ್ಮೀಕಿಯನ್ನು ಗುರುವೆಂದೂ, ವಿಶ್ವಕವಿಯೆಂದೂ ಕೊಂಡಾಡಿಯೂ ಕಡೆಗೆ

'ವಾಲ್ಮೀಕಿಗೊಂದು ಎಚ್ಚರಿಕೆ' ಕೊಟ್ಟು, ಮತ ಮೌಢ್ಯವನ್ನು ಖಂಡಿಸಿ, ವಿಜ್ಞಾನದ ಡಂಗೂರ ಹೊಡೆದು, ಆಧ್ಯಾತ್ಮಿಕತೆಯ ನಟನೆ ಮಾಡಿ ಎಲ್ಲರಿಂದಲೂ ಪ್ರಶಂಸೆ ಗಳಿಸುವ 'ರಾಜಕಾರಣದ ಕಲೆಗಾರಿಕೆ' ತೋರುವವ ನಾನಲ್ಲ'' (ಪು. 8) ಎಂದು ಆರಂಭದ ಎಂಟು ಪುಟಗಳ ಲೇಖನವೊಂದರಲ್ಲಿ ವೆಂಕಟೇಶ್ ಘೋಷಿಸಿಕೊಂಡಿದ್ದಾರೆ. ಮೇಲಿನ ಮಾತು ಶ್ರೀ ಕುವೆಂಪು ಅವರನ್ನು ಕುರಿತವು. ಆದರಲ್ಲೂ ''ದೇವರು ಗಳನ್ನೆಲ್ಲಾ ನೂಕಾಚೆ ತಳ್ಳಿ'' ಎಂಬುದು "ನೂರ ದೇವರನ್ನೆಲ್ಲ ನೂಕಾಚೆ ದೂರ" ಎಂಬ ಪಂಕ್ತಿಯ ವಿಕೃತಪಾಠ. ಈ ವಿಕೃತ ಮನಸ್ಸಿನ ವಿಚಾರಲಹರಿಗಳೇ ಈ ಪುಸ್ತಕದ ತುಂಬ ತುಂಬಿವೆ. ಇನ್ನೊಂದು, ಕುವೆಂಪು ಅವರನ್ನು ಕುರಿತ ಹೇಳಿಕೆ ಹೀಗಿದೆ: ''ಅಲಂಕಾರ, ರಸ, ರೀತಿ, ಗುಣ, ವಕ್ರೋಕ್ತಿ, ಛಂದಸ್ಸು, ಅನುಭೂತಿಗಳೊಂದಕ್ಕೂ ಬೆಲೆ ಕೊಡದೆ ತನ್ನದೇ ಮಹಾಛಂದಸ್ಸೆಂದು ಬೀಗುವವ ಮಹಾಕವಿಯೇ?' (ಪು. 42) : ಇಂಥ ಅಸಂಬದ್ಧ ಮಾತಿನ ಮಾಲೆ ಯನ್ನು ಹೇಗೆ ಮೆಚ್ಚಬೇಕೊ ತಿಳಿಯದು, ಕುವೆಂಪು ಮಾತ್ರವಲ್ಲ, ಕಾರಂತರನ್ನು ಕುರಿತು, ''ಶಿವರಾಮ ಕಾರಂತರು ಗಾಂಧೀಜಿಗೆ ಪಾಠಕಲಿಸಿದುದಾಗಿಯೂ ಅಹಂಕಾರ ನಿಧಿಗಳೆಂಬಂತೆ ತಮ್ಮ ಹಿರಿಮೆಯನ್ನೇ ಹೊಗಳಿಕೊಂಡು, ಸಂಸ್ಕೃತ ಗೊತ್ತಿಲ್ಲದೆಯೂ ಭಗವದ್ಗೀತೆಯ ಬಗ್ಗೆ ತಪ್ಪಾಗಿ ವಾದಿಸುವುದು ಮೂಲಭೂತ ಹಕ್ಕೆಂದೆಂಬಂತೆ ವಾದಿಸುವುದು ವಿಮರ್ಶೆಯೆ? (ಪು. 44) ಎಂದು, ಕಾರಂತರನ್ನೂ ತಮ್ಮ 'ಪ್ರತಿಪಕ್ಷ'ವೆಂದು ಭಾವಿಸುವುದು ಮೂರ್ಖತನದ ಪರಮಾವಧಿ. ಲೇಖನದ ಆರಂಭದಲ್ಲಿ ಮಹಾವಿಚಾರವಂತರ ಹಾಗೆ ಪ್ರಶ್ನೆಗಳನ್ನು ಹಾಕುವುದು, ಅನಂತರ ಮೊದಲು ಎತ್ತಿದ ಪ್ರಶ್ನೆಗಳನ್ನ ನಿರಾಕರಿಸುವುದು, ತಮ್ಮ ಪರಿಸರದ ವಿಚಾರವಂತ ರನ್ನು, ಲೇಖಕರನ್ನು ತಮ್ಮ 'ಪ್ರತಿಪಕ್ಷ'ದವರೆಂಬಂತೆ ಭಾವಿಸಿ ಮಾತನಾಡುವುದು, ಇದೇ ಪುಸ್ತಕದ ಬರೆಹಗಳ ಲಕ್ಷಣಗಳಾಗಿವೆ. 'ವಿಚಾರ ತರಂಗ' ಎಂಬ ಹೆಸರಿನಿಂದ ಪ್ರಕಟವಾಗಿರುವ ಈ ಪುಸ್ತಕ ವಿಚಾರದ ಗೊಂದಲದಿಂದ ತುಂಬಿ, ಓದುಗರನ್ನು ಕಂಗೆಡಿಸುವುದರಲ್ಲಿ ಸಂಶಯವಿಲ್ಲ.

'ಆಧುನಿಕ ಕನ್ನಡ ಬರಹಗಾರರು' ಎಂಬ ಕೃತಿ, ಇಂಗ್ಲಿಷಿನಲ್ಲಿ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಕಟಿಸಿರುವ who is who of Indian writers (1961) ಸಂಕಲನದ ಮಾದರಿಯಲ್ಲಿ, ಕನ್ನಡ ಬರೆಹಗಾರರನ್ನು ಕುರಿತು ಸಂಪಾದಿತವಾಗಿರುವ 430 ಪುಟಗಳ ಒಂದು ಕೈಪಿಡಿಯಾಗಿದೆ. ಈ ಸಂಪುಟದಲ್ಲಿ ಒಟ್ಟು 1073 ಕನ್ನಡ ಬರೆಹಗಾರರ ಮಾಹಿತಿ ಇದೆ. ಮೈಸೂರು ವಿಶ್ವವಿದ್ಯಾಲಯದ ಪ್ರಸಾರಾಂಗವು ಇದಕ್ಕಾಗಿ ರಚಿಸಿದ ಸಂಪಾದಕ ಮಂಡಲಿಯ (ಆ ಮಂಡಲಿಯ ಸದಸ್ಯರ ವಿವರಗಳು ಇಲ್ಲಿ ಕಾಣಿಸಿಲ್ಲ) ಮೂಲಕ, ಸಿದ್ಧಪಾದ ಮಾಹಿತಿಯ ವಿವರಗಳಿಗನುಸಾರವಾಗಿ ಪಡೆದ ಕನ್ನಡ ಬರೆಹಗಾರರ ವ್ಯಕ್ತಿ ವಿವರಗಳನ್ನು, ಈ ಸಂಕಲನದಲ್ಲಿ ಕೂಡಿಸಿ,

ಪ್ರಕಟಿಸಿದೆ. ಒಂದರ್ಥದಲ್ಲಿ ಬಹು ಸಂಖ್ಯೆಯ ಕನ್ನಡ ಬರೆಹಗಾರರ ಈ ಬಗೆಯ ಮಾಹಿತಿಯನ್ನು ಒದಗಿಸುವ ಈ ಬಗೆಯ ಸಂಪುಟ ಕನ್ನಡದಲ್ಲಿ ಈವರೆವಿಗೂ ಬಂದಿರಲಿಲ್ಲ ಎಂಬುದನ್ನು ನೆನೆದರೆ, ಈ ಸಂಪುಟದ ವಿಶೇಷವೇನೆಂಬುದು ಸ್ಪಷ್ಟವಾಗುತ್ತದೆ.

ಈ ಕೆಲಸ 1975ರಷ್ಟು ಹಿಂದೆಯೇ ಪ್ರಾರಂಭವಾಯಿತೆಂದೂ, ವಿಷಯ ಸಂಗ್ರಹ ಮಾಡುವುದು ತುಂಬ ಕಷ್ಟವಾಯಿತೆಂದೂ ಹೀಗಾಗಿ ಎಷ್ಟೋ "ಸುಪರಿಚಿತ ಪ್ರಸಿದ್ಧ ಹೆಸರುಗಳೇ ಇಲ್ಲದಿದ್ದರೇ ಅದು ಆಶ್ಚರ್ಯವಲ್ಲ" ಎಂದು ಪ್ರಸಾರಾಂಗದ ನಿರ್ದೇಶಕರು ಮುನ್ನುಡಿಯಲ್ಲಿ ಹೇಳಿಕೊಂಡಿದ್ದಾರೆ. ಸುಮಾರು ಹತ್ತುವರ್ಷಗಳಷ್ಟು ದೀರ್ಘಕಾಲ ತೆಗೆದುಕೊಂಡ ಕಾರಣಕ್ಕಾಗಿಯಾದರೂ, ಇದು ಈಗಿರುವುದಕ್ಕಿಂತ ಇನ್ನೂ ನಿರ್ದಿಷ್ಟವಾಗಿರಬೇಕಾಗಿತ್ತು ಎಂದು ನಮಗನ್ನಿಸುತ್ತದೆ. ಒಂದು ಸಮಾಧಾನದ ಸಂಗತಿ ಎಂದರೆ, ಕನ್ನಡದ ಬಹುತೇಕ ಮುಖ್ಯ ಲೇಖಕರ ಮಾಹಿತಿ ಇಲ್ಲಿದೆ. ಆದರೆ, ಅ.ನ.ಕೃ. ನಿರಂಜನ, ತೀ.ನಂ.ಶ್ರೀ., ಡಿ ಎಲ್. ನರಸಿಂಹಾಚಾರ್ಯ ಗೋವಿಂದ ಪೈ, ಬಿ.ಎಂ.ಶ್ರೀ.–ಇಂಥವರ ಹೆಸರೇ ಇಲ್ಲದಿರುವುದು ಈ ಸಂಪುಟದ ದೊಡ್ಡ ಕೊರತೆಯಾಗಿದೆ. ಅದರ ಬದಲು ಕೇವಲ ಒಂದೇ ಒಂದು ಕೃತಿಯನ್ನು ಪ್ರಕಟಿಸಿದವರ ಸಂಖ್ಯೆ ಸಾಕಷ್ಟಿದೆ; ಆ ಒಂದೇ ಒಂದು ಕೃತಿ ಕೂಡಾ ಸ್ವಂತ ಹಾಗೂ ಸಾಹಿತ್ಯ ಕೃತಿಯಾಗಿರದೆ, ಅನ್ಯಭಾಷೆಯ ಅನುವಾದಿತ ಕೃತಿಯೋ ಅಥವಾ ಸಂಪಾದಿತ ಕೃತಿಯೋ ಆಗಿದೆ. ಹಾಗೆಯೇ, ಗಣಿತವೋ, ವೈದ್ಯಕೀಯವೋ, ರಸಾಯನಶಾಸ್ತ್ರ, ತರ್ಕಶಾಸ್ತ್ರ ಇಂಥ ವಿಷಯಗಳನ್ನು ಕುರಿತು ಒಂದೋ, ಎರಡೋ ಪುಸ್ತಕಗಳನ್ನು ಬರೆದವರ ಹೆಸರುಗಳೂ ಇದರಲ್ಲಿಲ್ಲವೆ. ಹಾಗೆಯೇ ಇಪ್ಪತ್ತು ಮೂವತ್ತು ಕೃತಿಗಳನ್ನು ಪ್ರಕಟಿಸಿರುವರೆಂದು ಇಲ್ಲಿ ದಾಖಲೆಯಾಗಿರುವ ಅನೇಕರ ಹೆಸರುಗಳನ್ನು, ಗಂಭೀರವಾದ ಸಾಹಿತ್ಯದ ವಿದ್ಯಾರ್ಥಿ. ಗಮನಿಸುತ್ತಿರುವುದು ಇದೇ ಮೊದಲೆನ್ನುವ ಭಾವನೆ, ಇಲ್ಲಿನ ಅನೇಕ ಮಾಹಿತಿಗಳಿಂದ ಉಂಟಾಗುತ್ತದೆ. 'ಕನ್ನಡ ಬರಹಗಾರರು' ಎಂದರೆ ಏನು? ಅವರುಗಳ ಹೆಸರನ್ನು ಇಂಥ ಒಂದು ಸಂಪುಟದಲ್ಲಿ ದಾಖಲು ಮಾಡಬೇಕಾದರೆ ಅನುಸರಿಸಬೇಕಾದ ಮಾನದಂಡಗಳು ಯಾವುವು ಎಂಬ ಬಗ್ಗೆ ಈ ಸಂಕಲನದ ಸಂಪಾದಕರು ಜವಾಬ್ದಾರಿಯನ್ನು ವಹಿಸಿಕೊಂಡಂತೆ ತೋರುವುದಿಲ್ಲ. ಕನ್ನಡದಲ್ಲಿ ಏನನ್ನು ಬರೆದಿದ್ದರೂ, ಎಷ್ಟನ್ನು ಬರೆದಿದ್ದರೂ, ಆಯಾ ಬರೆಹಗಾರರು ಪ್ರಸಾರಾಂಗವು ಪತ್ರಿಕೆಗಳಲ್ಲಿ ಈ ಬಗ್ಗೆ ಹೊರಡಿಸಿದ ಜಾಹಿರಾತನ್ನು ನೋಡಿ, ಕಳುಹಿಸಿಕೊಟ್ಟ ಮಾತ್ರಕ್ಕೆ ಅದೆಲ್ಲವನ್ನೂ ತಕ್ಕ ವಿವೇಚನೆ ಇಲ್ಲದೆ ಈ ಸಂಪುಟವಲ್ಲಿ ಸೇರಿಸಿದ್ದು ಸರಿಯೆ ಎಂಬುದು ಇದನ್ನು ನೋಡಿದ ಯಾರಾದರೂ ಕೇಳಬಹುದಾದ ಪ್ರಶ್ನೆಯಾಗಿದೆ. ಕೆಲವು ಲೇಖಕರು, ತಾವು ಆಯಾ ಊರಿನ ಕರ್ನಾಟಕ ಸಂಘದ ಕಾರ್ಯದರ್ಶಿಯಾಗಿರುವ, ಜಿಲ್ಲಾ

ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿರುವ, ಕೆಲವು ವಿಶ್ವವಿದ್ಯಾಲಯಗಳ ಬೋರ್ಡ್ ಆಫ್ ಸ್ಟಡೀಸ್ ಸದಸ್ಯರಾಗಿರುವ-ವಿಷಯಗಳು ಇಲ್ಲಿ ದಾಖಲೆಯಾಗಿವೆ. ಈ 'ಹುದ್ದೆ', 'ಪದವಿ'ಗಳು ಕೇವಲ ತಾತ್ಕಾಲಿಕವಾಗಿದ್ದು ಅವುಗಳನ್ನು ಇಲ್ಲಿ ಕಾಣಿಸುವುದು ಅನಗತ್ಯವಾಗಿತ್ತು. 'ಪರಿಷತ್ತಿನ ಕನ್ನಡ ರತ್ನ ಪರೀಕ್ಷೆಯಲ್ಲಿ ಮತ್ತು ಮೈಸೂರು ವಿಶ್ವವಿದ್ಯಾಲಯದ ಕನ್ನಡ ಡಿಪ್ಲೋಮಾ ಪರೀಕ್ಷೆಗಳಲ್ಲಿ ತೇರ್ಗಡೆಯಾಗಿರುವ ಸಂಗತಿಗಳೂ, ಶಿಶು ಸಾಹಿತ್ಯ ಸ್ಪರ್ಧೆಯಲ್ಲಿ ಬಹುಮಾನ ಪಡೆದ ವಿವರಗಳೂ, ಕೆಲವರ ಮಾಹಿತಿಗಳಲ್ಲಿ ನಮೂದಾಗಿರುವುದು ತಮಾಷೆಯ ವಿಷಯವಾಗಿದೆ. ದಿವಂಗತರಾದ ಕೆಲವು ಸಾಹಿತಿಗಳ ಬಗ್ಗೆ ಮಾಹಿತಿ ಕೊಡುವಾಗ ಅವರು ಹುಟ್ಟಿದ ತಾರೀಖು ಹಾಗೂ ನಿಧನರಾದ ದಿನಾಂಕ ಎರಡನ್ನೂ ಕೊಡಬೇಕು. ಎಷ್ಟೋ ಕಡೆ ಈ ಬಗೆಗಿನ ದಾಖಲೆಗಳು ಏಕರೂಪವಾಗಿಲ್ಲ. ಇನ್ನು ಈ ಕೃತಿಯ ಕೊನೆಯಲ್ಲಿ 'ಕಾವ್ಯನಾಮ'ಗಳನ್ನೂ ಅವುಗಳ ಎದುರಿಗೆ ಲೇಖಕರ ನಿಜನಾಮಗಳನ್ನೂ ಕಾಣಿಸುವ ದೊಡ್ಡ ಪಟ್ಟಿಯೊಂದಿದೆ. ಆದರೆ 'ಅರವಿಂದನಾಡಕರ್ಣಿ', 'ಕೃಷ್ಣಮೂರ್ತಿ ಪುರಾಣಿಕ', 'ಈಶ್ವರ್ ಸಣಕಲ್ಲ', 'ಗಂಗಾಧರಚಿತ್ತಾಲ', 'ಜೋಳದರಾಶಿ ದೊಡ್ಡನಗೌಡ', 'ಚಂದ್ರಶೇಖರ ಕಂಬಾರ', 'ನಾ. ಮೊಗಸಾಲೆ', 'ನೀಲತ್ತಹಳ್ಳಿ ಕಸ್ತೂರಿ', 'ಬಿ.ಜಿ.ಎಲ್. ಸ್ವಾಮಿ', 'ಶಾಂತಿನಾಥ ದೇಸಾಯಿ', 'ಪಾ.ಶ. ಶ್ರೀನಿವಾಸ', 'ಸದಾಶಿವ ಒಡೆಯರ'–ಇಂಥವುಗಳನ್ನು 'ಕಾವ್ಯನಾಮ'ಗಳೆಂದು ಕಾಣಿಸಲಾಗಿದೆ. ಆದರೆ ಇವು ಯಾವ ಅರ್ಥದಲ್ಲಿ 'ಕಾವ್ಯನಾಮ'ಗಳೋ ತಿಳಿಯದು.

ವಿಶ್ವವಿದ್ಯಾಲಯದ ಪ್ರಕಟಣ ವಿಭಾಗವೊಂದು ಈ ಬಗೆಯ ಕೆಲಸ ಮಾಡಿದಾಗ ಅದು ಸಾಕಷ್ಟು ನಿರ್ದುಷ್ಟವೂ, ಅರ್ಥಪೂರ್ಣವೂ ಆಗಿರಬೇಕೆಂದು ನಿರೀಕ್ಷಿಸುವುದು ತಪ್ಪಲ್ಲ. ಈ ದೃಷ್ಟಿಯಿಂದ, ಸಾಕಷ್ಟು ಶ್ರದ್ಧೆ ಹಾಗೂ ವಿವೇಚನೆಯಿಂದ, ಇಡೀ ಸಂಪುಟವನ್ನು, ಇದರ ಮರು ಮುದ್ರಣದ ಸಂದರ್ಭದಲ್ಲಾದರೂ ಪರಿಸ್ಕರಿಸಿ ಪ್ರಕಟಿಸುವುದು ಅತ್ಯಗತ್ಯವಾಗಿದೆ.

ನವೋದಯದ ಆಚಾರ್ಯರೆಂದು ಹೆಸರಾದ, ಬಿ. ಎಂ. ಶ್ರೀಕಂಠಯ್ಯನವರ ಜನ್ಮ ಶತಮಾನೋತ್ಸವದ ಹೊತ್ತಿಗೆ ಸರಿಯಾಗಿ, ಮೈಸೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆಯು, ಶ್ರೀ ಅವರ ಸಮಗ್ರ ಕೃತಿಗಳ ಸಂಪುಟವೊಂದನ್ನು 'ಶ್ರೀ ಸಾಹಿತ್ಯ' ಎಂಬ ಹೆಸರಿನಿಂದ ಪ್ರಕಟಿಸಿ ಕನ್ನಡಿಗರೆಲ್ಲರ ಕೃತಜ್ಞತೆಗೆ ಪಾತ್ರವಾಗಿದೆ. ಎಂಟು ನೂರಾ ಅರುವತ್ತೆಂಟು ಪುಟಗಳ ಈ ಸಂಪುಟದಲ್ಲಿ, ಮೊದಲ 607 ಪುಟಗಳಲ್ಲಿ ಅವರ ಎಲ್ಲಾ ಕನ್ನಡ ಕೃತಿಗಳೂ, ಮುಂದಿನ ಇನ್ನೂರ ಅರುವತ್ತು ಪುಟಗಳಲ್ಲಿ ಶ್ರೀಯವರ ಇಂಗ್ಲಿಷ್ ಬರಹಗಳೂ ಸಮಾವೇಶಗೊಂಡಿವೆ. 'ಕನ್ನಡ ಭಾಗ'ದಲ್ಲಿ ಅನುವಾದಿತ ಹಾಗೂ ಸ್ವತಂತ್ರಕವಿತೆಗಳು, ನಾಟಕಗಳು, ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ, ಕನ್ನಡ ಸಾಹಿತ್ಯ ಚರಿತ್ರೆ, ಕನ್ನಡ ಛಂದಸ್ಸಿನ ಚರಿತ್ರೆ ಮತ್ತು

ಹೆಚ್ಚಿನ ಬರಹಗಳು ಸೇರಿವೆ; 'ಇಂಗ್ಲಿಷ್ ಭಾಗ'ದಲ್ಲಿ A Hand Book of Rhetoric ಮತ್ತು ಅವರು ಇಂಗ್ಲಿಷ್‌ನಲ್ಲಿ ಬರೆದ ಹಲವು ಹತ್ತು ಬಗೆಯ ಲೇಖನಗಳು, Miscellaneous ಎಂಬ ಹೆಸರಿನಿಂದ ದಾಖಲಾಗಿವೆ. ಈ ಸಂಪುಟಕ್ಕೆ ಬೇಕಾದ ಎಲ್ಲಾ ಸಾಮಗ್ರಿಯನ್ನು ಸಂಪಾದಕರು ಹಲವಾರು ಮೂಲಗಳಿಂದ ಸಂಗ್ರಹಿಸಿದ್ದಾರೆ. ಹಾಗೆ ಸಂಗ್ರಹಿಸಿ ಪ್ರಕಟಿಸುವಾಗ, ಅಲ್ಲಲ್ಲಿ, ಆಗಾಗ ಉಂಟಾಗಿರಬಹುದಾದ ಹಲವಾರು ತಪ್ಪುಗಳನ್ನು ಸರಿಪಡಿಸಿರುವುದಾಗಿ ಸಂಪಾದಕರು ಹೇಳಿಕೊಂಡಿದ್ದಾರೆ. ಇಡೀ ಸಂಪುಟಕ್ಕೆ ಕಲಶಪ್ರಾಯವಾದ, ಎ. ಸೀ.ಯವರ 'ಪರಿಚಯ - ಕಾಣಿಕೆ' ಎಂಬ ಹೆಸರಿನ, ಐವತ್ಮೂರು ಪುಟಗಳ ಪ್ರಸ್ತಾವನೆಯೊಂದು ಇದ್ದು, ಶ್ರೀ ಯವರ ಬಗೆಗಿನ ಅನೇಕ ಆತ್ಮೀಯವಾದ ಹಾಗೂ ಹೊಸ ಸಂಗತಿಗಳನ್ನು ಕೊಡುತ್ತದೆ. ಇಡೀ ಸಂಕಲನ, ಅತ್ಯಂತ ಜವಾಬ್ದಾರಿಯುತವಾದ ಸಂಪಾದನ ಸಾಮರ್ಥ್ಯವನ್ನು ಪ್ರಕಟಿಸುತ್ತ, ಶ್ರೀ ಯವರಿಗೆ ನಿಜವಾಗಿ ಸಂದ ಗೌರವ ಪ್ರತೀಕದಂತಿದೆ. ಮೈಸೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆಯ 'ಹೆಮ್ಮೆಯ ಪ್ರಕಟಣೆ' ಯಾದ ಈ ಬೃಹತ್ ಸಂಪುಟವು, ಶ್ರೀ ಯವರ ಸಮಗ್ರ ಕೃತಿಗಳ ಪುನರಧ್ಯಯನ ಹಾಗೂ ವಿಮರ್ಶೆಗೆ, ಒಳ್ಳೆಯ ಅವಕಾಶವನ್ನು ಕಲ್ಪಿಸುತ್ತದೆ. 868 ಪುಟಗಳ ಈ ಸಂಪುಟ ಕೇವಲ ಹತ್ತುರೂಪಾಯಿ ಬೆಲೆಗೆ ದೊರಕುವಂತೆ ಮಾಡಿರುವ, ಈ ಕಾರ್ಯ ಆಧುನಿಕ ಪ್ರಕಟಣ ಪ್ರಪಂಚದ ಆಶ್ಚರ್ಯಗಳಲ್ಲಿ ಒಂದಾಗಿದೆ. ಈ ಮಹತ್ಕಾರ್ಯದ ಸೂತ್ರಧಾರರಾದ ಹಾ. ಮಾ. ನಾಯಕರನ್ನು ಎಷ್ಟು ಅಭಿನಂದಿಸಿದರೂ, ಅದು ತೀರಾ ಕಡಿಮೆಯೇ.

## 1983ರ ಪ್ರಕಟಣೆಗಳು

### ಕಾವ್ಯ

ಅರವಿಂದ ನಾಡಕರ್ಣಿ
    ಅಜ್ಞಾತ : ಅನನ್ಯ ಪ್ರಕಾಶನ, ಮೈಸೂರು ; ಪು. ೭೪.
ಒಡೆಯರ್ ಡಿ. ಹೆಗ್ಗಡೆ.
    ನಿರೀಕ್ಷೆ : ಮೈತ್ರಿ ಪ್ರಕಾಶನ, ಮಂಗಳ ಗಂಗೋತ್ರಿ, ದಕ್ಷಿಣ ಕನ್ನಡ ; ಪು. ೩೬
ಕುಲಕರ್ಣಿ (ಜಿ. ಆರ್.)
    ನೋವೆ ಹೂವಾದಾಗ : ಪ್ರತಿಭಾ ಪ್ರಕಾಶನ, ಗುಲಬರ್ಗಾ ; ಪು. ೨೦.
ಕೃ. ಶಾ.
    ಮೌನ ಬಿಟಕ : ಮಹಾತ್ಮಗಾಂಧಿ ವಿದ್ಯಾ ಸಂಘ, ಸುಳ್ಯ (ದ. ಕ.) ; ಪು. ೮೪.
ಕೃಷ್ಣಮೂರ್ತಿ (ಬಿ. ರಾ.)
    ಇದ್ದು ಹೋದವರು :
ಗದಗಕರ್ (ಎನ್. ಎಸ್.)
    ಚಿಕ್ಕಿಯಮಾಲೆ : ಎನ್. ಎಸ್. ಗದಗ್‌ಕರ್, ಧಾರವಾಡ ; ಪು. ೪೭.
ಗೋವಿಂದರಾಜು (ಕೆ).
    ಮುಂದಾರಿ : ಯುವಜನ ಪ್ರಕಾಶನ, ಮೈಸೂರು ; ಪು. ೪೦.
ಗೋಪಾಲಕೃಷ್ಣ ಅಡಿಗ
    ಬತ್ತಲಾರದಗಂಗೆ : ನುಡಿಪ್ರಕಾಶನ, ಬೆಂಗಳೂರು.
ಗುಂಡ್ಮಿ ಚಂದ್ರಶೇಖರ ಐತಾಳ.
    ಸಾವಿರಾರು ಗುಂಡು ಸೂಜಿ : ಆನಂದ ಪ್ರಕಾಶನ, ಮಂಗಳ ಗಂಗೋತ್ರಿ, ಮಂಗಳೂರು
    ಪು. ೧೮೦.
ಚೆನ್ನವೀರ ಕಣವಿ (ಸಂ)
    ಕವಿತೆಗಳು : 1980 : ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು ; ಪು. ೧೬ + ೯೦.
ಜಮುನರಾಣಿ ವಿ. ಮಿರ್ಲೆ.
    ಸೂರ್ಯ : ಜಮುನರಾಣಿ ವಿ. ಮಿರ್ಲೆ, ಮೈಸೂರು ; ಪು. ೬೪.
ಜಯಸುದರ್ಶನ
    ಹಾಡುಕಟ್ಟುವ ಮಾತು : ಐ ಬಿ ಎಚ್ ಪ್ರಕಾಶನ, ಬೆಂಗಳೂರು ; ಪು. ೯೬.
ದೇಶ ಕುಲಕರ್ಣಿ.
    ಕೊಂಪೆಯಲ್ಲಿ ಕೋಗಿಲೆ : ಕನ್ನಡ ಸಂಘ, ಶೇಷಾದ್ರಿಪುರಂ ಕಾಲೇಜು, ಬೆಂಗಳೂರು
    ಪು. ೪೮.

ದೊಡ್ಡರಂಗೇಗೌಡ

ಗೀತಗಾರುಡಿ : ಭರತ–ಸ್ಮಿತಾ ಪ್ರಕಾಶನ, ಬೆಂಗಳೂರು ; ಪು. ೭೨.

ಧರಣೇಂದ್ರ ಕುರಕುರಿ.

ಹೊಸ ಕಾಲ ಬಂತ : ಪೆರಿಯಾರ್ ಪ್ರಕಾಶನ, ಧಾರವಾಡ ; ಪು. ೭೨.

ನರಸಿಂಹಸ್ವಾಮಿ (ಕೆ. ಎಸ್.)

ನವಪಲ್ಲವ : ಲಿಪಿ ಪ್ರಕಾಶನ, ಬೆಂಗಳೂರು ; ಪು. ೫೪+೧೨.

ನಾಗರಾಜ್ (ಟಿ)

ಮುಂಜಾವದ ಮುನ್ನ : ಮೈತ್ರಿನಾಗ್ ಪ್ರಕಾಶನ, ಬೆಂಗಳೂರು ; ಪು. ೩೫.

ನಾಗೇಂದ್ರಲಾಡಾ

ಬಯಕೆ ತಂಗಾಳಿ : ಭಾರತಿ ಪ್ರಕಾಶನ, ಬೆಳಗಾವಿ ; ಪು. ೪೦.

ನಾಯಕ (ಹಾ.ಮಾ.) ಸಂ.

ಕಾವ್ಯದೀಪ : ದಸರಾ ಉತ್ಸವ ಸಮಿತಿ, ಮೈಸೂರು.

ಪ್ರಭುಶಂಕರ (ಸಂ).

ಶರಣರ ನೂರೊಂದು ವಚನಗಳು : ನಿವೇದಿತಾ ಪ್ರಕಾಶನ, ಮೈಸೂರು ;
ಪು. ೨೫+೧೦೫.

ಪ್ರತಿಭಾ (ವಿ. ಆರ್.)

ನಾವು ಹುಡುಗಿಯರೇ ಹೀಗೆ : ಕನ್ನಡ ಸಂಘ, ಕ್ರೈಸ್ಟ್ ಕಾಲೇಜು, ಬೆಂಗಳೂರು ;
ಪು. ೫೦.

ಪಾಬ್ಲೋನೆರುಡ.

ಅನು : ಕೆ. ಎಸ್. ನಿಸಾರ್ ಅಹಮದ್.

ಬರೀಮರ್ಯಾದಸ್ಥರೇ ; ಹರ್ಷ ಪ್ರಕಾಶನ, ಬೆಂಗಳೂರು ; ಪು. ೧೯೨.

ಬರಗೂರು ರಾಮಚಂದ್ರಪ್ಪ

ನೆತ್ತರಲ್ಲಿ ನೆಂದಹೂವು : ವೇದನಾ ಪ್ರಕಾಶನ, ಬೆಂಗಳೂರು ; ಪು. ೬೦.

ಬಸವರಾಜ ಮಠಪತಿ (ಸಂ)

ನಾನು ಮತ್ತು ನಮ್ಮವರು : ಶಾರದಾ ಸುತ ಪ್ರಕಾಶನ, ಬೀದರ್ ; ಪು. ೫೨.

ಬಸವಲಿಂಗ ಸೊಪ್ಪಿಮಠ

ಬತ್ತದ ನೆನಪಿಗೆ ಬಾಡದ ಕಾವ್ಯ ; ಸೌಜನ್ಯ ಪ್ರಕಾಶನ, ಸಿಂದಗಿ ; ಪು. ೪೪.

ಭವಾನಿ ಶಂಕರ್.

ಮಿನು ಮಲ್ಲಿಗೆ : ಚಲನ ಪ್ರಕಾಶನ, ಶಿರ್ವ (ದ. ಕ.) ; ಪು. ೪೬.

ಭೂಸನೂರ ಮಠ (ಸಂ. ಶಿ.)

ಭವ್ಯ ಮಾನವ : ರಾವೂರು ಶ್ರೀ ಸಿದ್ಧಲಿಂಗೇಶ್ವರ ಮಠ ಹಾಗೂ ಆದವಾನಿ ಮುಂಡರಗಿ
ಕಲ್ಲುಮಠ, ಪು. ೮೩೨.

ಮಧುರ್ಯೆ ಚಂದ್ರಶೇಖರಾಚಾರ್
ಸೌರಭ : ಎಂ. ಜಿ. ಎಂ. ಪ್ರಕಾಶನ, ಹೊಸದುರ್ಗ ; ಮಧುರ್ಯೆ ; ಪು ೪೦.

ಮಾಲತಿ ಪಟ್ಟಣ ಶೆಟ್ಟಿ.
ಗರಿಗೆದರಿ : ಕೃತಿ ಪ್ರಕಾಶನ, ಧಾರವಾಡ ; ಪು. ೬ + ೫೦.

ಮುಕ್ತಾಯಕ್ಕ (ಹೆಚ್. ಎಸ್.)
ನಾನು ಮತ್ತು ಅವನು : ಪ್ರಶಾಂತ ಪ್ರಕಾಶನ, ರಾಯಚೂರು ; ಪು. ೬೮.

ಮುಜಾಫರ್ ಹುಸೇನ್ ಅಸ್ಸಾದಿ.
ಹೂವಿನಂಥಾ ಹುಡುಗಿ ಹೇಳಿದ್ದು : ಬರಹಗಾರ, ಕನ್ನಡ ಸಂಘ, ಸಂತ ಮೇರಿ ಕಾಲೇಜು ; ಶಿರ್ವ (ದ.ಕ.) ; ಪು. ೩೨.

ಮುರಳೀಧರ (ಸಿ. ವಿ)
ನಿನ್ನ ಹೆಜ್ಜೆ ಗುರುತಿನ ಬಳಿ : ಲೇಖ ಪ್ರಕಾಶನ, ಬೆಂಗಳೂರು ; ಪು. ೩೨.

ರಮಾನಂದ. (ಕೆ)
ಬಳ್ಳಿಯೊಡಲ ಕಡಲು : ಯೋಗಶ್ರೀ ಪ್ರಕಾಶನ, ಬೆಂಗಳೂರು ; ಪು. ೨೨.

ರಾಜಶೇಖರ ಪಾಟೀಲ.
ಏಳು ಬೀಳಿನ ಈ ಕಡಲಲ್ಲಿ : ಸಿ. ಎಂ. ಎಸ್. ಆರ್ಯ, ಶಿವಮೊಗ್ಗ ; ಪು. ೪೪ + ೮.

ರಾಮಕೃಷ್ಣ. (ಬಿ)
ಅಂತ್ಯಜ : ಬಿ. ರಾಮಕೃಷ್ಣ, ಸುಳ್ಯ ; ಪು. ೪ + ೨೨.

ರಾಮಚಂದ್ರಾಚಾರ್ (ಡಿ. ಬಿ.)
ಭಾವಕಿರಣ : ಸುನಂದ ಪ್ರಕಾಶನ, ಮೈಸೂರು ; ಪು. ೮ + ೩೬.

ರಾಮಾನುಜಂ (ಹಿ. ಎಸ್.)
ಬೆಳಕು ಹರಿದಂತೆ : ಐ ಬಿ ಎಚ್ ಪ್ರಕಾಶನ, ಬೆಂಗಳೂರು ; ಪು. ೭೫.

ರಾಮಚಂದ್ರ ಶರ್ಮ (ಬಿ. ಸಿ )
ಅರವತ್ತು ಕವನಗಳು : ಪ್ರಿಂಟರ್ಸ್ ಪ್ರಕಾಶನ, ಬೆಂಗಳೂರು ; ಪು. ೧೪೨.

ರುಕ್ಮಿಣಿ. (ಬಿ.ವಿ.)
ಗೀತಶಿಲ್ಪ : ಶ್ರೀರಾಮಕೃಪ, ಬೆಂಗಳೂರು; ಪು. ೭೯

ರುದ್ರಮೂರ್ತಿಶಾಸ್ತ್ರಿ
ಚಿತ್ರಕಲ್ಪನೆ : ಕೀರ್ತಿಪ್ರಕಾಶನ, ಬೆಂಗಳೂರು; ಪು. ೮೪.

ರಂಗನಹಳ್ಳಿ ಮುದ್ದೇಗೌಡ
ಅವಳೇ ಇವಳು : ಆರ್. ವಿ. ಸಣ್ಣೀರಪ್ಪ ಮತ್ತು ಸಹೋದರರು, ರಂಗನಹಳ್ಳಿ (ತುಮಕೂರು ಜಿಲ್ಲೆ); ಪು. ೮ + ೩೨.

ಲಲಿತಾನಾಯಕ್ (ಬಿ.ಟಿ.)
ನಂರೂಪ್ಲಿ : ಪತ್ರಿಕೆ ಪ್ರಕಾಶನ, ಬೆಂಗಳೂರು: ಪು. ೪ + ೪೮.

ವಿಷ್ಣುನಾಯ್ಕ
ನನ್ನ ಅಂಬಾರಕೊಡಲು : ರಾಘವೇಂದ್ರ ಪ್ರಕಾಶನ, ಅಂಕೋಲಾ (ಉತ್ತರ ಕನ್ನಡ); ಪು. ೪೮.

ವೇದವ್ಯಾಸ ಜೋಶಿ
ಜೀವರಾಗ : ವಸುಧಾ ಪ್ರಕಾಶನ, ಸಂಡೂರು; ಪು. ೭೦.

ವೆಂಕಟೇಶಮೂರ್ತಿ (ಎಚ್.ಎಸ್.)
ಮರೆತ ಸಾಲುಗಳು : ಕದಂಬ ಪ್ರಕಾಶನ, ಬೆಂಗಳೂರು ; ಪು. ೨೦.

ವೆಂಕಟೇಶಮೂರ್ತಿ (ಎಚ್. ಎಸ್.) ಸಂ.
ಕವಿತೆಗಳು-1981 : ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು; ಪು. ೯೭.

ವೆಂಕಪ್ಪಯ್ಯ ಪಾರೆ
ಉಷಾಪಯಸ್ವಿನಿ : ಸುಳ್ಯ. (ದ.ಕನ್ನಡ) ; ಪು. ೭೨+೮.

ಶಾರದಾನಂದನ
ಕಾಮರೂಪ : ಶಾರದಾನಿಲಯ ಪ್ರಕಾಶನ. ಮಾಯಸಂದ್ರ ; ಪು. ೫೦.

ಶಾಂತಾರಾಂಹೆಗಡೆ
ಅಂತರಾಳ : ವಿಮಲ ಪ್ರಕಾಶನ, ಬೆಳಗಾವಿ ; ಪು. ೫೨.

ಶೇಖರಪ್ಪ ಹುಲಿಗಿರಿ [ಮಹಾಂತ ಪ್ರಿಯ]
ಮಹಾಂತ ಚಿಂತನ : ಚಿತ್ತರಗಿ ಶ್ರೀವಿಜಯ ಮಹಾಂತೇಶ್ವರ ಧರ್ಮ ಪ್ರಸಾರಕ ಮಂಡಲ, ಇಲಕಲ್ (ವಿಜಾಪುರ ಜಿಲ್ಲೆ) ; ಪು. ೫೫.

ಶಿವಪ್ರಕಾಶ್. (ಎಚ್.ಎಸ್.)
ಮಳೆ ಬಿದ್ದನೆಲದಲ್ಲಿ : ಕನ್ನಡ ಸಂಘ, ಕ್ರೈಸ್ಟ್ ಕಾಲೇಜು, ಬೆಂಗಳೂರು ; ಪು. ೭೨.

ಶಿವಪ್ಪ (ಕೆ.ಸಿ.)
ರಾಗರತಿ : ಐ.ಬಿ.ಎಚ್. ಪ್ರಕಾಶನ, ಬೆಂಗಳೂರು ; ಪು. ೫೬+೧೬.

ಸಂಗಮೇಶ
ಪವಾಡ ಪುರುಷಗಾಂಧಿ : ಸಂಗಮೇಶ ಪ್ರಕಾಶನ, ಶಹಪುರ ; ಪು. ೩೩

ಸರಸ್ವತಿಗೌಡ
ದ್ರೌಪದಿಯ ಸ್ವಗತ : ನೆಲಮನೆಪ್ರಕಾಶನ, ಮೈಸೂರು, ಪು. ೭೧.

ಸಿದ್ಧನಗೌಡ ಪಾಟೀಲ
ನಾಬಸ್ಯಾ ಅಂತ : ಸಿದ್ಧನಗೌಡ ಪಾಟೀಲ, ಧಾರವಾಡ ; ಪು. ೩೪.

ಸಿದ್ಧಲಿಂಗಯ್ಯ
ಕಪ್ಪು ಕಾಡಿನ ಹಾಡು : ರೂಪಧ್ವನಿ ಪ್ರಕಾಶನ, ಬೆಂಗಳೂರು ; ಪು. ೫೫+೮.

ಸುಕನ್ಯಾ ಮಾರುತಿ
ಪಂಚಾಗ್ನಿ ಮಧ್ಯೆ : ಸಂಗ್ರಾಮ ಪ್ರಕಾಶನ, ಧಾರವಾಡ ; ಪು. ೬೨.

ಸುಬ್ರಾಯ ಚೊಕ್ಕಾಡಿ
ನಿಮ್ಮವೂ ಇರಬಹುದು : ಅಕ್ಷರ ಪ್ರಕಾಶನ, ಸಾಗರ, ಪು. ೮೦.

ಸುಬ್ಬರಾಯಾಚಾರ್. (ಉ.ಕಾ.) ಅನು
ಸಾವಿತ್ರಿ (ಅರವಿಂದರ ಮಹಾಕಾವ್ಯ) : ಜಿ. ಸಾವಿತ್ರಿ, ಮೈಸೂರು ; ಪು. ೧೧೮.

ಸುರೇಶಕುಮಾರ್ [ಜೈಸು] ಸಂ
ಭಾವಸ್ಪಂದನ : ಜೈಸು ಪ್ರಕಾಶನ, ಶಿಕಾರಿಪುರ ; ಪು. ೫೦.

ಸುಂಕದ (ಭೀ.ಹ.)

ಹೃದಯ ಗೀತೆ : ಬಿ. ಎಚ್. ಸುಂಕದ, ನಾಯಿಮನಗರ (ಆಂಧ್ರಪ್ರದೇಶ); ಪು. ೫೯.

ಸುಜನಾ

1. ಸೊನ್ನೆಯೆರಡರ ನಡುವೆ : ಪು ೯೫.
2. ಕಣಗಳು : ಪು. ೪೮.
3. ಉಡಿದಾರ : ಪು. ೮ + ೧೧೯.

–ಮೈತ್ರೀ ಪ್ರಕಾಶನ, ಮೈಸೂರು.

ಸುನಂದನ : (ಸಿ. ಎಸ್.)

ಅನುಕಂಪನ : ಗೀತಾಬುಕ್ ಹೌಸ್, ಮೈಸೂರು; ಪು. ೪೭.

ಸಮತೀಂದ್ರ ನಾಡಿಗ

ಭಾವಲೋಕ : ಪ್ರಜಾಪ್ರಿಂಟರ್ಸ್ ಪ್ರೈವೇಟ್ ಲಿಮಿಟೆಡ್, ಬೆಂಗಳೂರು ; ಪು. ೭೮.

ಹಲಸಂಗಿ (ಆರ್.ಡಿ.)

ಚರಗದ ಬುಟ್ಟಿ : ಶ್ರೀ ಅರವಿಂದ ಗ್ರಂಥಾಲಯ, ವಿಜಾಪುರ ಜಿಲ್ಲೆ ; ಪು. ೯೨.

ಹೇಮಾ

ವಿರಹೋತ್ಸವ : ಕನ್ನಡ ಸಂಘ, ಶೇಷಾದ್ರಿಪುರಂ ಕಾಲೇಜು, ಬೆಂಗಳೂರು ; ಪು. ೪೮.

## ನಾಟಕ

ಕೃಷ್ಣಮೂರ್ತಿ ಪುರಾಣಿಕ.

ವಾಸವದತ್ತೆ

ಚೆನ್ನಣ್ಣ ವಾಲಿಕಾರ

ಅಗ್ನಿರಾಜ : ಅಕ್ಷರ ಪ್ರಕಾಶನ, ಸಾಗರ

ಚಂದ್ರಶೇಖರ ಕಂಬಾರ

ಹರಕೆಯ ಕುರಿ : ವರ್ಧಮಾನ ಪ್ರಕಾಶನ, ಬೆಂಗಳೂರು ; ಪು. ೧೦೬

ಚಂದ್ರಶೇಖರ (ಬಿ.ಸಿ.)

ಪರಹಿತ ಪಾಷಾಣ : ಭಾಗ್ಯಲಕ್ಷ್ಮಿ ಪ್ರಕಾಶನ ಬೆಂಗಳೂರು.

ಗೋಪಾಲವಾಜಪೇಯಿ

ದೊಡ್ಡಪ್ಪ : ಅಕ್ಷರ ಪ್ರಕಾಶನ, ಸಾಗರ ; ಪು. ೬೮.

ಪ್ರಭುಶಂಕರ

ಗಾಳಿ ಎಂಬ ಕುದುರೆ ಏರಿ : ಒಡನಾಡಿ ಪ್ರಕಾಶನ, ನಂಜನಗೂಡು ; ಪು. ೩೬.

ಮೂರ್ತಿ (ಎ. ಎಸ್.)

ಜನಮರುಳೊ : ಇಳಾಪ್ರಕಾಶನ, ಬೆಂಗಳೂರು ; ಪು. ೪೩.

ವಿಜಯ ತೆಂಡುಲ್ಕರ್

ಅನು : ಹೇಮಾ

'ಮೂಡುಸಿಕ್ಕದಲ್ಲಾ : ಅನನ್ಯ ಪ್ರಕಾಶನ, ಧಾರವಾಡ ; ಪು. ೧೧೬.

ಅನು : ವಿದ್ಯಾ ಆರ್ಯ
ಇಲ್ಲದಿದ್ದವರು : ಸಾಹಿತ್ಯ ಭಂಡಾರ, ಹುಬ್ಬಳ್ಳಿ ; ಪು. ೮+೬೪

ವಿನಾಯಕ ನಾಯಕ
ನಿಜದನಲೆ ನಿಜಕಿಲ್ಲ : ಮನೋಹರ ಗ್ರಂಥಮಾಲಾ, ಧಾರವಾಡ ; ಪು. ೧೨೮

ವಿಜಯ ತೆಂಡುಲ್ಕರ್

ಸಿದ್ಧಲಿಂಗ ಪಟ್ಟಣಶೆಟ್ಟಿ
ಅಂಜಿ : ಅನನ್ಯ ಪ್ರಕಾಶನ,ಮೈಸೂರು ; ಪು. ೮+೧೦೮.

ವೈಕುಂಠರಾಜು (ಬಿ.ವಿ.)
ಸನ್ನಿವೇಶ : ಅಕ್ಷರ ಪ್ರಕಾಶನ, ಸಾಗರ : ಪು. ೫೬

ಸುರೇಶ (ಬಿ.)
ಕೋತಿಕತೆ–ಅಪ್ಪಾಲೆ ತಿಪ್ಪಾಲೆ : ಇಳಾ ಪ್ರಕಾಶನ, ಬೆಂಗಳೂರು ; ಪು ೩೦.

ಸ್ವಾಮಿ (ಜಿ.ಟಿ.)
ಜೈಪದ್ಮಾವತಿ ಮಾತಾ ಅಥವಾ ಪುಣ್ಯಪುರುಷ : ಬಿ.ಬಿ. ಕರ್ಣವಾಡಿ, ಹಾರೂಗೇರಿ ; ಪು. ೧೪೪

## ಸಣ್ಣ ಕತೆ

ಈರಯ್ಯ ಹೊಂಗೆರೆ
ಯಾತನೆಗಳು

ಕರೀಗೌಡ ಬೀಚನಹಳ್ಳಿ
ಕರೀಮಣ್ಣಿನ ಗೊಂಬೆಗಳು : ರೂಪಧ್ವನಿ ಪ್ರಕಾಶನ, ಬೆಂಗಳೂರು ; ಪು. ೧೮೪+೮

ಚಂಪಾವತಿ (ಕೆ.ಜಿ.)
ದಾರಿ : ಮಾಲತಿ ಪ್ರಕಾಶನ, ಮೈಸೂರು ; ಪು. ೯೦

ದುರ್ಗಂ (ಬಿ)
1. ಜೀವಂತ ದೇವರುಗಳು : ದುರ್ಗಂ ಪ್ರಕಾಶನ, ಬೆಂಗಳೂರು ; ಪು. ೮+೧೬೬
2. ಸೃಷ್ಟಿ ವೈಚಿತ್ರ : ದುರ್ಗಂ ಪ್ರಕಾಶನ, ಬೆಂಗಳೂರು ; ಪು. ೪+೧೬೦

ದೇಸಾಯಿ (ಬಿ ಸಿ.)
ಸಾವು ಮತ್ತು ಇತರ ಕಥೆಗಳು : ಪ್ರಿಂಟರ್ಸ್ ಪ್ರಕಾಶನ, ಬೆಂಗಳೂರು ; ಪು. ೯೭

ನರಗುಂದಕರ (ಎಸ್. ಬಿ.)
ಅಸಂಬದ್ಧರು : ಮನೋಹರ ಗ್ರಂಥಮಾಲೆ, ಧಾರವಾಡ ; ಪು. ೮೦

ನಾಗರಾಜ್. (ಆರ್.ಜಿ. ಹಳ್ಳಿ)
ಸಿಡಿದವರು : ಅರುಣ ಯುವ ಲೇಖಕರ ಬಳಗ, ಬೆಂಗಳೂರು ; ಪು. ೧೬೧+೧೨

ಬೋಳುವಾರು ಮುಹಮದ್ ಕುಂಞ
ದೇವರುಗಳ ರಾಜ್ಯದಲ್ಲಿ : ಅರ್ಪಿತ ಪ್ರಕಾಶನ, ಮೈಸೂರು ; ಪು. ೧೫೬

ಭಾರತಿ (ಕೆ. ಎಸ್.)
ಆಸರೆ : ಜೈಸು ಪ್ರಕಾಶನ, ಶಿಕಾರಿಪುರ ; ಪು. ೮೨

ಮಹಾಬಲ ಭಂಡಾರಿ
ಮಾತು-ಕತೆ : ಗೀತ ಪ್ರಕಾಶನ, ಕಾಸರಗೋಡು ; ಪು. ೭೮

ಮಳಲಿ ವಸಂತಕುಮಾರ್
ಈಡು : ಪಂಪ ಪ್ರಕಾಶನ, ಮೈಸೂರು ; ಪು. ೧೫೪

ಮೋಹನ್ ವರ್ಣೇಕರ್ (ಸಂ)
ವರ್ಷ : ಜೈಸು ಪ್ರಕಾಶನ, ಶಿಕಾರಿಪುರ ; ಪು. ೧೪೪

ಯಶವಂತ ಚಿತ್ತಾಲ
1. ಬೇನ್ಯಾ ; ಲಿಪಿ ಪ್ರಕಾಶನ, ಬೆಂಗಳೂರು ; ಪು. ೧೪೪ + ೧೮
2. ಚಿತ್ತಾಲರ ಕತೆಗಳು : ಪ್ರಜಾಪ್ರಿಂಟರ್ಸ್ ಪ್ರಕಾಶನ, ಬೆಂಗಳೂರು ಪು. ४೫೪ + ೧೧

ರಾಮರಾವ್ (ಟಿ,ಕೆ.)
ಕೊಲ್ಲಿಯ ಹಣ : ವರ್ಧಮಾನ ಪ್ರಕಾಶನ. ಬೆಂಗಳೂರು ; ಪು. ೧೫೮

ರೇಣುಕ
ವಿದ್ರೋಹಿಯ ವೀರಗಾಥೆ : ಕೀರ್ತಿ ಪ್ರಕಾಶನ, ಬೆಂಗಳೂರು ; ಪು. ೧೪೩

ವೀರಣ್ಣ ರಾಜೂರ (ಸಂ)
ಕಾಶಿಪುಟ್ಟ ಸೋಮಾರಾಧ್ಯ (ಸಂ)
ಸಮತಾ : ಮಂಗಳ ಪ್ರಕಾಶನ. ಧಾರವಾಡ

ಶ್ರೀನಿವಾಸ ಹಾವನೂರ
ಕುಚೋದ್ಯದ ಕಥೆಗಳು ; ಬಾಪ್ಕೋ ಪ್ರಕಾಶನ, ಬೆಂಗಳೂರು ; ಪು. ೧೨೮

ಸುಶೀಲಾದೇವಿ ಆರ್. ರಾವ್
ಪೋಕೇಸಿನ ಗೊಂಬೆ : ಯುವಕರ ಸಂಘ, ರಾಮನಗರ, ಹಗರಿಬೊಮ್ಮನಹಳ್ಳಿ
ಪು. ೧೬೪

## ಕಾದಂಬರಿ

ಅಶ್ವತ್ಥ
'ಅಜ್ಞಾತ'ನ ನಂಜುಂಡಾಯಣ : ಉಷಾಸಾಹಿತ್ಯಮಾಲೆ, ಮೈಸೂರು ; ಪು. ೭೨೮

ಇಂದಿರಾಣಿ
ಆಡಿಗಲ್ಲು; ಭಾಗ್ಯಲಕ್ಷ್ಮಿ ಪ್ರಕಾಶನ, ಬೆಂಗಳೂರು ; ಪು, ೧೩೫

ಈಚನೂರು ಶಾಂತ
ಕಲ್ಪನಾ ಛಾಯೆಯಲಿ : ಗೀತಾ ಬುಕ್ ಹೌಸ್, ಮೈಸೂರು ; ಪು. ೧೫೬

ಉಷಾನವರತ್ನರಾಮ್
ಮರೆವು : ವರ್ಧಮಾನ ಪ್ರಕಾಶನ. ಬೆಂಗಳೂರು ; ಪು. ೧೫೨

ಕೃಷ್ಣಮಾಸಡಿ
ವೃತ್ತ : ಪ್ರಿಂಟರ್ಸ್ ಪ್ರಕಾಶನ, ಬೆಂಗಳೂರು ; ಪು. ೨೧೬

ಕುಂದರನಾಡ ಪಾಟೀಲ

ಹಂತ : ಪ್ರಿಂಟರ್ಸ್ ಪ್ರಕಾಶನ. ಬೆಂಗಳೂರು ; ಪು. ೧೨೮

ಕೇಶವದೇವ್, ಪಿ.

ಅನು : ಎಂ. ರಾಮು

ಕನ್ನಡಿ : ನ್ಯಾಷನಲ್ ಬುಕ್ ಟ್ರಸ್ಟ್. ಹೊಸದೆಹಲಿ ; ಪು. ೧೫೫

ಗಟ್ಟಿ (ಕೆ. ಟಿ.)

1. ಹೇಕಾಪುರುಷ : ಪ್ರಿಂಟರ್ಸ್ ಪ್ರಕಾಶನ. ಬೆಂಗಳೂರು ; ಪು. ೩೧೫
2. ಯುಗಾಂತರ : ಬಾಪ್ಕೋ ಪ್ರಕಾಶನ, ಬೆಂಗಳೂರು ; ಪು. ೪೭೨

ಗುಡಿಬಂಡೆ ಪೂರ್ಣಿಮ

ಒಳಗಿನದೇ ಬೇರೆ

ಚಂದ್ರಶೇಖರ್ (ಸಿ.ಆರ್.)

ಮನೆ-ಮನಸ್ಸು ; ಪ್ರಿಂಟರ್ಸ್ ಪ್ರಕಾಶನ, ಬೆಂಗಳೂರು ; ಪು. ೧೩೧

ಚಂದ್ರಶೇಖರ ಕಂಬಾರ

ಜೀಕೆ ಮಾಸ್ತರನ ಪ್ರಣಯ ಪ್ರಸಂಗ : ವರ್ಧಮಾನ ಪ್ರಕಾಶನ. ಬೆಂಗಳೂರು ; ಪು. ೮೦

ಚನ್ನವೀರಯ್ಯ (ಸಿ. ಎನ್.)

1. ರೊಚ್ಚಿಗೆದ್ದ ರೂಪಾ : ಜ್ಞಾನವಾಹಿನಿ ಪ್ರಕಾಶನ, ಬೆಂಗಳೂರು ; ಪು. ೧೫೫
2. ಟ್ರಿಗರ್ : ಜ್ಞಾನವಾಹಿನಿ ಪ್ರಕಾಶನ, ಬೆಂಗಳೂರು ; ಪು. ೧೧೬

ಛಾಯಾದೇವಿ ನಂಜಪ್ಪ

1. ಮಾಧುರಿ : ಲಕ್ಷ್ಮಿ ಪ್ರಿಂಟಿಗ್ ಅಂಡ್ ಪಬ್ಲಿಷಿಂಗ್ ಹೌಸ್, ಮೈಸೂರು ; ಪು. ೧೫೪
2. ಸ್ವರ್ಗಸೋಪಾನ : ಲಕ್ಷ್ಮಿ ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಹೌಸ್ ಮೈಸೂರು ; ಪು. ೧೪೨

ಡಿಸೋಜ (ನಾ)

ಪ್ರಜ್ಞಾ ಬಲಿ : ಬಾಪ್ಕೋ ಪ್ರಕಾಶನ, ಬೆಂಗಳೂರು ; ಪು. ೧೭೦ + ೪.

ತ್ರಿವಿಕ್ರಮ

ಮಧುರ ಸ್ವಪ್ನ : ವಿಜಯ ಪ್ರಕಾಶನ, ಬೆಂಗಳೂರು ; ಪು. ೧೧೪.

ಥಾಮಸ್ ಹಾರ್ಡಿ

ಅನು : ನಾಗರಾಜ ರಾವ್, (ವಿ.)

ಊರಿಗೆ ಮರಳಿದಾಗ : ಪ್ರಸಾರಾಂಗ, ಮೈ.ವಿ.ವಿ.ನಿ., ಮೈಸೂರು ; ಪು. ೮ + ೪೦೦.

ನಚಿಕೇತ

ಚಿನ್ನದ ಪದಕ : ಪ್ರತಾಪ ಪ್ರಕಾಶನ, ಮೈಸೂರು ; ಪು. ೮೦.

ನಾರಾಯಣ (ಪಿ. ವಿ.)

ಹೋರಾಟ : ಭಾಗ್ಯಲಕ್ಷ್ಮಿ ಪ್ರಕಾಶನ, ಬೆಂಗಳೂರು ; ಪು. ೪ + ೧೬೪.

ಬರಗೂರು ರಾಮಚಂದ್ರಪ್ಪ

ಭರತ ನಗರಿ : ಪುಸ್ತಕ ಚಂದನ, ಬೆಂಗಳೂರು ; ಪು. ೯೬ + ೮.

ಬಸವರಾಜ್ (ಆರ್)

ಆತ್ಮಾಹುತಿ : ಬಾಪ್ಕೋ ಪ್ರಕಾಶನ, ಬೆಂಗಳೂರು ; ಪು. ೧೭೦ + ೮.

ಬೆನಕನಹಳ್ಳಿ ಜಿ. ನಾಯಕ

ನಿರೀಕ್ಷೆ : ವರ್ಧಮಾನ ಪ್ರಕಾಶನ, ಬೆಂಗಳೂರು ; ಪು ೧೪೩.

ಭೈರಪ್ಪ (ಎಸ್. ಎಲ್.)

ನೆಲೆ : ಸಾಹಿತ್ಯ ಭಂಡಾರ, ಬೆಂಗಳೂರು ; ಪು. ೧೭೮.

ಮಧು (ಬಿ. ಎ)

೧. ದೀಪಕಮಲ : ಲಕ್ಷ್ಮಿ ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಹೌಸ್, ಮೈಸೂರು ; ಪು. ೧೭೪.

೨. ಅಶೋಕ ಗಾನ : ಲಕ್ಷ್ಮಿ ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಹೌಸ್, ಮೈಸೂರು ; ಪು. ೧೬೩.

ಮೆಹರುನ್ನೀಸಾ ಪರ್ವೀಜ್

ಅನು : ಎಂ. ದಸ್ತಗೀರ್

ಹೊಸಲು ದಾಟಿದ ಕಣ್ಣು : ಐ.ಬಿ.ಎಚ್. ಪ್ರಕಾಶನ, ಬೆಂಗಳೂರು ; ಪು. ೧೫೨.

ಯಂಡಮೂರಿ ವೀರೇಂದ್ರನಾಥ್

ಅನು : ವಂಶಿ

ತುಳಸೀದಳ : ಹೇಮಂತ ಸಾಹಿತ್ಯ, ಬೆಂಗಳೂರು ; ಪು. ೩೮೩.

ರಾಮರಾವ್ (ಟಿ.ಕೆ.)

ಕೆಂಪು ಮಣ್ಣು : ದರ್ಶನ ಪ್ರಕಾಶನ, ಬೆಂಗಳೂರು ; ೩೫೧.

ರಾಧಾದೇವಿ (ಹೆಚ್. ಜಿ.)

೧. ಹೂ ಬಾಣದ ಜ್ವಾಲೆ : ರಾಜಲಕ್ಷ್ಮೀ ಪ್ರಕಾಶನ, ಬೆಂಗಳೂರು ; ಪು. ೧೮೯.

೨. ಪ್ರೀತಿಯ ಹೂ ಮಾಲೆ : ರಾಜಲಕ್ಷ್ಮೀ ಪ್ರಕಾಶನ, ಬೆಂಗಳೂರು ; ಪು. ೧೬೬.

ರೇಖಾರಾಣಿ

ಚಿತ್ರ ಕಡಲ ಅಲೆಗಳು :

ವಿಟ್ಠಲ ಶೆಣೈ

ರಾಮಸಿಂಗನ ಶೌರ್ಯ : ಕಾದಂಬರೀ ಪ್ರಕಾಶನ, ಗಂಗೊಳ್ಳಿ (ದ.ಕ.) : ಪು. ೧೫೩.

ವೀರಭದ್ರಪ್ಪ (ಕುಂ)

೧. ಅಸ್ತಿ : ಬಾಪ್ಕೋ ಪ್ರಕಾಶನ, ಬೆಂಗಳೂರು ; ಪು. ೧೬೭.

೨. ಬೇಲಿ ಮತ್ತು ಹೊಲ : ಭಾಗ್ಯಲಕ್ಷ್ಮಿ ಪ್ರಕಾಶನ, ಬೆಂಗಳೂರಂ ; ಪು. ೮ + ೯೬.

ಮೊಗಸಾಲೆ (ನಾ)

ನೆಲಮುಗಿಲುಗಳ ಮಧ್ಯೆ ; ಭಾಗ್ಯಲಕ್ಷ್ಮಿ ಪ್ರಕಾಶನ, ಬೆಂಗಳೂರು ; ಪು. ೮ + ೧೦೪.

ಶಾಂತಲಾ ಯೋಗೀಶ, ಯಡ್ರಾವಿ

ಜಾಣರ ದೇವ : ವಾಗ್ದೇವಿ ಪುಸ್ತಕಗಳು, ಮೈಸೂರು ; ಪು. ೨೬೨ + ೮.

ಶಾಂತಿನಾಥ ದೇಸಾಯಿ

ಬೀಜ : ಪ್ರಿಂಟರ್ಸ್ ಪ್ರಕಾಶನ, ಬೆಂಗಳೂರು ; ಪು, ೭೫೯.

ಶಾಮಸುಂದರ (ಬಿ)

ಅಂಚೆಯಿಂದ ಬಂದದ್ದು : ಚೌಧುರಿ ಪಬ್ಲಿಕೇಶನ್ಸ್, ಮೈಸೂರು ; ಪು. ೭೪.

ಶಿವರಾಮ ಕಾರಂತ

ನಷ್ಟ ದಿಗ್ಗಜಗಳು : ರಾಜಲಕ್ಷ್ಮೀ ಪ್ರಕಾಶನ, ಬೆಂಗಳೂರು ; ಪು. ೩೪೦.

ಶೇಷ ನಾರಾಯಣ

ಬೀಸು : ಗೀತಾ ಬುಕ್ ಹೌಸ್, ಮೈಸೂರು ; ಪು. ೪೮೬.

ಸರ್ ಆರ್ಥರ್ ಕಾನನ್ ಡಾಯ್ಲ್

ಅನು : ವಾಸುದೇವ ರಾವ್

೧. ಷರ್ಲಾಕ್ ಹೋಮ್ಸ್ಸರ ನಾಲ್ವರ ಸಂಕೇತ ; ಪ್ರಿಂಟರ್ಸ್ ಪ್ರಕಾಶನ, ಬೆಂಗಳೂರು ; ಪು. ೧೪೪.

೨. ಬ್ಯಾಸ್ಕರ್ ವಿಲ್ಲಿಯ ಬೇಟೆನಾಯಿ : ಐ. ಬಿ. ಎಚ್. ಪ್ರಕಾಶನ, ಬೆಂಗಳೂರು ; ಪು. ೧೮೮.

ಸುನೀತಿ ಕೃಷ್ಣಸ್ವಾಮಿ

ಮೃಗಜಲ : ಪಲ್ಲವಿ ಪ್ರಕಾಶನ, ಬೆಂಗಳೂರು ; ಪು. ೪+೨೦೦.

ಸುನೀತಾ ರಾವ್

ನೀ ಬರುವ ದಾರಿಯಲಿ : ಕದಂಬ ಪ್ರಕಾಶನ, ಬೆಂಗಳೂರು ; ಪು. ೫೪.

## ವಿಮರ್ಶೆ

ಅನಂತರಾಮನ್ (ಮು.ನ.)

ಕನ್ನಡ ಕಾವ್ಯಗಳಲ್ಲಿ ನವರಸಗಳು : ಮು. ನ. ಅನಂತರಾಮನ್, ಬೆಂಗಳೂರು ; ಪು. ೧೦+೧೩೨.

ಅನಂತರಂಗಾಚಾರ್ (ಎನ್.)

ರಾಮಾಯಣ ಭಾರತಿ : ಸ್ವಚ್ಛಂದ ಪ್ರಕಾಶನ, ಮೈಸೂರು ; ಪು. ೧೭೬.

ಆಮೂರ (ಜಿ. ಎಸ್.)

ಕನ್ನಡ ಕಾದಂಬರಿಯ ಬೆಳವಣಿಗೆ : ಪ್ರಸಾರಾಂಗ, ಬೆಂ.ವಿ.ವಿ., ಬೆಂಗಳೂರು ; ಪು. ೫೪.

ಆರ್ವಿಯಸ್ ಸುಂದರಂ

ಪಾಲ್ಕುರಿಕೆ ಸೋಮನಾಥ : ಪ್ರಸಾರಾಂಗ, ಮೈ.ವಿ.ವಿ.ನಿ., ಮೈಸೂರು ; ಪು. ೫೧.

ಇನಾಂದಾರ್ (ವಿ. ಎಂ.)

ಬಿ. ಎಂ. ಶ್ರೀ : ಬದುಕು ಬರೆಹ : ಉಷಾ ಸಾಹಿತ್ಯ ಮಾಲೆ, ಮೈಸೂರು ; ಪು.೪+೧೧೫.

ಕಯ್ಯಾರ ಕಿಞ್ಞಣ್ಣ ರೈ

ಗೋವಿಂದಪೈ-(ಸ್ಮೃತಿ–ಕೃತಿ) ; ಮಂಗಳೂರು ವಿಶ್ವವಿದ್ಯಾನಿಲಯ, ಮಂಗಳೂರು : ಪು. ೯+೧೮೯.

ಕೃಷ್ಣಕುಮಾರ್. (ಸಿ. ಪಿ.)

1. ಪರಿವೀಕ್ಷಣ : ಚಿತ್ರಭಾನು ಪ್ರಕಾಶನ, ಮೈಸೂರು ; ಪು. ೪ + ೧೪೮
2. ಶ್ರೀ ರಾಮಾಯಣ ದರ್ಶನಂ : ಪ್ರಸಾರಾಂಗ ಮೈ.ವಿ.ವಿ.ನಿ, ಮೈಸೂರು ; ಪು. ೬೬

ಕೃಷ್ಣಶೆಟ್ಟಿ (ವಿ.)

ಉಪಮಾ ಸರಸ್ಸು : ಶ್ರೀ ಕೃಷ್ಣ ಕೃಪ ಪ್ರಕಟಣಾಲಯ, ಬೆಂಗಳೂರು ; ಪು ೧೫ + ೧೬೮

ಜಯರಾಂ (ಎ.ಎಸ್.) ಸಂ.

ಹತ್ತೊಂಬತ್ತನೆಯ ಶತಮಾನದ ಕನ್ನಡ ಸಾಹಿತ್ಯ ಚರಿತ್ರೆ : ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು ; ಪು. ೧೪೯.

ಗೌರೀಶಕಾಯ್ಕಿಣಿ (ಸಂ)

ಸ್ವಾತಂತ್ರ್ಯೋತ್ತರ ವಿಚಾರ ಸಾಹಿತ್ಯ ; ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ಪು. ೬ + ೮೯

ತಾಳ್ತಜೆ ವಸಂತಕುಮಾರ

ಸಿಂಗಾರ : ಕನ್ನಡ ಸಂಘ, ವಿವೇಕಾನಂದ ಕಾಲೇಜು, ಪುತ್ತೂರು ; ಪು ೮ + ೧೦೧

ತಿಪ್ಪೇರುದ್ರಸ್ವಾಮಿ (ಹೆಚ್.)

ಕನ್ನಡದಲ್ಲಿ ಕೈವಲ್ಯ ಸಾಹಿತ್ಯ ; ಚಿತ್ತರಗಿ ಶ್ರೀ ವಿಜಯ ಮಹಾಂತೇಶ್ವರ ಧರ್ಮ ಪ್ರಸಾರಕ ಮಂಡಲ, ಇಲಕಲ್ಲ : ಪು. ೧೪೮

ದೇಜಗೌ

ಶರಣಪಥ : ಶ್ರೀ ಜಗದ್ಗುರು ಗಂಗಾಧರ ಧರ್ಮ ಪ್ರಚಾರಕ ಮಂಡಳ, ಮೂರು ಸಾವಿರಮಠ, ಹುಬ್ಬಳ್ಳಿ ; ಪು. ೧೫೯

ನಾಗಭೂಷಣಸ್ವಾಮಿ, (ಓ. ಎಲ್.)

ವಿಮರ್ಶೆಯ ಪರಿಭಾಷೆ : ಪರಿಸರ ಸಾಹಿತ್ಯ ಪ್ರಕಾಶನ, ಶಿವಮೊಗ್ಗ ; ಪು. ೩೯೮.

ನಾಗರಾಜ್ (ಡಿ. ಆರ್.)

ಅಮೃತ ಮತ್ತು ಗರುಡ : ಪುಸ್ತಕ ಚಂದನ, ಬೆಂಗಳೂರು ; ಪು. ೮ + ೧೯೨

ನಾಯಕ. (ಹಾ. ಮ.) ಸಂ.

ಗೋವಿಂದ ಪೈ : ಕ. ಅ. ಸಂಸ್ಥೆ, ಮೈ. ವಿ. ವಿ. ನಿ., ಮೈಸೂರು ; ಪು. ೮ + ೨೦೬

ಮನಜ

ಪ್ರತಿಪಾದನೆ : ಸಿದ್ಧಾರ್ಥ ಗ್ರಂಥಮಾಲೆ, ಮೈಸೂರು : ಪು. ೮ + ೧೧೨

ಮೂರ್ತಿರಾವ್ (ಎ.ಎನ್.)
ರಂಗಣ್ಣ (ಎಸ್.ವಿ.)
ಬಿಳಿಗಿರಿ (ಎಚ್.ಎಸ್.)

ಸಾಹಿತ್ಯ ಮತ್ತು ಸತ್ಯ ; ಶಬ್ದ ಮತ್ತು ಅರ್ಥ ; ಗಮಕ ಸಮಾಸವು ಸಮಾಸವೇ ? : ಬಿ.ಎಂ. ಶ್ರೀ ಸ್ಮಾರಕ ಪ್ರತಿಷ್ಠಾನ, ಬೆಂಗಳೂರು : ಪು. ೧೦೨

ಮಿತ್ರ (ಅ.ರಾ.)

ಕೈಲಾಸಂ ; ಪ್ರಸಾರಾಂಗ, ಬೆಂ. ವಿ. ವಿ., ಬೆಂಗಳೂರು ; ಪು. ೧೬ + ೯೬

ರಾಮೇಗೌಡ
    ದುರ್ಗಸಿಂಹ : ಪ್ರಸಾರಾಂಗ, ಮೈ ವಿ.ವಿ.ನಿ., ಮೈಸೂರು, ಪು. ೭೫.
ವಿಜಯಾ (ಸಂ).
    ಪರ್ವ ಒಂದು ಸಮೀಕ್ಷೆ; ಸ್ನೇಹವಲಯ, ಇಳಾ ಪ್ರಕಾಶನ, ಬೆಂಗಳೂರು ;
    ಪು. ೧೧+೧೦೭
ವೆಂಕಟೇಶಮೂರ್ತಿ (ಎಚ್. ಎಸ್.)
    ನೂರು ಮರ ನೂರು ಸ್ವರ ; ಕೃತಿ, ಬೆಂಗಳೂರು : ಪು. ೧೪೧
ವೆಂಕಟೇಶಮೂರ್ತಿ (ಎಚ್. ಎಸ್.)
ರಾಘವೇಂದ್ರ ಪಾಟೀಲ } ಸಂ.
    ಹೊಸ ಕಾವ್ಯದ ಮುನ್ನೆಲೆ-೨ ; ಸುಂದರ ಪುಸ್ತಕ ಪ್ರಕಾಶನ, ಧಾರವಾಡ ; ಪು. ೧೦೪
ವೇಣುಗೋಪಾಲರಾವ್ (ಎ. ಎಸ್.)
    ಕನ್ನಡ ಸಾಹಿತ್ಯದ ಭಾಗವತ ಕವಿಗಳು ; ಪ್ರಸಾರಾಂಗ, ಮೈ. ವಿ. ವಿ. ನಿ.,
    ಮೈಸೂರು ; ಪು ೪೮
ವೃಷಭೇಂದ್ರಸ್ವಾಮಿ (ಎಸ್.ಎಂ.) ಮತ್ತು ಇತರರು
    ಬಸವ ಮತ್ತು ದಲಿತೋದಯ : ಬಸವ ಸಮಿತಿ, ಬೆಂಗಳೂರು ; ಪು. ೧೯೯+೪
ಶಿವರುದ್ರಪ್ಪ. (ಜಿ. ಎಸ್.)
    ಕಾವ್ಯಾರ್ಥ ಚಿಂತನ ; ಶಾರದಾ ಪ್ರಕಾಶನ, ಬೆಂಗಳರು ಪು. ೮+೨೬೪
ಶಿವರುದ್ರಪ್ಪ (ಜಿ.ಎಸ್.) ಸಂ.
    ಕಾದಂಬರಿಕಾರರಾಗಿ ಕಾರಂತ : ಕ.ಅ. ಕೇಂದ್ರ, ಪ್ರಸಾರಾಂಗ, ಬೆಂ.ವಿ.ವಿ., ಬೆಂಗಳೂರು ;
ಸಣ್ಣಯ್ಯ (ಬಿ. ಎಸ್.)
    ಬಂಧುವರ್ಮ : ಪ್ರಸಾರಾಂಗ, ಮೈ.ವಿ.ವಿ.ನಿ. ಮೈಸೂರು ; ಪು. ೬೮
ಹಂಪ ನಾಗರಾಜಯ್ಯ (ಸಂ)
    ಚಾಮರಸ ವಿಚಾರ ಸಂಕಿರಣ ; ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ; ಪು. ೬+೧೧೯
ಹೊಸಬೆಟ್ಟು ಸೀತಾರಾಮ ಆಚಾರ್ಯ
    ಕುಮಾರ ವಾಲ್ಮೀಕಿ : ಪ್ರಸಾರಾಂಗ, ಮೈ.ವಿ.ವಿ.ನಿ. ಮೈಸೂರು ; ಪು. ೭೨

## ಜೀವನ ಚರಿತ್ರೆ-ಪ್ರಬಂಧ

ಕೃಷ್ಣಮೂರ್ತಿ (ಎಸ್.)
    ಸಂಗೀತಕಳಾನಿಧಿ : ಕಾವ್ಯಾಲಯ, ಮೈಸೂರು ; ಪು. ೧೫೫
ಕೃಷ್ಣಕುಮಾರ್ (ಸಿ.ಪಿ.)
    ಓರಿಯುರ ಗೆರೆಗಳು : ಚಿತ್ರಭಾನು ಪ್ರಕಾಶನ, ಮೈಸೂರು ; ಪು. ೬೦
ಚನ್ನಪ್ಪ (ಎಸ್.)
    ಕಾರಂತ ಹಕ್ಕಿನೋಟ : ಅರ್ಕಾವತಿ ಪ್ರಕಾಶನ, ಮೈಸೂರು ; ಪು. ೨೦

ಜ್ಯೋತಿ ಹೊಸೂರ

ಕನಕದಾಸ ಜೀವನವಿಚಾರ : ಕಾಲಗತಿ ಪ್ರಕಾಶನ, ರಾಯಬಾಗ ; ಪು. ೯೮

ನಾಯಕ (ಹಾ.ಮಾ.) ಸಂ.

ಆಲೂರು ವೆಂಕಟರಾಯರು : ಕ.ಅ. ಸಂಸ್ಥೆ, ಮೈ.ವಿ.ವಿ.ನಿ. ಮೈಸೂರು ; ಪು. ೮+೮೪

ಮಲ್ಲಾಪುರ (ಬಿ.ವ್ಹಿ.)

ಪುರಾಣಿಕ ಬುದ್ಧಯ್ಯನವರು ; ವೀರಶೈವ ಅಧ್ಯಯನ ಸಂಸ್ಥೆ, ಗದಗ ; ಪು. ೭೫

ಮಲ್ಲಿಕಾರ್ಜುನ ಮನ್ಸೂರ

ನನ್ನ ರಸಯಾತ್ರೆ : ನಿವೇದಿತಾ ಪ್ರಕಾಶನ, ಮೈಸೂರು ; ಪು. ೧೧೮

ಮರಿಶಾಮಾಚಾರ್ (ಎನ್.)

ಸೃಜನಶೀಲರು : ಹರೀಶ ಪ್ರಕಾಶನ, ಬೆಂಗಳೂರು ; ಪು. ೭೩

ಮರಿಶಾಮಾಚಾರ್ (ಎನ್.)

ಹೆಬ್ಬಾರ್ : ಸಿ.ಎಂ.ಎನ್. ಪ್ರಕಾಶನ, ಬೆಂಗಳೂರು ; ಪು. ೬೬

ರಾಜೇಗೌಡ (ಹ.ಕ.) ಸಂ.

ಮಹಾಕವಿಗೆ-ನುಡಿನಮನ : ತ.ವೆಂ. ಸ್ಮಾರಕ ಗ್ರಂಥಮಾಲೆ, ಮೈಸೂರು ; ಪು. ೧೩೬

ವರದರಾಜರಾವ್ (ಜಿ.)

ಪುರಂದರದಾಸರು : ಸಾಹಿತ್ಯ ಅಕಾಡೆಮಿ, ಹೊಸ ದೆಹಲಿ ; ಪು. ೬೦

ಶಾಂತವೀರಯ್ಯ (ಹಿೀ.ಚಿ.)

ದಾನಶೂರ ಕಂಬಿ ಸಿದ್ಧರಾಮಣ್ಣನವರು ; ವೀರಶೈವ ಅಧ್ಯಯನ ಸಂಸ್ಥೆ, ಗದಗ, ಪು. ೪೨

ಶಿವಲಿಂಗಮ್ಮ ಕಟ್ಟಿ

ಇಂದಿನ ಶಿವಶರಣೆಯರು : ಮೂರು ಸಾವಿರ ಮಠ, ಹುಬ್ಬಳ್ಳಿ ; ಪು. ೩೬೮

ಶೇಷಗಿರಿರಾವ್ (ಡಿ.ವಿ.)

ಡಾ. ಡಿ. ವಿ. ಗುಂಡಪ್ಪ : ಐ.ಬಿ.ಎಚ್. ಪ್ರಕಾಶನ, ಬೆಂಗಳೂರು ; ಪು. ೧೫೧

ಸುಂಕಾಪುರ (ಎಂ.ಎಸ್.)

ಎಂ.ಆರ್. ಸಾಖರೆಯವರು : ವೀರಶೈವ ಅಧ್ಯಯನ ಸಂಸ್ಥೆ, ಗದಗ ; ಪು. ೪೯

ಸುಬ್ರಹ್ಮಣ್ಯಂ (ಸೂ)

ಎನ್.ಎಸ್. ಹರ್ಡೀಕರ್ : ಪ್ರಸಾರಾಂಗ, ಬೆಂ.ವಿ.ವಿ. ಬೆಂಗಳೂರು : ಪು. ೧೧೦+೧೨

ಸೂರ್ಯನಾಥ ಕಾಮತ್

ಶಿರೂರ ವೀರಭದ್ರಪ್ಪನವರು : ವೀರಶೈವ ಅಧ್ಯಯನ ಸಂಸ್ಥೆ, ಗದಗ ; ಪು. ೪೯

ಜವರೇಗೌಡ (ದೇ.) [ದೇಜಗೌ]

ತೆನೆ : ಬಾಪ್ಕೋ ಪ್ರಕಾಶನ, ಬೆಂಗಳೂರು, ಪು. ೮+೧೫೮

ಫಿಲೋಮಿನ (ಹೆಚ್.ಪಿ.)

ದೌರ್ಜನ್ಯದ ದಳ್ಳುರಿ : ಕನಕ ಪ್ರಕಾಶನ, ಬೆಂಗಳೂರು ; ಪು. ೮+೮೮

ಶ್ರೀಶೈಲ ಆರಾಧ್ಯ

ಸೀಮೆಗಿಲ್ಲದೆ ವೀರಸೂರಿನ ಕೆಳಗೆ : ಆರೋಹಣ ಪ್ರಕಾಶನ, ಚಿತ್ರದುರ್ಗ ಪು. ೨೪+೮೦

## ಪ್ರವಾಸ ಸಾಹಿತ್ಯ–ಅಭಿನಂದನ ಗ್ರಂಥ

ದೇನಾಶ್ರೀ
ಗಿರಿಕಂದರ ಮೋಹಿತರು : ಸ್ಪಾರ್ಕ್, ಬೆಂಗಳೂರು ; ಪು. ೧೭೪

ರಂಜನ ಭಟ್ಟ
ಕುಬೇರ ರಾಜ್ಯದ ಚಿತ್ರ ವಿಚಿತ್ರ : ಗೀತಾ ಬುಕ್ ಹೌಸ್; ಮೈಸೂರು ಪು. ೩೬೫

ಬಸವರಾಜ ಮಲಶೆಟ್ಟಿ (ಸಂ)
ಇಂಚರ : ಶ್ರೀ ಜ. ಕೊಟ್ಟೂರುಸ್ವಾಮಿ ಮಠ, ಹೊಸಪೇಟೆ, ಪು. ೨೫೨

ನಾಯಕ (ಹಾ.ಮಾ.) ಸಂ.
ಸ್ವಸ್ತಿ : ತ. ವೆಂ. ಸ್ಮಾರಕ ಗ್ರಂಥಮಾಲೆ, ಮೈಸೂರು ; ಪು. ೧೬+೯೬೨

ಶ್ರೀವತ್ಸ, ಅನಂತಪದ್ಮನಾಭರಾವ್, ಎಚ್. ಎಂ. ರಂಗನಾಥ್ (ಸಂ.)
ಆಸ್ವಾದ : ಉದಯಭಾನು ಕಲಾಸಂಘ, ಬೆಂಗಳೂರು; ಪು. ೬೩೬+೧೨

## ಸಂಪಾದಿತ ಕೃತಿಗಳು–ನಿಘಂಟು

ಕುಶಾಲಪ್ಪಗೌಡ ಕೆ., ಚನ್ನಪ್ಪಗೌಡ ಕೆ. (ಸಂ.)
ದಕ್ಷಿಣ ಕನ್ನಡ ಜಿಲ್ಲೆಯ ಕೈಫಿಯತ್ತುಗಳು : ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಪುಸ್ತಕ ಪ್ರಕಾಶನಮಾಲೆ, ಉಜಿರೆ : ಪು. ೨೭೨

ಬಸವಾರಾಧ್ಯ (ಎನ್.) ಸಂ.
ಕರಿಸಿದ್ಧೇಂದ್ರ ಮತ್ತು ನನ್ನಪ್ಪದೇವ ವಿರಚಿತ ನವ ಮುಗ್ಧಲೀಲೆ : ಕ.ಅ. ಸಂಸ್ಥೆ. ಮೈ.ವಿ.ವಿ.ನಿ., ಮೈಸೂರು; ಪು. ೩೦+೮೪

ಮಹೀಶವಾಡಿ (ಬಿ.ಬಿ.) ಪಾಟೀಲ (ಎಸ್.ಪಿ.) ಸಂ.
ಕವಿನೇಮಿವೃತಿ ವಿರಚಿತ ಸುವಿಚಾರ ಚರಿತೆ: ಪ್ರಸಾರಾಂಗ, ಕ.ವಿ.ವಿ. ಧಾರವಾಡ, ಪು. ೫೨

ಮಂಜುನಾಥನ್ (ಜಿ.ಜಿ.) ಸಂ.
ಅಳಿಯಲಿಂಗರಾಜ ವಿರಚಿತ ಗಿರಿಜಾ ಕಲ್ಯಾಣಗಳು; ಕ.ಅ. ಸಂಸ್ಥೆ, ಮೈ.ವಿ.ವಿ.ನಿ. ಮೈಸೂರು ಪು. ೪೨+೧೧೨

ಲಕ್ಷ್ಮೀನಾರಾಯಣಭಟ್ಟ. (ಎನ್. ಎಸ್.) ಸಂ.
ತಿಮ್ಮಪ್ಪದಾಸವಿರಚಿತ ಧ್ರುವಚರಿತ್ರೆ: ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ಬೆಂಗಳೂರು ; ಪು. ೧೭೬.

ಮುತ್ತಣ್ಣ (ಐ. ಮಾ.)
ಕೊಡವ ಕನ್ನಡ ನಿಘಂಟು : ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು; ಪು. ೫+೧೮೫

## ಸಂಶೋಧನೆ

ಅಕಬರಅಲಿ (ಎಂ.)
ಸರ್ವಜ್ಞನ ಸಮಾಜದರ್ಶನ ಮತ್ತು ಸಾಹಿತ್ಯ ಸತ್ವ : ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ; ಪು. ೧೫+೨೭೨

ಜವಳಿ (ಬಿ. ಸಿ.)
ಹರಿಹರಕವಿಯ ಸ್ತ್ರೀಪಾತ್ರದರ್ಶನ : ಪ್ರಸಾರಾಂಗ, ಕ.ವಿ.ವಿ., ಧಾರವಾಡ ; ಪು. ೩೦೦

ನಾರಾಯಣ (ಪಿ. ವಿ.)
ವಚನ ಸಾಹಿತ್ಯ ಒಂದು ಸಾಂಸ್ಕೃತಿಕ ಅಧ್ಯಯನ : ವೀರಶೈವ ಅಧ್ಯಯನ ಸಂಸ್ಥೆ, ಗದಗ ; ಪು. ೧೦ + ೫೫೬.

ಬಸವರಾಜ ಮಲಶೆಟ್ಟಿ
ಉತ್ತರಕರ್ನಾಟಕದ ಬಯಲಾಟಗಳು : ಪ್ರಸಾರಾಂಗ, ಕ.ವಿ.ವಿ., ಧಾರವಾಡ ; ಪು. ೮ + ೨೦೦

ಭೀಮರಾವ್ ಚಿಟಗುಪ್ಪಿ
ಇಮ್ಮಡಿ ನಾಗವರ್ಮ : ಭಾರದ್ವಾಜ ಪ್ರಕಾಶನ, ಕದಿರೆ ; ಪು. ೨೦೦.

ಮರುಳಸಿದ್ದಪ್ಪ. ಕೆ.
ಆಧುನಿಕ ಕನ್ನಡ ನಾಟಕ : ಪ್ರಿಂಟರ್ಸ್ ಪ್ರಕಾಶನ, ಬೆಂಗಳೂರು ; ಪು. ೫೦೩.

ಮಾಳಿ (ಎಚ್. ಬಿ)
ಮಹಾಂತ ಜೋಳಿಗೆಯ ಫಲಶ್ರುತಿ : ಚಿತ್ತರಗಿ ಶ್ರೀ ವಿಜಯ ಮಹಾಂತೇಶ್ವರ ಧರ್ಮ ಪ್ರಸಾರಕ ಮಂಡಲಿ, ಇಲಕಲ್ಲ ; ಪು. ೮೦.

ವಿಜಯಾದಬ್ಬೆ
ನಾಗಚಂದ್ರ–ಒಂದು ಅಧ್ಯಯನ : ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ; ಪು. ೧೦ + ೩೩೬.

ಶಿವರುದ್ರಪ್ಪ (ಜಿ. ಎಸ್.) ಸಂ.
ಶ್ರವಣಬೆಳಗೊಳ-ಒಂದು ಸಮೀಕ್ಷೆ ; ಪ್ರಸಾರಾಂಗ, ಬೆಂ.ವಿ.ವಿ.; ಬೆಂಗಳೂರು; ಪು. ೧೨ + ೧೫೬.

ಶ್ರೀಶೈಲ ಆರಾಧ್ಯ (ಎಚ್)
ಸಂಶೋಧನೆಯ ಹಾದಿಯಲ್ಲಿ : ಆರೋಹಣ ಪ್ರಕಾಶನ, ಚಿತ್ರದುರ್ಗ ; ಪು. ೧೪೦.

ಶ್ರೀಕಂಠಯ್ಯ (ಕೆ.)
ವಿಜಯನಗರ ಕಾಲದ ಕನ್ನಡ ಸಾಹಿತ್ಯದಲ್ಲಿ ಜನಜೀವನ ಚಿತ್ರ : ಗೀತಾಬುಕ್‌ಹೌಸ್, ಮೈಸೂರು, ಪು. ೫೦೮.

## ಜಾನಪದ

ಉಮಾಪತಿ (ಕೆ. ಎಸ್.)
ವಿದೇಶೀ ಗಾದೆಗಳು : ರಂಜನ ಪ್ರಕಾಶನ, ಮೈಸೂರು ; ಪು. ೧೦ + ೪೮.

ಚನ್ನಣ್ಣವಾಲೀಕಾರ (ಸಂ)
ಗುಲ್ಬರ್ಗ ಜಿಲ್ಲೆಯ ಮೊಹರ‍್ರಂ ಪದಗಳು : ಕ.ಅ.ಸಂಸ್ಥೆ, ಮೈ.ವಿ.ವಿ.ನಿ., ಮೈಸೂರು ; ಪು. ೧೬ + ೧೯೪.

ಚೆಲುವೇಗೌಡ (ತ. ಚಿ.)
ಮುಂಗೋಳಿ : ತಳಗವಾದಿ ಪ್ರಕಾಶನ, ಮೈಸೂರು ; ಪು. ೧೪ + ೧೨೮.

ಶಿವ್ಪೇರುದ್ರಸ್ವಾಮಿ (ಎಚ್.) ಪ್ರ.ಸಂ.
ಮಲೆನಾಡ ಜಾನಪದ : ಕನ್ನಡ ವಿಭಾಗೆ, ಮೈ.ವಿ.ವಿ.ನಿ., ಬಿ.ಆರ್. ಪ್ರಾಜೆಕ್ಟ್ ;
ಮೈಸೂರು ; ಪು. ೮ + ೨೬೨.

ದೇವೇಂದ್ರಂಕುಮಾರ ಹಕಾರಿ
ಜಾನಪದ ಸಮ್ಮುಖ ; ಮೂರುಸಾವಿರ ಮಠ, ಹುಬ್ಬಳ್ಳಿ ; ಪು. ೬೩.

ದೇವೇಂದ್ರಕುಮಾರ ಹಕಾರಿ
ಜಾನಪದದ ಮೂಲಭೂತ ತತ್ವಗಳು ; ಮೂರುಸಾವಿರಮಠ, ಹುಬ್ಬಳ್ಳಿ ಪು. ೧೨ + ೧೧೨

ನಾಯಕ್ (ಎನ್. ಆರ್.) ಸಂ
ಕೂಸಾಯ್ತು ನಮ್ಮ ಕೊಮಾರಗೆ : ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.
ಪು. ೪೫ + ೪೩೦.

ರಾಮಚಂದ್ರರಾವ್ (ಎಸ್. ಕೆ.)
ಅಪ್ಪಣ್ಣದೈವ ; ಶಾರದಾ ಪ್ರಕಾಶನ, ಬೆಂಗಳೂರು ; ಪು. ೧೨೦.

ಲಕ್ಕಪ್ಪಗೌಡ (ಎಸ್. ಜೆ.) ಸಂ.
ಮಲೆನಾಡು ಜಾನಪದ, ಕನ್ನಡ ವಿಭಾಗ, ಮೈ ವಿ.ವಿ.ನಿ., ಬಿ.ಆರ್. ಪ್ರಾಜೆಕ್ಟ್,
ಮೈಸೂರು, ಪು. ೨೬೧.

ವಿಶ್ವೇಶ್ವರಪ್ಪ (ಜಿ) ಸಂ.
ಚಿತ್ರದುರ್ಗ ಜಿಲ್ಲೆಯ ಜನಪದ ಕಥೆಗಳು : ಕ.ಅ.ಸಂಸ್ಥೆ,
ಮೈ.ವಿ.ವಿ.ನಿ., ಮೈಸೂರು, ಪು. ೧೨ + ೪೦೦.

ಸಾಹಿತ್ಯಾನಂದ (ಸಂ)
ಭದ್ರೇರು ಹಸೆಯ ಬರೆದಾರೆ : ನಿವೇದಿತ ಪ್ರಕಾಶನ, ಬೆಂಗಳೂರು, ಪು. ೬೨.

ಹೆಗಡೆ (ಎಲ್. ಆರ್.) ಸಂ.
ಮಲೆನಾಡ ಸೆರಗಿನ ಕಥೆಗಳು : ಕ.ಅ.ಸಂಸ್ಥೆ, ಮೈ.ವಿ.ವಿ.ನಿ., ಮೈಸೂರು ;
ಪು. ೧೨ + ೧೮೬.

## ಸಂಕೀರ್ಣ

ಗೋಪಾಲಕೃಷ್ಣ ಅಡಿಗ (ಎಂ)
ಅಡಿಗರ ಲೇಖನಗಳು ಮತ್ತು ಮುನ್ನುಡಿಗಳು ; ಪ್ರಿಂಟರ್ಸ್ ಪ್ರಕಾಶನ, ಬೆಂಗಳೂರು.
ಪು. ೧೬೬.

ದೇವೀರಪ್ಪ (ಎಚ್)
ಚೆನ್ನಪ್ಪ ಎರೆಸೀಮೆ } ಸಂ.

ಮಹಾನುಭಾವಿ ಶ್ರೀ ಚನ್ನಮಲ್ಲಿಕಾರ್ಜುನರು : ಮೂರುಸಾವಿರಮಠ, ಹುಬ್ಬಳ್ಳಿ ; ಪು. ೯೨೮ + ೧೨ + ೧೩.

ನಾಯಕ (ಹಾ. ಮಾ.) ಪ್ರ. ಸಂ

1. ಕನ್ನಡ ವಿಶ್ವಕೋಶ (ಸಂ) ೧೧ : ಕ.ಅ. ಸಂಸ್ಥೆ, ಮೈ ವಿ.ವಿ.ನಿ. ಮೈಸೂರು, ಪು. ೯೭೨
2. ಶ್ರೀಸಾಹಿತ್ಯ : ಕ. ಅ. ಸಂಸ್ಥೆ, ಮೈ ವಿ.ವಿ.ನಿ., ಮೈಸೂರು; ಪು. ೨೦ + ೮೭೨

ಬಸವರಾಜ ಮಲ್ಲಶೆಟ್ಟಿ

ಪ್ರಾಚೀನ ಕರ್ನಾಟಕದಲ್ಲಿ ನಾಟಕ ಪರಂಪರೆ : ಶ್ರೀ. ಜ. ಕೊಟ್ಟುರು ಸ್ವಾಮಿಮಠ, ಹೊಸಪೇಟೆ, ಪು. ೪೬

ವೆಂಕಟೇಶ (ಆರ್)

ವಿಚಾರ ತರಂಗ : ವಿಶ್ವಸಮಾಜ, ತಲಕಾಡು : ಪು. ೨೯೪

ವೆಂಕಟರಾಮ್ (ಎಸ್)

ದುಡಿಯುವವರದನಿ ಮತ್ತು ಇತರ ಲೇಖನಗಳು; ಪ್ರಿಂಟರ್ಸ್ ಪ್ರಕಾಶನ, ಬೆಂಗಳೂರು ಪು. ೧೯೩

ಶಿವಣ್ಣ (ಎಸ್)

ವೀರಶೈವ ಅಪ್ರಕಟಿತ ಗ್ರಂಥಸೂಚಿ: ವೀರಶೈವ ಅಧ್ಯಯನ ಸಂಸ್ಥೆ, ಗದಗ; ಪು. ೧೨೭

ಹರಿಹರಪ್ರಿಯ

ಸಾಂಸ್ಕೃತಿಕ ದಾಖಲೆಗಳು: ಬಯಲು ಸೀಮೆ ಪ್ರಕಾಶನ, ಬೆಂಗಳೂರು; ಪು. ೧೨೮

## ಮಕ್ಕಳಸಾಹಿತ್ಯ

### ಐ ಬಿ ಎಚ್ ಪ್ರಕಟಣೆಗಳು

ಅಪ್ಪಾಸ್ವಾಮಿ

ಮರೆಯಾದ ರಾಜಕುಮಾರ : ಪು. ೩೨

ಆತ್ಮಾರಾಂ. ಎಚ್

1. ಬಿಂಬಸಾರ : ಪು. ೩೨
2. ಶುನಶ್ಯೇಪ : ಪು. ೩೨

ಆತ್ಮಾರಾಂ. ಎಚ್. ಮತ್ತು ನಾಡೋಡಿ

ಕುಮನನ್ : ಪು. ೩೨

ಕಮಲಾ ಚಂದ್ರಕಾಂತ್

ಮಿತ್ರಲಾಭ ಮತ್ತು ಇತರ ಜಾತಕ ಕಥೆಗಳು : ಪು. ೩೨

೨. ವಿಮರ್ಶಾ ಲೇಖನಗಳ ಸಂಗ್ರಹಗಳು

ಅಡಿಗರ ಲೇಖನಗಳು ಮತ್ತು ಮುನ್ನುಡಿಗಳು
ಎಂ. ಗೋಪಾಲಕೃಷ್ಣ ಅಡಿಗ, ಬೆಂಗಳೂರು ಪ್ರಿಂಟರ್ಸ್ ಪ್ರಕಾಶನ, ೧೯೮೩

ಕನ್ನಡ ವಿಶ್ವಕೋಶ
ಸಂ. ೧೧. ಮೈಸೂರು. ಕ.ಅ. ಸಂಸ್ಥೆ ಮೈವಿವಿ. ೧೯೮೩

ಕಾವ್ಯಾರ್ಥ ಚಿಂತನ
ಜಿ. ಎಸ್. ಶಿವರುದ್ರಪ್ಪ, ಬೆಂಗಳೂರು. ಶಾರದಾ ಪ್ರಕಾಶನ, ೧೯೮೩

ಗೋವಿಂದ ಪೈ
ಸಂ. ಹಾ. ಮಾ. ನಾಯಕ, ಮೈಸೂರು, ಕ.ಅ. ಸಂಸ್ಥೆ ಮೈ.ವಿ.ವಿ. ೧೯೮೩

ತೆನೆ
ದೇ. ಜವರೇಗೌಡ. ಬೆಂಗಳೂರು. ಬಾಪ್ಕೊ, ೧೯೮೩

ಗೋವಿಂದ ಪೈ
ಸ್ಮೃತಿ–ಕೃತಿ ಕಯ್ಯಾರಕಿಞ್ಞಣ್ಣರೈ. ಮಂಗಳೂರು, ಮಂಗಳೂರು ವಿಶ್ವವಿದ್ಯಾಲಯ ೧೯೮೩

ದುಡಿಯುವವರ ದನಿ ಮತ್ತು ಇತರ ಲೇಖನಗಳು
ಎಸ್. ವೆಂಕಟರಾಮ್, ಬೆಂಗಳೂರು, ಪ್ರಿಂಟರ್ಸ್ ಪ್ರಕಾಶನ, ೧೯೮೩

ಪರಿವೀಕ್ಷಣ
ಸಿ. ಪಿ. ಕೃಷ್ಣಕುಮಾರ್, ಮೈಸೂರು, ಚಿತ್ರಭಾನು ಪ್ರಕಾಶನ, ೧೯೮೩

ಬಹುಮಾನಿತ ಲೇಖನಗಳು
ಬೆಂಗಳೂರು, ಕ್ರೈಸ್ಟ್ ಕಾಲೇಜು ವಿದ್ಯಾರ್ಥಿ ಸಂಘ, ೧೯೮೩

ಮಲೆನಾಡು ಜಾನಪದ
ಸಂ. ಎಚ್. ಜೆ. ಲಕ್ಕಪ್ಪಗೌಡ, ಬಿ. ಆರ್. ಪ್ರಾಜೆಕ್ಟ್ ಮೈ.ವಿವಿ ಸ್ನಾತಕೋತ್ತರ ಕನ್ನಡ ವಿಭಾಗ, ೧೯೮೩

ಮುಂಗೋಳಿ
ತ. ಚಿ. ಚೆಲುವೇಗೌಡ. ಮೈಸೂರು, ತಳಗವಾದಿ ಪ್ರಕಾಶನ, ೧೯೮೩

ರಾಮಚಂದ್ರ ಶರ್ಮರ ಅರವತ್ತು ಕವನಗಳು
ಬಿ. ಸಿ. ರಾಮಚಂದ್ರಶರ್ಮ, ಬೆಂಗಳೂರು, ಪ್ರಿಂಟರ್ಸ್ ಪ್ರಕಾಶನ, ೧೯೮೩

ವಿವೇಚನೆ
ತೆಕ್ಕುಂಜ ದಾಮೋದರ ಭಟ್ಟ.



ಶ್ರೀಸಾಹಿತ್ಯ
ಸಂ. ಹಾ. ಮಾ. ನಾಯಕ. ಮೈಸೂರು, ಮೈ.ವಿ.ವಿ. ೧೯೮೩

ಸಂಕಲನ

ಬೆಂಗಳೂರು, ಪ್ರಿಂಟರ್ಸ್ ಪ್ರಕಾಶನ, ೧೯೮೩

ಸಾಹಿತ್ಯ ಪ್ರಭ

ಕೆ. ವೆಂಕಟರಾಯಾಚಾರ್ಯ. ಸುರತ್ಕಲ್ಲು ವಿಜಯ ಸಾಹಿತ್ಯ ಮಾಲೆ, ೧೯೮೩

ಸಿಂಗಾರ

ತಾಳ್ತಜೆ ವಸಂತ ಕುಮಾರ. ಪುತ್ತೂರು ವಿವೇಕಾನಂದ ಕಾಲೇಜು ಕನ್ನಡ ಸಂಘ, ೧೯೮೩

ಹೊಸಕಾವ್ಯದ ಮುನ್ನೆಲೆ 2

ಎಚ್. ಎಸ್. ವೆಂಕಟೇಶ ಮೂರ್ತಿ ಮತ್ತು ರಾಘವೇಂದ್ರ ಪಾಟೀಲ್ ಸುಂದರ ಪ್ರಕಾಶನ, ಧಾರವಾಡ ೧೯೮೩

3. ಸಂಭಾವನಾ ಗ್ರಂಥಗಳು

ಸ್ವಸ್ತಿ (ತ. ಸು. ಶಾಮರಾಯರ ಅಭಿನಂದನ ಗ್ರಂಥ) ಮೈಸೂರು, ತ. ವೆಂ. ಸ್ಮಾರಕ ಗ್ರಂಥಮಾಲೆ, ೧೯೮೩

# ಸಾಹಿತ್ಯ ವಾರ್ಷಿಕವನ್ನು ಕುರಿತು

ಇದು ಪ್ರತಿ ವರ್ಷ ಪ್ರಕಟವಾಗುವ ಸಾಹಿತ್ಯ ಕೃತಿಗಳ ಒಂದು ವಿಮರ್ಶಾತ್ಮಕ ಸಮೀಕ್ಷೆ. ಇದು ಆಯಾ ವರ್ಷ ಪ್ರಕಟವಾಗುವ ಪುಸ್ತಕಗಳನ್ನು ಪಟ್ಟಿಮಾಡುವ ಅಥವಾ ವಿವರಣಾತ್ಮಕ ಸೂಚಿಯನ್ನು ಸಿದ್ಧಪಡಿಸುವ ಪ್ರಾಥಮಿಕ ನೆಲೆಯಲ್ಲಿ ಪರ್ಯವಸಾನವಾಗುವ ರೂಪದ್ದಲ್ಲ; ಆಯಾ ವರ್ಷದ ಸಾಹಿತ್ಯ ಕೃತಿಗಳನ್ನು ಸಮೀಕ್ಷಿಸುವ ಸ್ವರೂಪದ್ದು.

ಇದು ಸುಲಭವಾದ ಕಾರ್ಯವೇನಲ್ಲ. ಬಹು ಸಂಖ್ಯೆಯಲ್ಲಿ ವರ್ಷ ವರ್ಷವೂ ಪ್ರಕಟವಾಗುವ ಸಾಹಿತ್ಯ ಕೃತಿಗಳ ಜಾಡು ಹಿಡಿದು ಗುರುತಿಸುವುದು, ಅನಂತರ ಅವುಗಳನ್ನೆಲ್ಲ ಒಂದೆಡೆ ಕೂಡಿಸಿಕೊಳ್ಳುವುದು ಮೊದಲನೆಯ ಕಷ್ಟ. ಅವುಗಳನ್ನು, ತೀರಾ ಮುಖಾ ಮುಖಿಯಾಗಿ ನಿಂತು ವಿಮರ್ಶಿಸುವುದು ಎರಡನೆಯ ಕಷ್ಟ. ಆದರೂ ಅಗತ್ಯವಾಗಿ ಮಾಡಬೇಕಾಗುವ ಕಾರ್ಯ; ತಪ್ಪೋ ಒಪ್ಪೋ ಯಾರಾದರೂ ಮಾಡಲೇಬೇಕಾದ ಕಾರ್ಯ, ಅದನ್ನು ನಾವು ಮಾಡಲು ಹೊರಟಿದ್ದೇವೆ. ನಾವು ಹೊರಟಿರುವ ಉದ್ದೇಶ ಒಳ್ಳೆಯದು, ಪ್ರಯತ್ನ ಪ್ರಾಮಾಣಿಕವಾದದ್ದು-ಎಂಬುದೇ ನಮ್ಮ ಬೆಂಬಲಕ್ಕಿರುವ ಧೈರ್ಯ.

ನಾಳೆ, ಕನ್ನಡದಲ್ಲಿ ಯಾವುದೇ ಒಂದು ಸಾಹಿತ್ಯಪ್ರಕಾರವನ್ನು ಕುರಿತು ಕೆಲಸ ಮಾಡಲು ತೊಡಗುವವರಿಗೆ ಈ 'ಸಾಹಿತ್ಯ ವಾರ್ಷಿಕ' ಗಳಿಂದಾಗುವ ಪ್ರಯೋಜನ ಅಷ್ಟಿಷ್ಟಲ್ಲ. ಯಾವ ಯಾವ ವರ್ಷ ಕನ್ನಡದಲ್ಲಿ ಏನೇನು ಕೃತಿಗಳು ಪ್ರಕಟವಾಗಿವೆ, ಸಾಹಿತ್ಯದ ಯಾವ ಯಾವ ಪ್ರಕಾರಗಳಲ್ಲಿ ಏನೇನು ಕೆಲಸ ನಡೆದಿದೆ, ಯಾವ ದೃಷ್ಟಿ-ಧೋರಣೆಗಳು ಅವುಗಳ ಹಿನ್ನೆಲೆಗಿವೆ ಎಂಬುದು ನಾಳಿನ ವಿಮರ್ಶಕರಿಗೆ ಹಾಗೂ ಸಂಶೋಧಕರಿಗೆ ಮೂಲಭೂತ ಸಾಮಗ್ರಿಯಾಗಿ ಇದರಿಂದ ಒದಗುತ್ತದೆ. ಹಾಗೆಯೇ ಪ್ರತಿಯೊಂದು ವರ್ಷದ ಸಾಹಿತ್ಯದ ಸಾಧನೆಗಳನ್ನು ತೌಲನಿಕವಾಗಿ ಅಧ್ಯಯನ ಮಾಡುವವರ ಪಾಲಿಗೆ, ಮತ್ತು ಸಾಹಿತ್ಯ ಚರಿತ್ರೆಯ ಲೇಖಕರಿಗೆ ಇದೊಂದು ಋಣದ ಗಣಿಯಾಗುವುದರಲ್ಲಿ ಸಂದೇಹವಿಲ್ಲ.

ಲೇಖಕರ, ಪ್ರಕಾಶಕರ, ವಿಮರ್ಶಕರ, ಪತ್ರಿಕೆಗಳ ಮತ್ತು ಗ್ರಂಥ ಭಂಡಾರದ ನಿರಂತರ ಸಹಕಾರದಿಂದ ಮಾತ್ರ ಇಂಥ ಯೋಜನೆ ಯಶಸ್ವಿಯಾಗುವ ಸಾಧ್ಯತೆಗಳಿವೆ.

ಇದು ಈ ಯೋಜನೆಯಲ್ಲಿ ಪ್ರಕಟವಾಗುತ್ತಿರುವ ಹದಿಮೂರನೆಯ ಸಾಹಿತ್ಯ ವಾರ್ಷಿಕ.

ಕನ್ನಡ ವಿಮರ್ಶೆಯ ಬೆಳವಣಿಗೆಯಲ್ಲಿ ಕನ್ನಡ ಅಧ್ಯಯನ ಕೇಂದ್ರವು ಸಕ್ರಿಯವಾಗಿ ಪಾಲುಗೊಳ್ಳುವ ಒಂದು ಅವಕಾಶವನ್ನು ಈ ಯೋಜನೆ ಒದಗಿಸಿದೆ.